ಕನ್ನಡ ಹಸ್ತಪ್ರತಿಗಳ

# ವರ್ಣನಾತ್ಮಕ ಸೂಚೀ

ಏಳನೆಯ ಸಂಪುಟ



ಕನ್ನಡ ಅಧ್ಯಯನ ಸಂಸ್ಥೆ : : ಮೈಸೂರು ವಿಶ್ವವಿದ್ಯಾನಿಲಯ

ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ-೩೮೩
ಪ್ರಾಚ್ಯಕಾವ್ಯಮಾಲೆ-೭೦

ಪ್ರಧಾನ ಸಂಪಾದಕ
**ಡಾ. ಹಾ. ಮಾ. ನಾಯಕ**

ವಿಭಾಗ ಸಂಪಾದಕ
ಎಸ್. ಬಸವಾರಾಧ್ಯ

# ಕನ್ನಡ ಹಸ್ತಪ್ರತಿಗಳ
# ವರ್ಣನಾತ್ಮಕ ಸೂಚೀ

## ಏಳನೆಯ ಸಂಪುಟ (ಬ-ಲ)

ಈ ಯೋಜನೆಯಲ್ಲಿ ಸಹಕರಿಸಿದವರು

ಎನ್. ಬಸವಾರಾಧ್ಯ
ಬಿ. ಎಸ್. ಸಣ್ಣಯ್ಯ
ಎಸ್. ಬಸಪ್ಪ
ಎಸ್. ಎನ್. ಕೃಷ್ಣಜೋಯಿಸ್
ಎಂ. ಸಿ. ಪದ್ಮನಾಭಶರ್ಮ
ಕೆ. ಆರ್. ಶೇಷಗಿರಿ
ಜಿ. ಜಿ. ಮಂಜುನಾಥನ್
ಎಂ. ಎನ್. ಲೀಲಾವತಿ
ನಂ. ತಪಸ್ವೀಕುಮಾರ್
ಹ. ಕ. ರಾಜೇಗೌಡ
ವೈ. ಸಿ. ಭಾನುಮತಿ
ಎಂ. ಪಿ. ಮಂಜಪ್ಪಶೆಟ್ಟಿ

# ಕನ್ನಡ ಹಸ್ತಪ್ರತಿಗಳ
# ವರ್ಣನಾತ್ಮಕ ಸೂಚೀ

ಏಳನೆಯ ಸಂಪುಟ (ಬ–ಲ)

ಸಂಯೋಜಕ ಸಂಪಾದಕ
ಬಿ. ಎಸ್. ಸಣ್ಣಯ್ಯ



ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
1980

KANNADA HASTAPRATIGALA VARNANATMAKA SUCHI—SAMPUTA VII (Descriptive Catalogue of Kannada Manuscripts Volume VII) Co-ordinating editor : B. S. Sannaiah ;Published by The Institute of Kannada Studies, University of Mysore, Manasagangotri, Mysore–570 006. First edition : 1980. Pp. xii+665.



ಬೆಲೆ : ರೂ. 26–00

ಮಾರಾಟಗಾರರು : ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು–570 012

ಮುದ್ರಕರು : ಉಷಾ ಪ್ರೆಸ್. ಚಂದ್ರಗುಪ್ತ ರಸ್ತೆ, ಮೈಸೂರು–570 001

# ಮುನ್ನುಡಿ

ಕನ್ನಡ ಅಧ್ಯಯನಕ್ಕೆ ಸಂಬಂಧಪಟ್ಟ ಚಟುವಟಿಕೆಗಳೆಲ್ಲವನ್ನೂ ಕೇಂದ್ರೀಕರಿಸುವ ದೃಷ್ಟಿಯಿಂದ ೧೯೬೬ರ ಕೊನೆಯಲ್ಲಿ ಪ್ರಾಚ್ಯಸಂಶೋಧನಾಲಯದ ಕನ್ನಡ ವಿಭಾಗವನ್ನು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ವಿಲೀನಗೊಳಿಸಲಾಯಿತು. ಅಂದಿನಿಂದ ಈ ಭಾಗವನ್ನು ಅಧ್ಯಯನ ಸಂಸ್ಥೆಯ 'ಸಂಪಾದನ ವಿಭಾಗ' ವೆಂದು ಹೆಸರಿಸಲಾಯಿತು. ಕ್ರಿ. ಶ. ೧೪೩೬ರಲ್ಲಿ ಪ್ರತಿಮಾಡಲಾಗಿರುವ ಹಾಗೂ ಅತ್ಯಂತ ಪ್ರಾಚೀನ ಉಪಲಬ್ಧ ಹಸ್ತಪ್ರತಿಯಾಗಿರುವ 'ಪುಷ್ಪದಂತ ಪುರಾಣ' ದ ಹಸ್ತಪ್ರತಿಯಿಂದ ಹಿಡಿದು ೧೮೫೦ರಲ್ಲಿ ಲಿಖಿತವಾಗಿರುವ 'ಪ್ರಭಾವತಿ ಪರಿಣಯ' ದ ಹಸ್ತಪ್ರತಿಯವರೆಗೆ ಇಂದು ೫೦೦೦ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಹೊಂದಿರುವ 'ಸಂಪಾದನ ವಿಭಾಗ' ಅಧ್ಯಯನ ಸಂಸ್ಥೆಯ ಒಂದು ಪ್ರಧಾನ ಅಂಗವಾಗಿದೆ. ಕನ್ನಡ ಭಾಷಾ ಸಾಹಿತ್ಯಗಳಿಗೆ ಸಂಬಂಧಿಸಿದ ಅಧ್ಯಯನವನ್ನು ಕೈಗೊಳ್ಳುವವರಿಗೆ, ಸಂಶೋಧಕರಿಗೆ, ಸ್ನಾತಕ ಮತ್ತು ಸ್ನಾತಕೋತ್ತರ ಕನ್ನಡ ವಿದ್ಯಾರ್ಥಿಗಳಿಗೆ ಇದು ಆಕರ ಗ್ರಂಥಗಳ ತವರಾಗಿದೆ, ಪ್ರೇರಣೆಯ ಸ್ರೋತವಾಗಿದೆ.

ಮುದ್ರಣ ಸೌಲಭ್ಯ ಈಗ್ಗೆ ಕೆಲವು ಶತಮಾನಗಳಿಂದೀಚೆಗೆ ಮಾನವ ಜನಾಂಗಕ್ಕೆ ದೊರೆತಿರುವ ವರ. ಈ ಸೌಲಭ್ಯವಿಲ್ಲದಿದ್ದ ಕಾಲದಲ್ಲಿ ಓಲೆಗರಿ ಅಥವಾ ತಾಡಪತ್ರದ ಮೇಲೆ ಕಂಠದಿಂದ ಕೊರೆದು, ಅನನ್ಯ ಶ್ರದ್ಧೆಯಿಂದ ಆ ಸಾಹಿತ್ಯವನ್ನು ಅಭ್ಯಸಿಸಿ, ಅದನ್ನು ಕಾಯ್ದುಕೊಂಡು ಬಂದ ಹಿರಿಯರಿಂದ ಅಂದಿನ ಅಪೂರ್ವಸಾಹಿತ್ಯ ನಮ್ಮ ಸಂಪತ್ತಾಗಿ ಉಳಿದಿದೆ. ತಮಗೆ ಪ್ರಿಯವೆನಿಸಿದ ಸಾಹಿತ್ಯಕೃತಿಗಳನ್ನು ಪ್ರತಿಮಾಡಿಸಿ ಇಟ್ಟುಕೊಳ್ಳುತ್ತಿದ್ದುದು ಆ ಕಾಲದ ಒಂದು ಬಗೆಯ ಹವ್ಯಾಸವೇ ಆಗಿತ್ತು. ಈ ಕಾರಣದಿಂದಾಗಿಯೇ ಓಲೆಗರಿಯ ಒಂದು ಸಂಪುಟದಲ್ಲಿಯೇ ಅನೇಕ ಗ್ರಂಥಗಳನ್ನು, ಗ್ರಂಥಭಾಗಗಳನ್ನು ಪ್ರತಿಲಿಪೀಕರಿಸುವುದನ್ನು ಕಾಣುತ್ತೇವೆ. ಹಸ್ತಪ್ರತಿಗಳ ಅನೇಕ ಪ್ರತಿಗಳನ್ನು ಸಿದ್ಧಪಡಿಸಿ ಹಂಚುವುದನ್ನು ಪುಣ್ಯಕಾರ್ಯವೆಂದು ಬಗೆದು, ಆ ರೀತಿ ಮಾಡುತ್ತಿದ್ದುದಕ್ಕೂ ಉದಾಹರಣೆಗಳಿವೆ. ಪ್ರತಿಲಿಪೀಕರಣ ಹಲವರಿಗೆ ಜೀವನೋಪಾಯದ ಸಾಧನವಾಗಿಯೂ ಇತ್ತು. ಹಸ್ತಪ್ರತಿಗಳನ್ನು ಸುಂದರ, ಸಂದರ್ಭೋಚಿತ ಚಿತ್ರಗಳಿಂದ ಅಲಂಕರಿಸುವ ವಾಡಿಕೆಯೂ ಇತ್ತು. ಇವು ನಮ್ಮ ಜನಗಳ ಸಾಹಿತ್ಯ–ಶಾಸ್ತ್ರ–ಕಲಾಭಿರುಚಿಯ ಪ್ರತೀಕವಾಗಿವೆ.

ಸಂಸ್ಕೃತಿ, ಇತಿಹಾಸ, ಭಾಷಾಚರಿತ್ರೆ–ಇವುಗಳ ಸಮಗ್ರ ಅರಿವಿಗೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯ ಅತ್ಯಾವಶ್ಯಕ. ಅಷ್ಟೇಅಲ್ಲ, ಕೋಶ ಅಥವಾ ನಿಘಂಟುಗಳ ರಚನೆಗೆ, ಅವುಗಳ ಮೂಲಘಟಕಗಳಾದ ಶಬ್ದಗಳ ಅರ್ಥನಿರ್ಧಾರಕ್ಕೆ ಶಾಸ್ತ್ರೀಯವಾಗಿ ಸಂಪಾದಿಸಿದ ಸಾಹಿತ್ಯಕೃತಿಗಳು ಅನಿವಾರ್ಯವಾಗುತ್ತವೆ. ಸಾಂಸ್ಕೃತಿಕ ಮತ್ತು ಐತಿಹಾಸಿಕ ಪುನರ್ರಚನೆಗೆ ಅಗತ್ಯವಾಗಿ ಬೇಕಾಗಿರುವ ಅನೇಕ ಗ್ರಂಥಗಳು ಇಂದಿಗೂ ಅನುಪಲಬ್ಧವಾಗಿವೆ. ಶಾಸನಗಳಲ್ಲಿ, ಅನ್ಯಕವಿಗಳ ಕೃತಿಗಳಲ್ಲಿ ಉಕ್ತವಾಗಿರುವುದರಿಂದ ಮಾತ್ರ

ಹಲವು ಕವಿಗಳ ಮತ್ತು ಗ್ರಂಥಗಳ ಹೆಸರುಗಳು ತಿಳಿದುಬರುತ್ತವೆ. 'ಕಾವ್ಯ ಪ್ರಯೋಗ ಪರಿಣತಮತಿ' ಗಳಾಗಿದ್ದ ಕನ್ನಡ ಜನತೆಯ ಬಳಿ ಒಂದು ಕಾಲದಲ್ಲಿ ಇವೆಲ್ಲ ಲಭ್ಯವಾಗಿದ್ದಿರಬೇಕು. ನಾಡಿನ ಹಲವೆಡೆಗಳಲ್ಲಿ ಓಲೆಗರಿಯ ಸಾಹಿತ್ಯ ಅನೇಕ ಶತಮಾನಗಳ ವರೆಗೆ ತನ್ನ ವೈಭವವನ್ನು ಮೆರೆದಿತ್ತು. ಕಾವ್ಯಪಾರಾಯಣ ಸಾಂಸ್ಕೃತಿಕ ಜೀವನದ ಅಂಗವಾಗಿ ಪರಿಣಮಿಸಿತ್ತು. ಕಾಲಕ್ರಮದಲ್ಲಿ ದೇಶ ಕಾಲ ಪರಿಸರಗಳ ಪ್ರಭಾವದಿಂದ, ಜನತೆಯ ಅಜ್ಞಾನ, ಅಶ್ರದ್ಧೆ ಮತ್ತು ಔದಾಸೀನ್ಯಗಳ ಫಲವಾಗಿ ಅವು ಮೂಲೆಗುಂಪಾಗುತ್ತ ಬಂದು ಕೀಟಗಳಿಗೆ ಆಹಾರವಾಗತೊಡಗಿದವು. ಅವುಗಳನ್ನು ಸಂರಕ್ಷಿಸಲಾರದೆ ನದಿಯ ಪಾಲೋ, ಬೆಂಕಿಯ ಪಾಲೋ ಮಾಡುತ್ತಿದ್ದ ಉದಾಹರಣೆಗಳೂ ಅಸಂಖ್ಯವಾಗಿವೆ. ಮತ್ತೆ ಕೆಲವೆಡೆಗಳಲ್ಲಿ ನವರಾತ್ರಿಯಂದು ಬೆಳಕುಕಂಡು, ಪೂಜಾರ್ಹವಾಗಿ ಹಾಲುಂಡು ಮತ್ತೆ ಕತ್ತಲ ಕೋಣೆಯ ಮೂಲೆ ಸೇರಬೇಕಾದ ದುಃಸ್ಥಿತಿ ಒದಗಿ ಹಲವಾರು ಅಮೂಲ್ಯ ಪ್ರತಿಗಳು ತ್ರುಟಿತವಾಗಿ ಹೋಗಿವೆ. ಇಂಥ ಮೌಢ್ಯವನ್ನು ದೂರಮಾಡಿ, ಹಸ್ತಪ್ರತಿಗಳನ್ನು ಹೊರಗೆಳೆದು, ಅವುಗಳನ್ನು ಕೊಂಡು ಇಲ್ಲವೆ ಎರವಲಾಗಿ ಪಡೆದು ಪರಿಷ್ಕರಿಸಿ, ಸಂಪಾದಿಸುವ ಹೊಣೆಯನ್ನು ಹೊತ್ತಿದೆ ಈ ಸಂಸ್ಥೆಯ ಸಂಪಾದನ ವಿಭಾಗ.

ಅನುಪಲಬ್ಧವಾಗಿರುವ ಸಾಹಿತ್ಯರಾಶಿಯನ್ನು ಹೊರತರಲು, ಉಪಲಬ್ಧ ಸಾಹಿತ್ಯಕ್ಕೆ ಪರಿಷ್ಕಾರನೀಡಲು ಹಸ್ತಪ್ರತಿಗಳ ಸಂಗ್ರಹಕಾರ್ಯ ಸತತವಾಗಿ ನಡೆಯಬೇಕಾಗಿದೆ. ಸಾಹಿತ್ಯಿಕ ಚಟುವಟಿಕೆಯ ಕೇಂದ್ರಗಳಾಗಿದ್ದ ಎಡೆಗಳಲ್ಲಿ, ಕವಿಗಳ ಕೀರ್ತಿ ಹರಡಿದ್ದ ಪ್ರದೇಶಗಳಲ್ಲಿ, ಜ್ಞಾನಗಂಗೆಯನ್ನು ಮನೆಮನೆಯ ಬಾಗಿಲಿಗೆ ಕೊಂಡೊಯ್ದ ಶಿವಶರಣರು ಮತ್ತು ದಾಸರುಗಳು ಸಂಚರಿಸುತ್ತಿದ್ದ ಸ್ಥಳಗಳಲ್ಲಿ ಅವರ ನೆನಪಿಗಾಗಿ ಮಠಗಳು, ಸ್ಮಾರಕಗಳು ನಿರ್ಮಿತವಾಗಿರುವ ಕಡೆಗಳಲ್ಲಿ, ಅನುಯಾಯಿಗಳ ಮತ್ತು ಭಕ್ತರ ಮನೆಗಳಲ್ಲಿ, ಸಾಹಿತ್ಯೋಪಾಸಕರ ಬಳಿಯಲ್ಲಿ ಹೇಗೋ ಎಂತೋ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ. ಈ ಸಂಸ್ಥೆಯ ಹಸ್ತಪ್ರತಿಯ ಭಂಡಾರವನ್ನು ಈ ದೃಷ್ಟಿಯಿಂದ ಬೆಳೆಸಿಕೊಂಡು ಬರುವತ್ತ ಆದ್ಯಗಮನ ಕೊಡಲಾಗಿದೆ.

ಸಂಗ್ರಹಿಸಿದ ಪ್ರತಿಗಳನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುವುದೂ ಅತ್ಯಂತ ಮುಖ್ಯವಾದ ಹೊಣೆ. ಕೀಟಗಳ ಹಾವಳಿಗೆ ಸಿಕ್ಕಿ ಪ್ರತಿಗಳು ಶಿಥಿಲವಾಗದಂತೆ ನೋಡಿಕೊಳ್ಳುವ ದೃಷ್ಟಿಯಿಂದ ಸಾಧ್ಯವಾದಷ್ಟು ಸಲ ಅವುಗಳನ್ನು ಸ್ವಚ್ಛಗೊಳಿಸುವುದು, ಕೀಟನಿರೋಧಕ ತೈಲ ಲೇಪನ ಮಾಡುವುದು, ವಾಯುನಿಯಂತ್ರಿತ ಕೊಠಡಿಯಲ್ಲಿಟ್ಟು ಪ್ರಧೂಮನ ಉಪಚಾರ ನೀಡುವುದು (Fumigation Treatment), ತೀರ ತ್ರುಟಿತವಾದ ಹಸ್ತಪ್ರತಿಗಳನ್ನು ಮೈಕ್ರೊಫಿಲಂಗಳಲ್ಲಿ ಶಾಶ್ವತಗೊಳಿಸುವುದು ಅಗತ್ಯವಾಗುತ್ತದೆ. ಈ ರೀತಿ ಹಸ್ತಪ್ರತಿಗಳನ್ನು ಕಾಪಾಡಿಕೊಂಡು ಬರುವುದು ವ್ಯಕ್ತಿಗಳಿಗೆ ಶ್ರಮಸಾಧ್ಯವಾದ ಹಾಗೂ ಆರ್ಥಿಕವಾಗಿ ಸುಲಭಸಾಧ್ಯವಲ್ಲದ ಕಾರ್ಯ. ಕನ್ನಡ ಅಧ್ಯಯನ ಸಂಸ್ಥೆ ಹಸ್ತಪ್ರತಿಗಳ ಸಂರಕ್ಷಣೆಗೆ ಅಗತ್ಯವಾದ ಮೇಲ್ಕಂಡ ಎಲ್ಲ ಕ್ರಮಗಳನ್ನೂ ಕೈಗೊಂಡಿದೆ.

ಗ್ರಂಥಸಂಪಾದನೆ ಶ್ರಮಸಾಧ್ಯವಾದ ಕಾರ್ಯ. ವಿದ್ವತ್ತು, ವ್ಯುತ್ಪತ್ತಿ, ಪ್ರತಿಭೆ ಮೇಳವಿಸಿರುವ ಸಮರ್ಥರು ಕೈಗೊಳ್ಳಬೇಕಾದ ಕಾರ್ಯ. ಈ ಕಾರ್ಯದಲ್ಲಿ ಹಲವಾರು ಭಾಷೆಗಳ, ಶಾಸ್ತ್ರಗಳ ಪರಿಚಯವೂ ಅಗತ್ಯವಾಗುತ್ತದೆ. ಹಸ್ತಪ್ರತಿಗಳೂ ಕಾಲ ದೇಶ ಮತ್ತು ಪರಿಸರಗಳ ಪ್ರಭಾವಕ್ಕೆ ಒಳಗಾಗಿರುತ್ತವೆ. ಸಾಹಿತ್ಯಾಭ್ಯಾಸಿಗಳು ಹಸ್ತಪ್ರತಿಗಳ ಮೇಲೆ ಟಿಪ್ಪಣಿಗಳನ್ನು, ತಮ್ಮ ಅನಿಸಿಕೆಗಳನ್ನು ಬರೆದುಬಿಡುತ್ತಿದ್ದುದೂ ಉಂಟು. ಕಾಲ ಕ್ರಮದಲ್ಲಿ ಅವು ಮೂಲದ ಅಂಗವೋ ಎಂಬಂತೆ ಸೇರಿಬಿಡುತ್ತಿದ್ದುದೂ ಸಹಜವೇ. ಪ್ರತಿ ಭಾವಂತರೂ, ವ್ಯುತ್ಪನ್ನಮತಿಗಳೂ, ಕಾವ್ಯರಚನಾಸಮರ್ಥರೂ ಮೂಲವನ್ನು ಕೆಲವು ವೇಳೆ ಉತ್ತಮಪಡಿಸಿ, ಕೆಲವು ವೇಳೆ ಕೆಡಿಸಿ, ಅರ್ಥಸೌಲಭ್ಯಕ್ಕಾಗಿ ಅರ್ಥವಾಗುವಂತಹ ಪಾಠಾಂತರಗಳನ್ನು ಕಲ್ಪಿಸಿ, ಅಲ್ಲಲ್ಲಿ ಮೂಲಧಾಟಿಗೆ ಭಂಗಬರದಂತೆ ತಮ್ಮ ಸ್ವಂತ ರಚನೆ ಗಳನ್ನು ಪ್ರಕ್ಷೇಪಿಸಿಬಿಟ್ಟಿರುವುದೂ ಉಂಟು. ಇಂತಹ ಪ್ರಕ್ಷೇಪಗಳು ಕೆಲವೊಮ್ಮೆ ಸನ್ನಿವೇಶದ ಪ್ರಭಾವವನ್ನು ಹೆಚ್ಚಿಸಿರುವುದೂ ಉಂಟು; (ಒಂದು ವೇಳೆ ವಾಸ್ತವವಾಗಿ ಹಾಗಾಗದಿದ್ದರೂ ಪ್ರಕ್ಷೇಪಕರು ಹಾಗೆ ಭಾವಿಸಿಕೊಂಡದ್ದೂ ತಮ್ಮ ಚಪಲವನ್ನು ತೀರಿಸಿ ಕೊಂಡದ್ದೂ ಸತ್ಯ!) ಒಟ್ಟಿನಲ್ಲಿ ಅನಾವಶ್ಯಕ ವಿಸ್ತರಣಕ್ಕೆ ಕಾರಣವಾಗಿ ಕೃತಿಯ ಗಾತ್ರದ ಹೆಚ್ಚಳಕ್ಕೆ ಮಾತ್ರ ನೆರವಾಗಿರುವುದೂ ಉಂಟು. ಲಿಪಿಕಾರರೂ ಅನೇಕ ವೇಳೆ ತಮಗೆ ಸರಿದೋರಿದಂತೆ ಅಥವಾ ಸೂಕ್ತಕಂಡಂತೆ ಶಬ್ದರೂಪಗಳನ್ನು ಬದಲಾಯಿಸಿ ಅಥವಾ ಬೇರೆ ಶಬ್ದವನ್ನು ತಂದು ಗಿಡಿದು, ತಿಳಿದೋ ತಿಳಿಯದೆಯೋ ಮೂಲಕ್ಕೆ ತಿದ್ದುಪಡಿ ಗಳನ್ನು ತಂದುಬಿಡುತ್ತಿದ್ದುದುಂಟು. ಇಂತಹ ಅನೇಕ ಕಾರಣಗಳಿಂದಾಗಿ ಒಂದು ಕೃತಿಯ ಹಲವು ಪ್ರತಿಗಳಲ್ಲಿ ಪಾಠವ್ಯತ್ಯಾಸಗಳು ಕಂಡುಬರುತ್ತವೆ. ಒಂದೊಂದೇ ಪ್ರತಿಗಳು ದೊರಕಿದ್ದು ಅವೂ ತ್ರುಟಿತವಾಗಿರುವಂತಹ ಸಂದರ್ಭಗಳಲ್ಲಿ ಮೂಲಪ್ರತಿಯ ಪಾಠವನ್ನು ಪುನರ್ರಚಿಸಬೇಕಾಗುತ್ತದೆ. ಇದು ನಿಜಕ್ಕೂ ಪ್ರತಿಭೆಯ ಕೆಲಸವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಸಂಪಾದಕನ ಪರೀಕ್ಷೆಯೇ ನಡೆದುಹೋಗುತ್ತದೆ. ವಿದ್ವತ್ತಿನ ಹಿನ್ನೆಲೆ ಯಲ್ಲಿ ತಾಳ್ಮೆ, ಶ್ರಮಸಹಿಷ್ಣುತೆ ಇಲ್ಲವಾದರೆ ಈ ಕ್ಷೇತ್ರದಲ್ಲಿ ಯಶಸ್ಸು ಪಡೆಯುವುದು ಸಾಧ್ಯವಾಗುವುದಿಲ್ಲ. ಗ್ರಂಥಸಂಪಾದನೆ ಇಂದು ವಿಶಿಷ್ಟಶಾಸ್ತ್ರವಾಗಿಯೇ ಬೆಳೆದಿದೆ.

'ಸಂಪಾದನ ವಿಭಾಗ' ಹಲವಾರು ಸಾಹಿತ್ಯ ಮತ್ತು ಶಾಸ್ತ್ರಗ್ರಂಥಗಳನ್ನು ವೈಜ್ಞಾ ನಿಕವಾಗಿ ಸಂಪಾದಿಸಿ, ಪಾಠಗಳನ್ನು ನಿರ್ಧರಿಸಿ, ಪಾಠಾಂತರಗಳನ್ನು ಒದಗಿಸಿ, ವಿಸ್ತಾರ ವಾದ ಪೀಠಿಕೆಗಳನ್ನು ಬರೆದು, ಕವಿಯ ಕಾಲ, ದೇಶ, ಕೃತಿಗಳ ವಿಚಾರಗಳನ್ನು ಚರ್ಚಿಸಿ, ಅವುಗಳ ಸಾಹಿತ್ಯಿಕ ಮೌಲ್ಯವನ್ನು ಪರಿಶೀಲಿಸಿ, ಅಗತ್ಯವಾದಲ್ಲಿ ಟಿಪ್ಪಣಿ ವ್ಯಾಖ್ಯಾನಗಳನ್ನು ಒದಗಿಸಿ ಬೆಳಕಿಗೆ ತರುತ್ತಿದೆ. ಪ್ರಾಚ್ಯಸಂಶೋಧನಾಲಯದ ಅಂಗವಾಗಿದ್ದಾಗ ಹೊರ ತಂದಿರುವ ೪೦ ಗ್ರಂಥಗಳ ಜೊತೆಗೆ ಅಧ್ಯಯನ ಸಂಸ್ಥೆಯಲ್ಲಿ ಸೇರ್ಪಡೆಯಾದ ಮೇಲೆ 'ಪ್ರಾಚ್ಯ ಕಾವ್ಯಮಾಲೆ'ಯ ಹೆಸರಿನಲ್ಲಿ ಈಗಾಗಲೇ ೬೯ ಗ್ರಂಥಗಳನ್ನು ಹೊರತರಲಾಗಿದೆ. ಬೆಳಕುಕಾಣಲು ಹಾತೊರೆಯುತ್ತಿರುವ ಗ್ರಂಥಗಳನ್ನು ವ್ಯವಸ್ಥಿತ ರೀತಿಯಲ್ಲಿ ಹೊರ ತರಲು ಸಂಸ್ಥೆ ಸತತವಾಗಿ ಶ್ರಮಿಸುತ್ತಿದೆ. ಇದುವರೆಗೂ ಸಂಪಾದನ ವಿಭಾಗದ ಸಂಶೋ

ಧನ ಸಹಾಯಕರು ಸಿದ್ಧಪಡಿಸಿದ ಕೃತಿಗಳನ್ನು ಮಾತ್ರ ಪ್ರಕಟಿಸಲಾಗುತ್ತಿತ್ತು. ಈಗ ಈ ವಿಭಾಗದಲ್ಲಿ ಸಂಗ್ರಹಿತವಾಗಿರುವ ಹಸ್ತಪ್ರತಿಗಳನ್ನುಪಯೋಗಿಸಿಕೊಂಡು ಹೊರಗಿನವರೂ ಸಂಪಾದಿಸಬಹುದಾದ ಗ್ರಂಥಗಳನ್ನೂ ಪ್ರಕಟಿಸಲು ಯೋಜಿಸಲಾಗಿದೆ. ಇದರಿಂದ ಪ್ರಕಟನೆಯ ಕೆಲಸ ತ್ವರಿತಗೊಳ್ಳುತ್ತದೆ. ಹಸ್ತಪ್ರತಿಗಳಲ್ಲೇ ಉಳಿದು ಸಾಮಾನ್ಯರ ಕೈಗೆಟುಕದ ಗ್ರಂಥಗಳನ್ನು ಸರ್ವರ ಸ್ವತ್ತಾಗಿಸುವ ಉದ್ದೇಶವೂ ತೀವ್ರಗೊಳ್ಳುತ್ತದೆ.

ಸಂಪಾದನ ವಿಭಾಗ ಸಂಕಲಿತ ಗ್ರಂಥಗಳನ್ನು ಹೊರತರುವಲ್ಲಿಯೂ ನಮಗೆ ನೆರವಾಗುತ್ತಿದೆ. ಎರಡು ಸಾವಿರ ವರ್ಷಗಳ ಸುದೀರ್ಘ ಪರಂಪರೆಯನ್ನುಳ್ಳ ಕನ್ನಡ ಸಾಹಿತ್ಯದ ಸಿಂಹಾವಲೋಕನ ಮಾಡಿಸುವಂತಹ ಪ್ರಾತಿನಿಧಿಕ ಸಂಕಲನ ಗ್ರಂಥಗಳನ್ನು ಸಿದ್ಧಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದ ವಿವಿಧ ಪರೀಕ್ಷೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಲಾಗುತ್ತಿರುವ ಈ ಗ್ರಂಥಗಳು ಆಯಾ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಕನ್ನಡ ಸಾಹಿತ್ಯದ ಪರಿಚಯವನ್ನು ಬಯಸುವವರಿಗೂ ಉಪಯುಕ್ತವಾಗುತ್ತವೆ. ಇಂಥ ಸಂಕಲನಗಳನ್ನು ಸಿದ್ಧಪಡಿಸುವುದೂ ಸಂಪಾದನ ವಿಭಾಗದ ಒಂದು ಪ್ರಮುಖ ಹೊಣೆಯಾಗಿದೆ.

ಅಧ್ಯಯನ ಸಂಸ್ಥೆಯ ಹಸ್ತಪ್ರತಿಗಳ ಭಂಡಾರದಲ್ಲಿ ಸಂಗ್ರಹಗೊಂಡಿರುವ ಹಾಗೂ ಸಂಪಾದನ ವಿಭಾಗದ ಸಹೋದ್ಯೋಗಿಗಳು ಆಗಿಂದಾಗ್ಗೆ ನಡೆಸಿದ ಪರಿವೀಕ್ಷಣಾಕಾರ್ಯಗಳ ಅಂಗವಾಗಿ ಈವರೆಗೆ ದೊರಕಿರುವ ಹೊಸ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಯನ್ನು ವ್ಯವಸ್ಥಿತ ರೂಪದಲ್ಲಿ ಹೊರತರುವ ಯೋಜನೆಯ ಅಂಗವಾಗಿ ಈಗ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ಏಳನೆಯ ಸಂಪುಟ ಪ್ರಕಟವಾಗುತ್ತಿದೆ. ಈ ವರ್ಷಾಂತ್ಯದ ಒಳಗಾಗಿ ಉಳಿದ ಸಂಪುಟಗಳೂ ಹೊರಬರಲಿವೆ. ಈ ಎಲ್ಲ ಸಂಪುಟಗಳೂ ಪ್ರಕಟವಾದಾಗ ಕನ್ನಡ ಸಾಹಿತ್ಯದ ಸಮೃದ್ಧಿ ನಿಚ್ಚಳವಾಗಿ ಗೋಚರಿಸುತ್ತದೆ ವಿದ್ವಾಂಸರಿಗೆ, ಸಾಹಿತ್ಯಾಸಕ್ತರಿಗೆ ಉಪಯುಕ್ತವಾಗುವಂಥ ಈ ಸಂಪುಟಗಳ ಸಿದ್ಧತೆಯಲ್ಲಿ ನೆರವಾಗಿರುವ ವಿಭಾಗ ಸಂಪಾದಕರಾದ ಶ್ರೀ ಎನ್. ಬಸವಾರಾಧ್ಯ ಅವರಿಗೂ, ಸಿದ್ಧಪಡಿಸಿದ ಮಾಹಿತಿಯನ್ನು ಸಂಯೋಜಿಸಿದ ಶ್ರೀ ಬಿ. ಎಸ್. ಸಣ್ಣಯ್ಯನವರಿಗೂ, ಮಾಹಿತಿಯನ್ನು ಸಂಗ್ರಹಿಸಿದ ಸಂಶೋಧನ ಸಹಾಯಕರುಗಳಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು-೬

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ವಿಭಾಗ ಸಂಪಾದಕರ ಮಾತು

ಮಾನವನ ಜ್ಞಾನವಿಕಾಸಕ್ಕೆ ಗ್ರಂಥಭಂಡಾರಗಳು ಬಹುಮುಖ್ಯವಾದ ಸಾಧನಗಳಾಗಿವೆ. ಈ ಗ್ರಂಥಭಂಡಾರಗಳು ಮುದ್ರಿತ ಗ್ರಂಥಗಳನ್ನೂ ಅಮುದ್ರಿತ ಗ್ರಂಥಗಳನ್ನೂ ಒಳಗೊಂಡಿರುತ್ತವೆ. ಮುದ್ರಿತ ಗ್ರಂಥಗಳು ವಾಚಕರಿಗೆ ಸುಲಭಗಮ್ಯವಾದುವು. ಅಮುದ್ರಿತ ಗ್ರಂಥಗಳು ಪರಿಶೀಲನೆಗೆ ದುರ್ಲಭವೂ ದುಸ್ತರವೂ ಆದುವು. ಈ ಹಸ್ತಪ್ರತಿಗಳು ಸುಲಭಸಾಧ್ಯವಾಗಬೇಕಾದರೆ ಇವುಗಳ ವರ್ಣನಾತ್ಮಕ ಸೂಚಿ ಅತ್ಯಂತ ಅವಶ್ಯವಾಗುತ್ತದೆ. ಇಂಗ್ಲಿಷಿನ (Catalogue) ಸೂಚಿ ಮತ್ತು (Descriptive Catalogue) ವರ್ಣನಾತ್ಮಕ ಸೂಚಿ ಇವು ಒಂದಕ್ಕಿಂತ ಮತ್ತೊಂದು ವ್ಯಾಪಕಾರ್ಥವುಳ್ಳ ಶಬ್ದಗಳು. ಕೇವಲ (Catalogue) ಸೂಚಿಗಿಂತ (Descriptive Catalogue) ವರ್ಣನಾತ್ಮಕ ಸೂಚಿ ಬಹುಉಪಯುಕ್ತವಾದುದು ಎಂಬುದು ಸರ್ವವಿದಿತ. ಯಾವುದೇ ಗ್ರಂಥಭಂಡಾರದಲ್ಲಿನ ಎಲ್ಲ ಕೃತಿಗಳನ್ನೂ ಸಮಗ್ರವಾಗಿ ಪರಿಶೀಲಿಸುವುದು ಸಾಧ್ಯವಾಗದ ಕೆಲಸ. ಆದರೆ ಈ ವರ್ಣನಾತ್ಮಕ ಸೂಚಿ (Descriptive Catalogue) ಯಿಂದ ಎಲ್ಲ ಕೃತಿಗಳ ಒಂದು ಸಂಕ್ಷಿಪ್ತ ಮಾಹಿತಿ ಪಡೆದುಕೊಳ್ಳುವುದು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಗ್ರಂಥಭಂಡಾರಗಳಲ್ಲಿನ ಹಸ್ತಪ್ರತಿಗಳ ಕೃತಿಗಳ ವರ್ಣನಾತ್ಮಕ ಸೂಚಿ ಅವಶ್ಯವಷ್ಟೇ ಅಲ್ಲ ಅನಿವಾರ್ಯವೂ ಹೌದು. ಈ ವರ್ಣನಾತ್ಮಕ ಸೂಚಿಯಿಂದ ಯಾವುದೇ ಒಂದು ಕೃತಿಯ ಸಂಕ್ಷಿಪ್ತ ಸಮಗ್ರ ಮಾಹಿತಿ ದೊರಕಿದಂತಾಗುತ್ತದೆ. ವಿದ್ವಾಂಸರಿಗೂ ಸಂಶೋಧಕರಿಗೂ ಈ ಸೂಚಿಗಳು ಕೈಪಿಡಿಗಳಂತಿರುತ್ತವೆ. ಇವುಗಳಿಂದ ಯಾವ ಯಾವ ಗ್ರಂಥಭಂಡಾರದಲ್ಲಿ ಯಾವ ಯಾವ ಕೃತಿಗಳು ಉಪಲಬ್ಧವಿವೆ, ಅವುಗಳ ಸ್ವರೂಪ ಸ್ಥಿತಿಗತಿ ಎಂತಹುದು ಎಂಬುದನ್ನು ಅರಿತುಕೊಳ್ಳಬಹುದಾಗಿದೆ. ಒಟ್ಟಿನಲ್ಲಿ ಈ ವರ್ಣನಾತ್ಮಕ ಸೂಚಿಗಳು ಮೂಲಕೃತಿಗಳ ಒಂದು ಸಂಕ್ಷಿಪ್ತ ಸಮಗ್ರ ನೋಟವನ್ನು ನೀಡಬಲ್ಲವು. ಈ ಸೂಚಿಗಳ ಅವಲೋಕನದಿಂದ ಮೂಲಕೃತಿಗಳ ಅವಲೋಕನವನ್ನೇ ಮಾಡಿದಂತಾಗುತ್ತದೆ. ಈ ದೃಷ್ಟಿಯಿಂದ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ಪ್ರಕಟಣೆ ಅತ್ಯಂತ ಮಹತ್ವಪೂರಿತವಾದುದು. ಗ್ರಂಥಭಂಡಾರವನ್ನು ಸೂರೆಹೊಡೆದು ತೋರುವಂತಹ ಕಾರ್ಯವಿದು. ಇಂತಹ ಕಾರ್ಯವನ್ನು ಕನ್ನಡ ಅಧ್ಯಯನ ಸಂಸ್ಥೆ ಕೈಕೊಂಡಿದೆ.

ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯ ನಾಲ್ಕು ಸಂಪುಟಗಳನ್ನು ಪ್ರಾಚ್ಯವಿದ್ಯಾಸಂಶೋಧನಾಲಯದಿಂದ ಈಗಾಗಲೇ ಪ್ರಕಟಿಸಲಾಗಿದೆ. ಉಳಿದ ಐದು ಸಂಪುಟಗಳನ್ನು ಈಗ ಹೊರತರಲಾಗುತ್ತಿದೆ. ಈ ಸಂಪುಟಗಳಲ್ಲಿ ಅನುಸರಿಸಿರುವ ವಿಧಿವಿಧಾನಗಳನ್ನು ಸಂಯೋಜಕ ಸಂಪಾದಕರ ಅರಿಕೆಯಲ್ಲಿ ವಿವರಿಸಲಾಗಿದೆ.

ಈ ಐದು ಸಂಪುಟಗಳಲ್ಲಿಯೂ ಹಿಂದಿನ ನಾಲ್ಕು ಸಂಪುಟಗಳ ಕ್ರಮವನ್ನೇ ಅನುಸರಿಸಿದೆ. ಆದರೆ ಹಸ್ತಪ್ರತಿಗಳ ವಿವರಣೆಗಳನ್ನು ಬರೆದವರ ಹೆಸರಿನ ಆದ್ಯಕ್ಷರಗಳನ್ನು

ಆಯಾ ಸಮೂದಿಸ ಕೆಳಗೆ ಕೊಡಲಾಗಿದೆ.

ಎಸ್‌ಬಿಎ–ಎಸ್. ಬಸವಾರಾಧ್ಯ
ಎಸ್‌ಬಿ–ಎಸ್. ಬಸಪ್ಪ
ಎಂಸಿಪಿ–ಎಂ. ಸಿ. ಪದ್ಮನಾಭಶರ್ಮ
ಜಿಜಿಎಂ–ಜಿ. ಜಿ. ಮಂಜುನಾಥನ್
ಎಂಎಸ್‌ಎಲ್–ಎಂ. ಎಸ್. ಲೀಲಾವತಿ
ವೈಸಿಬಿ–ವೈ. ಸಿ. ಭಾನುಮತಿ
ಬಿಎಸ್‌ಎಸ್–ಬಿ. ಎಸ್. ಸಣ್ಣಯ್ಯ
ಎಸ್‌ಎನ್‌ಕೆ–ಎಸ್. ಎನ್. ಕೃಷ್ಣಜೋಯಿಸ್
ಕೆಆರ್‌ಎಸ್–ಕೆ. ಆರ್. ಶೇಷಗಿರಿ
ಶ್ರೀನಂತ–ನಂ. ತಪಸ್ವೀಕುಮಾರ್
ಹಕರಾ–ಹ. ಕ. ರಾಜೇಗೌಡ
ಎಂಬಿಎಂ–ಎಂ. ಬಿ. ಮಂಜಪ್ಪಶೆಟ್ಟಿ

ಈಗ ಪ್ರಕಟವಾಗುತ್ತಿರುವುದು ಏಳನೆಯ ಸಂಪುಟ. ಇದರಲ್ಲಿ ಬಕಾರದಿಂದ ಲಕಾರದವರೆಗೆ ಒಟ್ಟು ೮೦೨ ಕೃತಿಗಳ ವಿವರಣೆಯನ್ನು ಕೊಟ್ಟಿದೆ. ವಿದ್ವಾಂಸರಿಗೂ ಸಂಶೋಧಕರಿಗೂ ಅತ್ಯಂತ ಉಪಯುಕ್ತವಾದ ಈ ಆಕರಗ್ರಂಥವನ್ನು ಕನ್ನಡ ಜನತೆ ಆದರದಿಂದ ಸ್ವಾಗತಿಸುವರೆಂದು ನಂಬಲಾಗಿದೆ.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು–೬

ಎಸ್. ಬಸವಾರಾಧ್ಯ
ವಿಭಾಗ ಸಂಪಾದಕ

# ಅರಿಕೆ

ಮುದ್ರಣ ಸೌಕರ್ಯವಿಲ್ಲದಿದ್ದ ಕಾಲದಲ್ಲಿ ಪ್ರಾಚೀನ ಗ್ರಂಥಗಳು ಓಲೆಗರಿಗಳಲ್ಲಿ ಕ್ರಮೇಣ ಕಡತ, ಕಾಗದಗಳಲ್ಲಿ ಕೈಬರಹದ ಮೂಲಕ ಒದಗಿಬಂದಿವೆ. ಇಂತಹ ಹಸ್ತಪ್ರತಿಗಳು ನಾಡಿನ ಮೂಲೆ ಮೂಲೆಗಳಲ್ಲಿ ಹರಡಿವೆ. ಈ ಹಸ್ತಪ್ರತಿಗಳನ್ನು ಕರ್ನಾಟಕ ಹಾಗು ಇತರೆಡೆಗಳಿಂದ ಸಂಗ್ರಹಿಸಿ ಸಂಸ್ಥೆಯು ಹಸ್ತಪ್ರತಿ ಭಂಡಾರಕ್ಕೆ ಸೇರಿಸಲಾಗಿದೆ. ಕೆಲವು ಗ್ರಂಥಗಳನ್ನು ಮೈಕ್ರೊಫಿಲಂ ರೂಪದಲ್ಲಿಯೂ ಸಂಗ್ರಹಿಸಲಾಗಿದೆ. ಆದರೆ ಮೈಕ್ರೊಫಿಲಂಗಳ ಸೂಚಿಯನ್ನೇ ಪ್ರತ್ಯೇಕವಾಗಿ ಹೊರತರಬೇಕೆಂಬ ಉದ್ದೇಶವಿರುವುದರಿಂದ ಅವುಗಳನ್ನು ಇಲ್ಲಿ ಸೇರಿಸಿಲ್ಲ.

೧೯೫೪ರವರೆಗೆ ಸಂಗ್ರಹಿಸಿದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಯು ನಾಲ್ಕು ಸಂಪುಟಗಳು ೧೯೭೨-೭೫ರಲ್ಲಿ ಪ್ರಾಚ್ಯವಿದ್ಯಾಸಂಶೋಧನಾಲಯ ಮಾಲೆಯಲ್ಲಿ ಹೊರಬಂದಿವೆ. ಅಲ್ಲಿಂದೀಚೆಗೆ ಮಾರ್ಚ್ ೧೯೭೮ರವರೆಗೆ ಸಂಗ್ರಹಿತವಾದ ಹಸ್ತಪ್ರತಿಗಳ ಸೂಚಿಗಳು ಈಗ ಐದು ಸಂಪುಟಗಳಲ್ಲಿ ಹೊರಬರುತ್ತಿವೆ.

ಈ ಸೂಚೀಪಟ್ಟಿಕೆಯಲ್ಲಿ ಮೊದಲು ಕ್ರಮಾಂಕವನ್ನು ಆಂಗ್ಲಸಂಖ್ಯೆಯಲ್ಲಿ ಕೊಟ್ಟು ಅನಂತರ ಗ್ರಂಥದ ಸಂಖ್ಯೆಯನ್ನು ಕನ್ನಡ ಅಂಕಿಗಳಲ್ಲಿ ಕೊಡಲಾಗಿದೆ. ಈ ಅಂಕಿಗಳ ಹಿಂದೆ 'ಕೆ' ಎಂದಿದ್ದರೆ ಓಲೆಯ ಪ್ರತಿಯೆಂದೂ, 'ಕೆ. ಎ.' ಎಂದಿದ್ದರೆ ದೊಡ್ಡ ಅಳತೆಯ ಕಾಗದದ ಪ್ರತಿಯೆಂದೂ, 'ಕೆ. ಬಿ.' ಎಂದಿದ್ದರೆ ಚಿಕ್ಕ ಅಳತೆಯ ಕಾಗದದ ಪ್ರತಿಯೆಂದೂ ತಿಳಿಯಬೇಕು. ಒಂದೇ ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚು ಗ್ರಂಥಗಳಿದ್ದಾಗ ಆ ಗ್ರಂಥವು ಆ ಕಟ್ಟಿನಲ್ಲಿ ಎಷ್ಟನೆಯದೆಂಬುದನ್ನು ಸೂಚಿಸಲು ಹಸ್ತಪ್ರತಿಸಂಖ್ಯೆಯ ಮುಂದೆ ಒಂದು ಓರೆಗೀಟನ್ನು ಹಾಕಿ ಅದರ ಮುಂದೆ ಗ್ರಂಥದ ಸಂಖ್ಯೆಯನ್ನು ಕೊಡಲಾಗಿದೆ. ಅನಂತರ ಗ್ರಂಥದ ಹೆಸರು, ಪ್ರಭೇದಗಳನ್ನು ಕೊಟ್ಟಿದೆ. ಎರಡನೆಯ ಸಾಲಿನಲ್ಲಿ ಹಸ್ತಪ್ರತಿಯ ಅಳತೆ, ಗ್ರಂಥದ ಕರ್ತೃ, ಆತನ ಕಾಲಗಳನ್ನು ಕೊಡಲಾಗಿದೆ. ಇವು ತಿಳಿಯದಿದ್ದಾಗ ಪ್ರಶ್ನಾರ್ಥಕ ಚಿಹ್ನೆಗಳನ್ನು ಸೂಚಿಸಲಾಗಿದೆ. ಕವಿ ಮತ್ತು ಕಾಲವಿಚಾರಗಳಿಗೆ ಬಹುಮಟ್ಟಿಗೆ ಕರ್ನಾಟಕ ಕವಿಚರಿತೆಯನ್ನು ಅವಲಂಬಿಸಿದೆ. ಮೂರನೆಯ ಸಾಲಿನಲ್ಲಿ ಪತ್ರಸಂಖ್ಯೆಗಳನ್ನೂ, ಪ್ರತಿ ಪತ್ರದ ಒಮ್ಮುಖದಲ್ಲಿ ಎಷ್ಟು ಪಂಕ್ತಿಗಳಿವೆಯೆಂಬುದನ್ನೂ, ಪ್ರತಿ ಪಂಕ್ತಿಯಲ್ಲಿ ಎಷ್ಟು ಅಕ್ಷರಗಳಿವೆಯೆಂಬುದನ್ನೂ ಕೊಟ್ಟಿದೆ. ಪತ್ರ ಎಂದಿದ್ದಾಗ ಎರಡು ಕಡೆಯೂ ಸೇರಿ ಒಂದು ಪತ್ರವೆಂತಲೂ, ಪುಟ ಎಂದಿದ್ದರೆ ಪ್ರತಿಪಕ್ಕಕ್ಕೂ ಪುಟಸಂಖ್ಯೆ ಇದೆಯೆಂದೂ ತಿಳಿಯಬೇಕು. ಪತ್ರದ ಒಂದೇ ಕಡೆ ಬರವಣಿಗೆಯಿದ್ದರೆ ಅದನ್ನು ವಿಶೇಷದಲ್ಲಿ ಸೂಚಿಸಲಾಗಿದೆ.

ಗ್ರಂಥದ 'ಆದಿ' ಮತ್ತು 'ಅಂತ್ಯ' ಭಾಗಗಳಿಂದ ಉದ್ಧರಿಸಲಾಗಹಸ್ತಪ್ರತಿಗಳಲ್ಲಿ ಇದ್ದಂತೆಯೇ ಯಾವ ತಿದ್ದುಪಡಿಯೂ ಇಲ್ಲದೆ ಕೊಡಲಾಗಿದೆ. ಆದರೆ ಕೆಲವೆಡೆ ಪದ್ಯ

ಗಳನ್ನು ಕೊಡುವಾಗ ಛಂದಸ್ಸಿಗನುಸಾರವಾಗಿ ವಿಭಾಗಿಸಲಾಗಿದೆ. ಮೂಲಪ್ರತಿಯಲ್ಲಿ ಇದ್ದಂತೆಯೇ ಕೊಡುವುದರಿಂದ ಹಸ್ತಪ್ರತಿಗಳ ಸ್ವರೂಪ ವ್ಯಕ್ತವಾಗುತ್ತದೆ. ಈ ಉದ್ಧೃತ ಭಾಗಗಳಲ್ಲಿ ಕೆಲವು ಕಡೆ (.......) ಈ ಚಿಹ್ನೆಯನ್ನು ಹಾಕಿರುವಲ್ಲಿ ಗ್ರಂಥ ಲೋಪವೆಂದೂ (× × ×) ಈ ಗುರುತಿರುವೆಡೆಯಲ್ಲಿ ಗ್ರಂಥಭಾಗವಿದ್ದರೂ ಬಿಟ್ಟು ಮುಂದಿನ ಭಾಗ ಕೊಟ್ಟಿದೆಯೆಂದೂ ತಿಳಿಯಬೇಕು. 'ವಿಷಯ' ವಿಭಾಗದಲ್ಲಿ ಗ್ರಂಥದ ಪ್ರತಿಪಾದ್ಯ ವಿಷಯವನ್ನು ಒಂದೊಂದು ವಾಕ್ಯದಲ್ಲಿ ಸೂಚಿಸಲಾಗಿದೆ. 'ವಿಶೇಷ' ವಿಭಾಗದಲ್ಲಿ ಗ್ರಂಥದ ಲಿಪಿ, ಸ್ಥಿತಿ, ಶಕಟರೇಫದ ಬಳಕೆ, ಅಸಮಗ್ರ, ಲುಪ್ತಪತ್ರಗಳ ವಿವರಣೆ, ಅದೇ ಕಟ್ಟಿನಲ್ಲಿರುವ ಇತರ ಗ್ರಂಥಗಳ ವಿವರಗಳನ್ನು ಸಂಗ್ರಹವಾಗಿ ಸೂಚಿಸಿದೆ. ಸಂಸ್ಕೃತ ಮತ್ತು ಇತರ ಭಾಷೆಯ ಗ್ರಂಥಗಳನ್ನು ಪ್ರತ್ಯೇಕವಾಗಿ ಪಟ್ಟಿಮಾಡಿ ಕೊನೆಯ ಸಂಪುಟದ ಅನುಬಂಧದಲ್ಲಿ ಕೊಡಲಾಗಿದೆ.

ಈಗಾಗಲೆ ಪ್ರಕಟವಾಗಿರುವ ನಾಲ್ಕು ಸಂಪುಟಗಳ ಮತ್ತು ಈಗ ಪ್ರಕಟವಾಗುತ್ತಿರುವ ಐದು ಸಂಪುಟಗಳ ಕೃತಿಗಳ ಮತ್ತು ಕರ್ತೃಗಳ ಅಕಾರಾದಿ ಪಟ್ಟಿಯನ್ನು ಕೊನೆಯ ಸಂಪುಟದಲ್ಲಿ ಕೊಡಲಾಗಿದೆ.

ಈ ಕಾರ್ಯದಲ್ಲಿ ಸಹಕರಿಸಿದ ವಿಭಾಗದ ಎಲ್ಲ ಸಹೋದ್ಯೋಗಿಗಳಿಗೆ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು–೬

ಬಿ. ಎಸ್. ಸಣ್ಣಯ್ಯ
ಸಂಯೋಜಕ ಸಂಪಾದಕ

## 1

| ಕೆ. ಬಿ. ೬೯೭/೧೨ | ಬಂಕಣಯ್ಯಗಳ ವಚನ | ವಚನ |
|---|---|---|
| ೬" × ೮. ೫" | ಬಂಕಣಯ್ಯ | ಸು. ೧೧೬೦ |
| ೧ ಪತ್ರ | ೧೮ ಪಂಕ್ತಿ | ೨೦ ಅಕ್ಷರ |

ಆದಿ : ಶ್ರೀಗುರು ಶಿವಲಿಂಗಸ್ವಾಮಿಗಳ ಪಾದವೆ ಗತ್ತಿ ॥ ಬಂಕಣಯ್ಯಗಳ ವಚನ। ಯೆರಡಂಬತು ಕೊಟ್ಟ ವಚನಾದ ತತ್ವದರ್ತವು। ವಚನದಲ್ಲಿ ನಿಕ್ಷೇಪ ಶಿದ್ದಿತ್ತು। ಯಿವಚನದಲ್ಲಿನುಭವ। ಲ್ಲಿ ಶೆರಗಿಂಗಲ್ಲದೆ ಅರಿಗುತ್ತಿಳಿಯು-ಬದು। ಲ್ಲಿದೆಂತ್ಯಂದಡೆ ಗುರುವಿಗೆ ಗುರುವುಂಟ್ಟೆಲ್ಲಿಂಗಕ್ಕೆ...ಗ ವುಂಟ್ಟು ॥

ಅಂತ್ಯ : ಸ್ವನ। ಗಜ। ಯಿಾಯೆರಡು। ಶರಣಂಗೆ। ಜಂಗಮಸ್ವರೂಪವೆಂದು, ಪೆರ್ವಚನರ್ತದಲ್ಲಿ ಯಿಹದು। × × × ×। ಗುಹೇಶ್ವರಲ್ಲಿಯ್ಯಾ। ಪ್ರಿಯಾ। ಬಂತಣನಿಟ್ಟ ಮುಂಡಿಗಿಯಾ। ಯೆತುವರರಿಲ್ಲಿ। ಯತ್ತುವ-ರಿರಲ್ಲಿ। ಬಸವಣ್ಣಪ್ರಿಯ ಮಹಾಪ್ರಭುವೆ ॥ ೩ ॥ ಶ್ರೀ ಶ್ರೀ ॥

ವಿಷಯ : ಶಿವ-ಶರಣ ಸ್ತುತಿ.

ವಿಶೇಷ : ಮೋಡಿ ಅಕ್ಷರ. ಸಮಗ್ರ ಕೃತಿ. ಸುದೃಢ ಪ್ರತಿ. ಇದರೊಂದಿಗೆ 'ಮಂತ್ರಗಳು' ಮುಂತಾದ ಕೃತಿಗಳಿವೆ.

—ಎಂಪಿಎಂ

## 2

| ಕೆ. ೭೬೦ | ಬಂದಣಿಕೆ ಕಲ್ಪ | ಗದ್ಯ |
|---|---|---|
| ೭.೫" × ೨.೫" | ? | ? |
| ೫೪ ಪತ್ರ | ೧೫ ಪಂಕ್ತಿ | ೩೨ ಅಕ್ಷರ |

ಆದಿ : ಶ್ರೀಗಣೇಶ ಶಾರದಾ ಗುರುಭ್ಯೋ ನಮಃ ಬಂದಣಿಕೆ ಕಲ್ಪ ಬರೆವುದಕ್ಕೆ ಶುಭಮಸ್ತು...ಆಯುರಾರೋಗ್ಯ ಐಶ್ವರ್ಯಮಸ್ತು ಶ್ರೀ ನಂಜುಡೇಶ್ವರ ಸ್ವಾಮಿ ಪಾದವೇ ಗತಿ. ಶ್ರೀ ಶ್ರೀರಸ್ತು ಶ್ರೀ ಶ್ರೀ.

ಆರಿದ್ರಾ ನಕ್ಷತ್ರದಲ್ಲಿ ಹುಣಿಸೆ ಬಂದಣಿಕೆಯಂ ತಂದು ಉಡಿಯಲ್ಲಿ ಕಟ್ಟಿ ಕಣ್ಣ ಕಣ್ಣ ಮರೆಯಬಹುದು ॥ ೧ ॥

ಪುನರ್ವಸು ನಕ್ಷತ್ರದಲ್ಲಿ ಅರಳಿ ಬಂದಣಿಕೆಯ ತಂದು ಕೈಯಲ್ಲಿರೆ ಪುತ್ರ ಸಂಪತ್ತು ॥ ೨ ॥

ಅಂತ್ಯ : ಹೂಲಿಯ ಕುಡಿಯ ಹಾಲಲಿ ಅರದು ಕುಡಿಯೆ ಪ್ರಮೇಯ ಮಾಣ್ಬ್ಗ ಬಹುಮೂತ್ರ ಪ್ರಮೇಯ ಸಹ ಮಾಣ್ಬ್ಗ। ಇರುಳುಕಣ್ಣಿಗೆ ತಗುಣೆಯ

ನಿರಲೂರೆಯುದುಯಚಲು ಕಣ್ಣುಕಾಣದು.

ವಿಷಯ : ಮಂತ್ರ, ತಂತ್ರ, ವೈದ್ಯ.

ವಿಶೇಷ : ಈ ಹಸ್ತಪ್ರತಿಯಲ್ಲಿ ಮುಖಸ್ತಿ ಮಂತ್ರ, ವೈದ್ಯ, ಸ್ತಂಭನ, ಗಜೇಂದ್ರ ಸಹಸ್ರನಾಮ, ಲಲಿತಾ ಸಹಸ್ರನಾಮ ಇತ್ಯಾದಿಗಳಿವೆ.

—ಹಕರಾ

3

| ಕೆ. ೬೭೪/೨ | ಬತ್ತೀಸಪುತ್ತಳಿ ಕಥೆ | ಗದ್ಯ |
|---|---|---|
| ೧೭″ × ೧.೪″ | ಮುಮ್ಮಡಿ ಕೃಷ್ಣರಾಜ | ೧೮೫೦ |
| ೧-೪೧ ಪತ್ರ | ■ ಪಂಕ್ತಿ | ೮೬ ಅಕ್ಷರ |

ಆದಿ : ಬತ್ತೀಸಪುತ್ಥಳಿ ಕಥೆ ಬರವದಕೆ ನಿರ್ವಿಘ್ನಮಸ್ತು ॥ ಬತ್ತೀಸಪುತ್ಥಳಿ ಕಥೆ ॥ ಕೈಲಾಸ ಪರ್ವತದಲ್ಲಿ ಪಾರ್ವತಿ ಪರಮೇಶ್ವರ...ವ ಹಾರವ ಮಾಡುವ ವೇಳೆಯಲ್ಲಿ ಪಾರ್ವತಿ ಪರಮೇಶ್ವರ ನೋಡಿ ನೂತನ ಕಥೆಗಳು ಯೇನಾದರ್ರು ವುಂಟಾದರೆ ಬುದ್ಧಿಗಲಿಸಬೇಕೆಂದು ಕೇಳಿದ್ದಕ್ಕೆ ಮುಂದಾಗಿಯೆ ಸಕಲ ಕಥೆ ಗಳನ್ನು ಹೇಳಿದೆವು. ಯಿಂನ್ನೂ ವಿಕ್ರಮಾರ್ಕನು ಕುಳಿತುಕೊಂಬ ಸಿಂಹಾಸನ ದಲ್ಲಿ ಇರುವ ಮೂವತ್ತೆರಡು ಪ್ರತುಮೆಗಳು ಹೇಳಿದ ಕಥೆಗಳು ವುಂಟು. ಅದು ಹ್ಯಾಗೆ ಯೆಂದಡೆ ಉಜ್ಜನಿ ಮಹಾಪಟ್ಟಣದಲ್ಲಿ ಚೆಂದ್ರಪ್ರಭನೆಂಬ ಬ್ರಾಂಹ್ಮಣನುಂಟ್ಟು.

ಅಂತ್ಯ : ಪುರಂದರಪುರದ ಧನದನೆಂಬ ಕೋಮಟಿಯ ಮಕ್ಕಳು ತಮ್ಮ ತಂದೆ ಬಹಳ ಧನವ ಕೂಡಿಶಿ ಅವಸಾನ ಕಾಲದಲ್ಲಿ ನಂಮ್ಮ ನಾಲ್ವರಂನ್ನು ಕರದು ತಾನು ಮಲಗಿಕೊಂಬ ಮಂಚವ ಕೋಡಿನ ಕೆಳಗೆ ಧನವ ಹೂಳಿಯಿದ್ದೇನೆ ಆ ನಾಲ್ಕು ಮಂದಿಯು ಹಂಚಿಕೊಳ್ಳ ಹೇಳಿ ಮೃತವಾದನು. ಆ ಬಗೆಯಲಿ ಮೃತಸೂತಕವ ಹತ್ತುದಿನವು ಕುಳಿದು ಬಂದು ಆ ಮಂಚದ ಕಾಲ ಕೆಳಗೆ ನಾಲ್ಕು ಮಂದಿಯು ಕೂಡಿ ಅಗೆಯಲಾಗಿ ಒಂದು ಕಾಲ ಕೆಳಗೆ ನೆಲ್ಲಹೊಟ್ಟು ವಂದು ಕೋಡಿನ ಕೆಳಗೆ ಯಲುಗಳು ವಂದು...ಶ್ರೀ ಶ್ಯಾರದ ಗುರುಭ್ಯೋಂ ನಮಃ

ವಿಷಯ : ಬೇತಾಳರ ಕಥೆಗಳು,

ವಿಶೇಷ : ೨೪ನೆಯ ಪತ್ರದ ಸ್ವಲ್ಪ ಭಾಗ ಮುರಿದು ಲುಪ್ತವಾಗಿದೆ. ಇದೇ ಕಟ್ಟಿನಲ್ಲಿ ಬಾಲರಾಮಾಯಣವೆಂಬ ಸಂಸ್ಕೃತ ಕೃತಿ ಇದೆ.

—ಕೆಆರ್‌ಎಸ್

4

| ಕ. ೧೨೭೮ | ಬತ್ತೀಸಪುತ್ತ್ರಳಿ ಕಥೆ | ಚಂಪು |
|---|---|---|
| ೮. ೬" × ೧.೮" | ? | ? |
| ೧-೧೨೧ ಪತ್ರ | ೧೧ ಪಂಕ್ತಿ | ೪೨ ಅಕ್ಷರ |

ಆದಿ : ಶ್ರೀ ಗಣಾಧಿಪತಯೇನಮಃ ॥ ನಿರ್ವಿಘ್ನಮಸ್ತು ॥ ಬತ್ತೀಶಪತ್ಥಳಿ ಕಥೆ ಬರೆಯುದಕ್ಕೆ ಶುಭಮಸ್ತು ॥ ಶೋಭನಮಸ್ತು ॥
ಶ್ರೀ ಮಹಾದೇವಿಯರ ಭತ್ತೀಶ ಪುತ್ಥಳಿಯ ಕಥೆಯಾದ್ಯಾಂತಮಂ ವರರುಪಿ ನಾರದರು ಪೇಳ್ದುದಿಳೆಯೊಳ್ಪರಯಿತೂ ॥ ಕಂಚಿ ಯಲಹಂಕನಾಡಪ್ರಭು ಚಿನ ಬೆಳ್ಳಿ ಹಕ್ಕರಿಕೆ ಅಶ್ವಪತಿರಾಯ ಶಿಲಾಗ್ನೆಯಯಿಂ ಗುಬ್ಬಿ ಭೂಪ ಯಿಾ ಕಥೆಗೇಳ್ದಂ ಕೃತಿಯ ಹೆಸರು ಬತ್ತೀಶ ಪುತ್ಥಳಿ ಕಥೆ

ಅಂತ್ಯ : ಸುರಲೋಕದಿಂದ ನಾರದ
ವರಮುನಿಯೈತರಲು ಶಾಲಿವಾಹನವೊಂದಿಸಿ
ಕರುಣದಲಿ ಪುತ್ಥಳಿಕಥೆ
ಯರುಪೆನುತಂ ಕೇಳಿ ಪೇಳ್ದುದಿಳೆಯೊಳ್ ಪರೆಯಿತೂ ॥ ೧ ॥
ಅಂತು ದಿನ ೩೭ಕ್ಕಂ ಕಥೆ ೬೩ಕ್ಕಂ ದೇವಿಯರ ಭತ್ತೀಶ ಪುತ್ಥಳಿ ಕಥೆ ಸಮಾಪ್ತ ಮಂಗಳಮಹಾ.

ವಿಷಯ : ಬೇತಾಳರ ಕಥೆಗಳು.

ವಿಶೇಷ : ಪ್ರತಿ ಸಮಗ್ರವಾಗಿದೆ, ಚೆನ್ನಾಗಿದೆ.

—ಜಿಜಿಎಂ

5

| ಕ. ೧೭೩೮ | ಬತ್ತೀಸಪುತ್ತ್ರಳಿ ಕಥೆ | ಚಂಪು |
|---|---|---|
| ೮.೪" × ೨.೫" | ? | ? |
| ೧-೬೮ ಪತ್ರ | ೧೨ ಪಂಕ್ತಿ | ೪೦ ಅಕ್ಷರ |

ಆದಿ : ಶ್ರೀ ಶಾರದಾ ಗುರುಭ್ಯೋ ನಮಃ । ಬತಿಸ ಪುತಳಿ ಕಥೆಯು ಬರೆಉವಕ್ಕೆ ನಿರ್ವಿಘ್ನಮಸ್ತು ॥
ಶ್ರೀಮದ್ಗೀರ್ವಾಣ ವೃಂದೇಶ್ವರನ ದೆಸೆಗೆ ಸಾದರಮಂ ವೀರಪ್ರತಾಪ ಕೊಡುಗ
ಭಿಮತವ ವಿಕ್ರಮಾದಿತ್ಯದೇವಂ ॥ ೧ ॥
ಬಲಿಮದನ ಭಂಜನ
ಬಲಯುತ ಪುರುಷೋತ್ತುಮನ ಭೂಜೇಕ್ಷಣಂ
ಕಲಿಮಲದುರನಪ್ರತಿಮ ಸಾರ್ವಭೌಮನು

ಜ...ರ್ತಿದ ಇತ್ತ ಕುಲಕೊತು ನಿರಂತರದೊಳು। ಸುಭವಹಂ
ಗಳಂ ಕೊಡುಗೆ ದಾತ್ರಿಗೆ ಪುತ್ತಳಿ ವಿಕ್ರಮದೇವ...ಜಂ ॥ ೨ ॥

**ಅಂತ್ಯ :** ಯಿಂತ್ತೆ ೧೮ ಕತೆ ಸಮಪ್ತ ಮಂಗಳಂ ಮಹಾ ಶ್ರೀ ಶ್ರೀ × × × ವಂದು ದಿನ ರಾಯನು ಸಮಸ್ತ ವಿದ್ವಾಂಸರು ದೊರೆಗಳು ಯಿಹಾಗ ನಂಮ ಮಗಳಿಗೆ ತಕ್ಕ ವರನ ತಂದುಕೊಡೋಲ್ಲಾರಿಯರಿ ನೀಉ ಯಲ್ಲಾದರು ಯಿದ್ದ ಪ್ರಯೋಜನವೇನು ಯನಲಾಗಿ

**ವಿಷಯ :** ಬೇತಾಳರ ಕಥೆಗಳು.

**ವಿಶೇಷ :** ಅಸಮಗ್ರ, ೧೮ ಕತೆಗಳವರೆಗಿದೆ. ಪ್ರತಿ ಶಿಥಿಲ. —ಜಜಿಎಂ

## 6

| ಕೆ. ೧೦೨೯ | ಬಭ್ರುವಾಹನನ ಕಾಳಗ | ಷಟ್ಪದಿ |
|---|---|---|
| ೯.೫" × ೧.೮" | ? | ? |
| ೨-೩೫ ಪತ್ರ | ೭ ಪಂಕ್ತಿ | ೪೮ ಅಕ್ಷರ |

**ಆದಿ :** ರಣದೊಳಂತವರಿರ್ವರತ್ತ ಮುಂನೊಂದು ಕಾರಣಕೆ ಗುರುಶಾಪವಂ ಕೊಡಲ ವಂಬಿನಮಳ ತೀರ್ಥಯಾತ್ರಾಪ್ರಸಂಗದೊ.........ಪರಿಗ್ರಹಿಸಿ ನೆರದಾ ॥ ಪಣಿರಾಜನಂದನೆಯುಉಲೂಪಿ ಪಾತಾಳದಿಂ ಮಣಿಪುರಕೆ ಬಂದು ಮೂರ್ಚ್ಛಿತ ರಾಗಿ ಸಮ...ರುಣಿಯೊಳಿಹ ದೊರೆಗಳಂ ಕರಸಿ ಮಂತ್ರಉಪಧಿಗಳಿಂ ಪಾಲಿ ಸುತ್ತಿರ್ಪಳೂ ॥ ೪೭ ॥

* * * *

ಬಳಿಕ ಹಂಸಧ್ವಜಂಗಾ ಬಭ್ರುವಾಹನಂಗಳವಿಯೊ
ಳ್ಳಾಳಗಂ ಪೂಣ್ದುದು ಕಠೋರವೆನೆ ದಳಕೆ ದಳಮು
ಗ್ಗಳಿಕೆ ದ್ರುತಿಗೆ ದ್ರುತಿ ಕೊಲೆಗೆ ಕೊಲೆ ಕೊಲ್ಗೆ ಕೋಲೂ
ಮುಳಿಸಿಂಗೆ ಮುಳಿಸು ಘಾಯಕೆಕೆ ಘಾಯಮದಟಿಸದ
ಟಳವಿಹಳಮಡಿಗಡಿಗೆ ಸಮವಾಗೆ ದೇವಪುರ
ನೀಳಯಲಕ್ಷ್ಮೀವರನ ಪಯುದ್ದನಂ ತಲೆದೂಗೆ ಮೆಚ್ಚಿ
ಸುರರುಲಿಯೆ ಕೂಡೆ ॥ ೪೭ ॥
ಪ್ರಥಮ ಸಂಧಿ ಸಂಪೂರ್ಣ ॥ ೪೭ ॥ (ಪತ್ರ ೧೦)

**ಅಂತ್ಯ :** ದಿವಸವೈದರ ಮೇಲೆ ಚಿಂತಿಪಂ ಗಜಪುರದೊ
ಳವನೀಶನೆಂದಲ್ಲಿ ಕೂ.........ವಂಗಳ
ನಿವಹಮಂ ಕುಂನ್ತಿ ಚಿತ್ರಾಂಗಧೆ ಫಣೀಂದ್ರಸುತೆ
ದೇವಕಿ ಯಶೋಧರನೂ ॥
ಪವನಜನೊಡನೆ ಹಸ್ತಿನಾವತಿಗೆ ಕಳುಹಿ ಪಾರ್ಥಿ......

**ವಿಷಯ:** ಬಭ್ರುವಾಹನನ ಕಾಳಗ

**ವಿಶೇಷ :** ಆದಿ ಅಂತ್ಯಗಳಿಲ್ಲ.

— ಜಿಜಿಎಂ

7

| ಕೆ. ಬಿ. ೬೫೮ | ಬಭ್ರುವಾಹನನ ಕಾಳಗ | ಯಕ್ಷಗಾನ |
|---|---|---|
| ೮.೨″ × ೫.೮″ | ? | ? |
| ೧-೭೧ ಪತ್ರ | ೧೫ ಪಂಕ್ತಿ | ೧೪ ಅಕ್ಷರ |

**ಆದಿ :** ಶರಣು ಶಂಕರಪುತ್ರ । ಶರಣು ಮಾಂ ಕರಿಗಾತ್ರ
ಶರಣು ವಿದ್ಯಾವಿನಯ ಶಶಧರನ ತನಯ
ಶರಣು ಸುರಸಂಪನ । ಸತ್ವಗುಣಪರಿಪೂರ್ನ
ಶರಣು ಷಣ್ಮುಖ ಜ್ಯೇಷ್ಠ । ಶರಣ ಜನರಿಷ್ಟ ಶರಣು ॥ ೧ ॥

× × ×

ವ ॥ ಭಾರತಿಯು ಬಲಗೋಡು ಶುಕ ಶೌನಗಾರ್ಯಂದಿಂಗೆರಗಿ
ನಾರದಾದಿ ವೇದವ್ಯಾಸ ಮುನಿಯಂಘ್ರಿಯಂ ಭಜಿಸುತ್ತ
ಧಾರುಣಿಗೆ ಪಿರಿದಾಗಿರುವ ಅಶ್ವಮೇಧದ ಕಥೆಯನು
ಧಾರುಣಿಯೊಳೊಲಿವಂತೆ ವರ್ಣಿಸುವೆ ಯಕ್ಷಗಾನ
ಕ್ರಮದಿಂ ಶ್ರುತಿ ತಾಳ ಬಂದಿದೆಕೊ
ವಾರುಧಿಯ ತಡಿಯಲ್ಲಿ ನೆಲಶಿರುವ ಉಡುಪಿಕೃಷ್ಣನ ಕರುಣಕಟಾಕ್ಷದಿಂದ ॥ ೭ ॥

**ಅಂತ್ಯ :** ಬೆತ್ತಲೆ ನಿಂತಿದ್ದ ಬೌದ್ಧನಿಗೆ
ಅರ್ತಿಇಂದಲಶ್ವವನೇರಿದಗೆ
ಹತ್ತಾವತಾರದಿ ಭಕ್ತರುದ್ಧರಿಶಿದ
ಅಚ್ಯುತಪುರಿ ಶ್ರೀಕೃಷ್ಣನಿಗೆ ॥ ೫೨೧ ॥
ಮಂಗಳಂ ಜಯ ಮಂಗಳಂ ॥ ಬಬ್ರುವಾಹನನ ಕಾಳಗ ಸಂಪೂರ್ಣ ಶ್ರೀ. ವ್ಯಯನಾಮ ಸಂವತ್ಸರದ ಜೇಷ್ಠ ಶುದ್ಧ ೧ ಬೃಹಸ್ಪತಿ ವಾರದಲ್ಲು ಸಂಪೂರ್ಣಂ ಶ್ರೀ.

**ವಿಷಯ :** ಅಶ್ವಮೇಧಯಾಗ ಪ್ರಸಂಗದಲ್ಲಿ ಅರ್ಜುನನೊಡನೆ ಬಭ್ರುವಾಹನನು ಯುದ್ಧ ಮಾಡಿದ ಕಥೆ.

**ವಿಶೇಷ :** ಗ್ರಂಥವು ಪೂರ್ತಿಯಾಗಿದೆ. ಕಾಗದವು ತೆಳುವಾಗಿದೆ. ಪತ್ರದ ಎರಡು ಪಾರ್ಶ್ವಗಳಲ್ಲಿ ಬರವಣಿಗೆ ಇದೆ.

—ಕೆಆರ್‌ಎಸ್

## 8

ಕೆ. ಬಿ. ೭೨೯/೧೫ ಬಸವ ಅಷ್ಟೋತ್ತರ ಕಂದ, ರಗಳೆ

೩.೭" × ೩" ? ?

೧೩೯-೧೪೫ ಪತ್ರ ೧೩ ಪಂಕ್ತಿ ೧೩ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಗುರುವೆ ಗತಿ ಬಸವ ಅಷ್ಟೋತ್ರ
ಬರೆಯುವದಕ್ಕೆ ಶುಭಮಸ್ತೂ ॥
ಶ್ರೀ ಗುರುವೆ ಚಿದ್ಗನಸುಖದ
ಸಾಗರವೆ ಯೆಂನ್ನ ಹೃದಯ ಸರಶಿರುಹದೊಳ್
ಬೇಗದಿ ನೆಲೆಗೊಳುತಿರ್ದನು
ರಾಗದಿ ಸಲಹೈಯು ತಂದೆ ಬಹುಕೃಪೆಯಿಂದಾ ॥
ಶ್ರೀಮಹ ವೃಷಭಾದಿ ಪ್ರಶಿದ್ಧನಾಮ ಬಸವಲಿಂಗ
ಧಾಮನಿದಿಶಿಕೆಂದು ಕೋಟಿಧಾಮಶೀಮ ಬಸವಲಿಂಗ ॥

ಅಂತ್ಯ : ತವಕದಲಿ ಬಸವನಾಮವ
ದಿವರಾತ್ರೆಯೊಳೊಂಮ್ಮೆ ಸ್ತೋತ್ರವ ಮಾಡಲು
ಆವಾತನಾದೊಡಾಗಲಿ
ಕಾವನು ತಾ ಬಸವಲಿಂಗ ಪಾದವಿತ್ತೂ ॥ ಶ್ರೀ ಶ್ರೀ.

ವಿಷಯ : ಬಸವನ ೧೦೮ ನಾಮಗಳ ಸ್ತುತಿ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರೊಡನೆ ಶ್ರೀಕೃಷ್ಣೇಂದ್ರಗೀತೆ ಮೊದಲಾದ ೧೫ ಕೃತಿಗಳಿವೆ. ಈ ಕೃತಿಯ ಬರವಣಿಗೆ ಉಳಿದ ಕೃತಿಗಳಿಗಿಂತ ಭಿನ್ನವಾಗಿದೆ.

—ಜಿಜಿಎಂ

## 9

ಕೆ. ೭೧೬/೧ ಬಸವ ಕಂದಗಳು ಪದ್ಯ

೮" × ೧" ? ?

೧೪-೧೫ + ೨೧ ಪತ್ರ ೬ ಪಂಕ್ತಿ ೩೨ ಅಕ್ಷರ

ಆದಿ : ಬಸುರೊಳ್ಬರಲಯ್ಯ.........
ಶಶಿಧರನಂ ಸಾಧಿಸುವದು ಸಾಸಿರಪದನಾ ॥
ವಸರುತ್ತಿಯ ನುಡಿಸುವದು ತಾ
ಬಸವ......................ಬಸವ ॥ ೧ ॥
ಪ್ರಣವದ ಬಳ್ಳಿ ಬಕಾರಂ
ಪ್ರಣವದ ನಾದಾನುಸಾರ ಸಾರಸಕ......೦ ॥

ಪ್ರಣವದ............ಂದು ವಕಾರಂ
ಪ್ರಣವಾಕ್ಷರತ್ರಯಂ ಬಸವೇಶಾ ॥ ೨ ॥

**ಅಂತ್ಯ :** ಬಸವಂ ಭಕ್ತಿಗೆ ಮೂಲಂ
ಬಸವ ಕಾಲಂಗೆ ಕಾಲ ಅನು.........ಶೀಲಂ
ಬಸವ..........ಗಮಲೋಲಂ
ಬಸವಾ ರಕ್ಷಿಪ್ಪುದೇನ ಸಂಗನಬಸವಾ ॥
ಶ್ರೀ ಬಸವಾ ಕವಚ ಕಂದಗಳು ಮಂಗಳಂ ಶ್ರೀ ಶ್ರೀ ಶ್ರೀ.

**ವಿಷಯ :** ಬಸವಸ್ತೋತ್ರ.

**ವಿಶೇಷ :** ಇದೇ ಕಟ್ಟಿನಲ್ಲಿ ೧೫ರಿಂದ ೨೮ ಪತ್ರಗಳಲ್ಲಿ ಸಂಸ್ಕೃತ ಗ್ರಂಥ 'ಶಿವಕವಚ' ಇದೆ. ಗ್ರಂಥ ಅಸಮಗ್ರ. ಮಧ್ಯೆ ಮಧ್ಯೆ ಹುಳುಗಳು ತಿಂದು ಎಲ್ಲಾ ಪತ್ರಗಳನ್ನೂ ರಂಧ್ರಮಾಡಿವೆ. ೨೧ನೆಯ ಪತ್ರ ಮುರಿದುಹೋಗಿ ಸ್ವಲ್ಪ ಮಾತ್ರ ಉಳಿದಿದೆ. ಶಿಥಿಲಪ್ರತಿ.

—ಎಸ್‌ಬಿ

## 10

| ಕ. ೧೨೫೬ | ಬಸವಗಣ ಚಾರಿತ್ರ | ಭಾಮಿನೀ ಷಟ್ಪದಿ |
|---|---|---|
| ೧೩.೫" × ೧.೫" | ಚರಪತಿ | ? |
| ೧-೬೦ ಪತ್ರ | ೬ ಪಂಕ್ತಿ | ೭೨ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ ॥ ಶಿವನು ಪಾರ್ವತೀದೇವಿಯರಿಗೆ ನಿರೂಪಿಸಿ ಪೇಳ್ದ ಬಸವಗಣ ಚಾರಿತ್ರವ ಬರೆವದಕ್ಕೆ ಶುಭಮಸ್ತು। ಶೋಭನಮಸ್ತು। ಆಯುರಾರೋಗ್ಯ ಐಶ್ವರ್ಯಮಸ್ತು ॥

ಸಾಕ್ಷಿ ॥ ಅನಾದಿ ಆದಿ ರೂಪಾಯ। ನಿರ್ಗುಣಿನ ಗುಣಿನ ಗುಣಾತ್ಮನೆ।
ಸಮಸ್ತ ಲೋಕನಾಥಾಯ। ಕಥಾಯಾಮಿ ಮಮ ಪ್ರಭೂ ॥ ೧ ॥

× × × ×

ಪುಲ್ಲ ॥ ಶ್ರೀ ಬಸವ ಲೀಲಾ ವಿನೋದವ
ಶ್ರೀ ಬಸವನ ಘನತೇಜಮಹಿಮೆಯ
ಶ್ರೀ ಬಸವ ಪುಣ್ಯಾಖಿಳ ಚರಿತೆಯ ಗಿರಿಜೆ ಕೇಳೆಂದಾ ॥

ಪದನೂ ॥ ಗಿರಿಜೆ ಕೇಳ್ಮುಂನಾದಿಯಲಿ ತಾ
ಪರಮನಲ್ಲದೆ ಸ್ಮರಿಸೆ ಬಸವನ
ಚರಣಕಮಲವ ಪಿಡಿದೆ ನಾಥನ ಘನಕೆ ಘನವೆನಿಸಿ

ಹರಣದೊಡೆಯನು ಬಸವರಾಜನು
ಕರಣದೊಡೆಯನು ಬಸವರಾಜನು
ಮರಣವಿರಹಿತನಾಗಿ ಕೊಂಡಾಡಿದನು ಕೈಲಾಸದಿ ॥ ೧ ॥

ಅಂತ್ಯ : ಬಸವ ಜಯ ಜಯ ಭಕ್ತವತ್ಸಲ
ಶಿಶುವೆ ಜಯ ಜಯ ಶಿವನ ಪೂಜೆಯ
ಕುಸುಮಜಾತೆಯ ಮಂತ್ರಮಾತೆಯೆ ಗೌರಿ ಜಯ ಜಯತೂ ॥
ವಸುದೆ ಶ್ರೀ ಕಲ್ಯಾಣಪಟ್ಣದಿ
ಬಸವರಾಜನ ಘನಪವಾಡವ
ಶಶಿಮುಖಿಯು ಪಾರ್ವತಿಗೆ ಪೇಳದ ಶಿವನೆ ಜಯುಜಯುತೂ ॥ ೬೧ ॥

× × ×

ಭುವನದೊಳು ಶಿವಗಂಗೆ ಸ್ಥಲಕೆಯು
ಶಿವನು ಶ್ರೀ ಗುರುಸಂಗಮೇಶನ
ಕುವರ ಚರಪತಿಯೆನಿಪ್ಪ ನಾಮದ ತರಳಶಿವಕನಾ
ಭವಭವಂಗಳ ಕಳದು ಹೃದಯದಿ
ರವಿಯು ಕೋಟಿಪ್ರಕಾಶ ಬೆಳಗಲಿ ॥ × × ×
ಅಂತು ಸಂಧಿ...ಕ್ಕಂ ಪದನ ೮೩೭ಕ್ಕಂ ಮಂಗಳ ಮಹಾಶ್ರೀ.

ವಿಷಯ : ಬಸವನ ಚರಿತ್ರೆ.

ವಿಶೇಷ : ಪತ್ರಗಳು ಕೆಲವು ತುಂಡಾಗಿವೆ. ಅನೇಕ ಪತ್ರಗಳನ್ನು ಮಧ್ಯೆ ಮಧ್ಯೆ ಗೆದ್ದಲು ತಿಂದಿದೆ. ಅಕ್ಷರಗಳು ಸುಂದರವಾಗಿವೆ.

—ಎಂಪಿಎಂ

## 11

ಕೆ. ೯೪೪/೧೯ | **ಬಸವ ಚಾರಿತ್ರ** | ಭಾಮಿನೀ ಷಟ್ಪದಿ
೮" × ೨.೨" | ? | ?
೧೧೨–೧೧೮ ಪತ್ರ | ೧೧ ಪಂಕ್ತಿ | ೩೭ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯನಮಃ ॥ ಬಸವ ಚಾರಿತ್ರ ॥
ಶ್ರೀ ಬಸವಲೀಲಾ ವಿನೋದವು
ಶ್ರೀ ಬಸವ ಘನತೇಜ ಮಹಿಮೆಯ
ಶ್ರೀ ಬಸವ ಪುಣ್ಯಾಭಿಚರಿತೆಯ ಗಿರಿಜೆ ಕೇಳೆಂದ ॥ ಪದ ॥
ಗಿರಿಜೆ ಕೇಳಾ ಆದಿಯಲಿ ನಾ
ಬಸವನಲ್ಲದೆ ಭಜಿಸೆ
ಬಸವನ ಪಾದವಲ್ಲದೆ ಪಿಡಿಯೆನಾತನ ಘನಕೆ ಘನವೆಂದು

ಬಸವನೆಂನಯು ಪ್ರಾಣಲಿಂಗವು
ಬಸವನೆಂನಯು ಭಾಗ್ಯವೆನುತವೆ
ಬಸವನನು ಕೊಂಡಾಡಿದೆನು ಕೈಲಾಸಪುರದೊಳಗೆ ॥ ೧ ॥

**ಅಂತ್ಯ :** ಹಿಂದೆ ಜಲಮಯವಾದ ಲೋಕವ
ತಂದು ರಕ್ಷಿಸಿ ಸಲಹಿ ದೇವರ
ತಂದು ಭೂಮಿಗೆ ನಿಲಿಸಿ ಕರುಣ ಪ್ರಸಾದನುಡಿಯಿಂದಾ
ಮುಂದೆ ಪ್ರಮಥರು ಪೊಗಳುತಿರಲಾ
ನಂದದಿಂದಲಿ ಜಯ ಜಯತು ಜಯತೆಗೆ
ಬಂದು ಸಿದ್ಧಾಪರವ ನೆಲಸಿದ ನಮ್ಮ ಬಸವೇಶಾ ॥

ಬಸವ ಚಾರಿತ್ರಾ ಸಮಾಪ್ತವು.

**ವಿಷಯ :** ಬಸವನ ಚರಿತ್ರೆ.

**ವಿಶೇಷ :** ಇದೇ ಕಟ್ಟಿನಲ್ಲಿ ಬಸವ ತ್ರಿವಿಧಿಯೇ ಮೊದಲಾದ ೨೭ ಕೃತಿಗಳಿವೆ.

—ಜಿಜಿಎಂ

## 12

| ಕ ೧೦೧೧/೩ | ಬಸವ ಚಾರಿತ್ರ | ಭಾಮಿನೀ ಷಟ್ಪದಿ |
|---|---|---|
| ೧೩" × ೧.೮" | ? | ? |
| ೧–೧೩ ಪತ್ರ | ೯ ಪಂಕ್ತಿ | ೮೦ ಅಕ್ಷರ |

**ಆದಿ :** ಶ್ರೀಗುರುಬಸವ ಲಿಂಗಾಯ ನಮಃ। ಬಸವ ಚಾರಿತೆಯ ಬರೆವದಕ್ಕೆ
ಶುಭಮಸ್ತು × × × ಭಾಮಿನಿಷಟ್ಪದಿ । ಶ್ಲೋಕ
ಅನಾದಿ ಆದಿರೂಪಾಯ ನಿರ್ಗುಣಾ ಗುಣಾತ್ಮನೆ
ಸಮಸ್ತ ಲೋಕನಾಥಾಯ ಕಥಾಯ ವಿಮಲ ಪ್ರಭು ॥ ೧ ॥

× × × ×

ಶ್ರೀ ಬಸವಲೀಲಾವಿನೋದವ
ಶ್ರೀ ಬಸವ ಘನತೇಜಮಹಿಮೆಯ
ಶ್ರೀ ಬಸವ ಪುಣ್ಯಾಖಿಳ ಚರಿತೆಯಾ ಗಿರಿಜೆ ಕೇಳೆಂದ ॥ ೧ ॥

**ಅಂತ್ಯ :** ಬಸವ ಜಯ ಜಯ ಭಕ್ತವತ್ಸಲ
ಶಿಶುವೆ ಜಯ ಜಯ ಶಿವನಪೂಜೆಯ
ಕುಸುಮಜಾತಿಯ ಮಂತ್ರಮಾತೇ ಮಾಗವುರಿ ಜಯ ಜಯತು
ವಸುಧೆ ಶ್ರೀ ಕಲ್ಯಾಣಪಟ್ಟಣ
ಬಸವರಾಜನ ಘನಪವಾಡವ
ಶಶಿಮುಖಿಯು ಪಾರ್ವತಿಗೆ ಹೇಳಿದ ಶಿವನೆ ಜಯ ಜಯತು ॥ ೩೩ ॥

ಇಂತೀ ಐವತ್ತೆರಡು ವಿಧಾನದಲ್ಲಿ ನಿಪುಣನಾದಾತನು ನಮ್ಮ ಬಸವಣ್ಣನು. ಆ ಬಸವಣ್ಣನ ದಿವ್ಯ ಶ್ರೀಪಾದಪದ್ಮಂಗಳಿಗೆ ಅಹೋರಾತ್ರಿಯಲ್ಲೂ ನಾನು ನಮೋ ನಮೋಯೆಂದು ಬದುಕಿದೆನು ಕಾಣಾ ಗುರು ಚೆನ್ನಮಲ್ಲಿಕಾರ್ಜುನ ಪ್ರಭುವೆ.

ಅಂತು ಸಂಧಿ ೩ ಕ್ಕಂ ಪದನು ೧೬೭ ಸಾಕ್ಷಿ ೬೮ ವಚನ ೧ ಉಭಯಂ ೨೩೧.ಕ್ಕಂ ಮಂಗಳ ಮಹಾಶ್ರೀ.

ವಿಷಯ : ಬಸವನ ಚರಿತ್ರೆ.

ವಿಶೇಷ : ಇದರೊಡನೆ ವಚನಗಳು, ದಾರಚಕ್ರದ ಕಂದ ಮೊದಲಾದ ಆರು ಕೃತಿಗಳಿವೆ.

—ಬಿಎಸ್‌ಎಸ್

## 13

| ಕೆ. ೧೧೬೩/೧ | ಬಸವ ಚಾರಿತ್ರ | ಭಾಮಿನೀ ಷಟ್ಪದಿ |
|---|---|---|
| ೧೭.೫" × ೧.೫" | ? | ? |
| ೧-೨೨ ಪತ್ರ | ೬ ಪಂಕ್ತಿ | ೭೪ ಅಕ್ಷರ |

ಆದಿ : ಶ್ರೀಗುರು ಚನ್ನಬಸವೇಶ್ವರನ ಚರಣಾರವಿಂದವೇ ಗತಿ । ಶ್ರೀ ಗಣಾಧಿಪತಿಯೇ ನಮಃ । ಶ್ರೀ ಶಾರದಾಂಬಯು ನಮಃ । ಶ್ರೀ ಗುರು ಪ್ರಸಂನಾ ॥ ಬಸವ ಚಾರಿತ್ರ ಬರೆವುದಕ್ಕ ಶುಭಮಸ್ತು । ಶೋಭನಮಸ್ತು .....ರೋಗ್ಯ ಐಶ್ವರ್ಯಮಸ್ತು ॥ ಶ್ರೀರಸ್ತು ॥

ಶ್ಲೋಕ : ಅನಾದಿ ಆದಿ ರೂಪಾಯಾ । ನಿರ್ಗುಣಾಯ ಗುಣಾತ್ಮನೇ ॥ ನಮಸ್ತೆ ಲೋಕನಾಥಾಯ ಕಥಾ

ಅಂತ್ಯ : ದ್ವೈತ ಅದ್ವೈತವ ನುಡಿವನಲಾ । ಕಾಲೋಚಿತವ ಬಲ್ಲ । ಕ್ರಮಯುಕ್ತನಾಗಿಹ ಷಡುಸ್ಥಲಭರಿತ । ಸರ್ವಾಂಗಲಿಂಗಿ । ಯಿಂತೀ ಐವತ್ತೆರಡು ವಿಧಾನದಲ್ಲಿ ಲಿಂಗ ಜಂಗಮುದಾಯಂಕವನರಿಯಲ್ಕೆ ಶುಲಭೂಪಾಯದಿಂದಿದಿರಿ ಬಾಹ್ಯಸ್ಥಲಕೆ ಗುರುವಾಗೀ ॥ ದಾಯಿಡೋರಿ ಸಮಸ್ತ ಭಕ್ತರ । ಕಾಯವನಾ ಪಾವನು ಮಾಡುವಾ । ರಾಯ ಪೂರ್ವಾಚಾರಿ ಸಂಗನ ಬಸವ ಶರಣಾರ್ತಿೀ ॥ ೩೪ ॥ ಅಂತು ಸಂಧಿ ೩ಕ್ಕಂ ಪದನು ೧೬೭ಕ್ಕಂ ॥ ಶ್ಲೋಕ ೬೪ಕ್ಕಂ ಉಭಯಂ ಪದ ಗ್ರಂಥ ಸಹವಾಗಿ ೭೩೫ಕ್ಕಂ । ಮಂಗಳ ಮಹಾ ಶ್ರೀ ಶ್ರೀ ॥ × × × ಶುಭಕೃತುನಾಮ ಸಂವತ್ಸರದ ಜೇಷ್ಟ ಬಹುಳ ೮ ಯಲ್ಲು ಬಸವಚಾರಿತ್ರ ಗುರುವಾರಂ ಯೇಳನೆ ತಾಸಿಗೆ ಮುಗಿದುಯಿದ್ದಿತು ॥

ವಿಷಯ : ಬಸವನ ಚರಿತ್ರೆ.

ವಿಶೇಷ : ಅಕ್ಷರಗಳು ಚೆನ್ನಾಗಿವೆ. ಕೆಲವೆಡೆ ತ್ರುಟಿತವಾಗಿದೆ. ಇದೇ ಕಟ್ಟಿನಲ್ಲಿ ಸಿದ್ಧೇಶ್ವರ ಸ್ತೋತ್ರ, ಉದಯರಾಗ ಎಂಬ ಇನ್ನೆರಡು ಕೃತಿಗಳಿವೆ.

—ಎಂಪಿಎಂ

## 14

| ಕೆ. ೧೬೮೨ | ಬಸವ ಚಾರಿತ್ರ | ಭಾಮಿನೀ ಷಟ್ಪದಿ |
|---|---|---|
| ೮.೪" × ೧.೩" | ? | ? |
| ೧-೫೩ ಪತ್ರ | ೬ ಪಂಕ್ತಿ | ೩೬ ಅಕ್ಷರ |

ಆದಿ : ಶುಭಮಸ್ತು ॥ ಶ್ರೀಗುರು ಬಸವಲಿಂಗಾಯ ನಮಃ × × × ಬಸವಚರಿತೆ ಬರೆಯುಂವದಕ್ಕೆ ನಿರ್ವಿಘ್ನಮಸ್ತು ॥
ಅನಾದಿ ಆದಿರೂಪಾಯ ನಿರ್ಗುಣಾಯ ಗುಣಾತ್ಮನೇ
ಸಮಸ್ತ ಲೋಕನಾಥಾಯಃ ಕರ್ತಾಯ ಮಮ ಪ್ರಭೂ ॥ ೧ ॥ × × ×
ಭಾಮಿನೀಷಟ್ಪದಿ ॥ ಶಾಂತಮಲಹರಿ ॥
ಶ್ರೀ ಬಸವಲೀಲಾವಿನೋದವ
ಶ್ರೀ ಬಸವನ ಘನತೇಜಮಹಿಮೆಯು
ಶ್ರೀ ಬಸವ ಪುಣ್ಯಾಭಿಚರಿತೆಯ ಗಿರಿಜೆ ಕೇಳೆಂದಾ ॥ ಪ ॥
ಗಿರಜೆ ಕೇಳ್ಳುಂ ಆದಿಯಲಿ ತಾಂ
ಪರಮನಲ್ಲದೆ ಸ್ಮರಿಸೆ ಬಸವನ
ಚರಣಕಮಲವ ಪಿಡಿವೆನಾಥನ ಘನತೆ ಘನವೆಂದೂ
ಹರಣದೊಡೆಯನು ಬಸವರಾಜನು
ಕರುಣದೊಡೆಯನು ಬಸವರಾಜನು
ಮರಣವಿರಹಿತನಾಗಿ ಕೊಂಡಾಡಿದನು ಕೈಲಾಸಪುರದೊಳಗೆ ॥ ೧ ॥

ಅಂತ್ಯ : ಷಡುಸ್ಥಲಬರಿತನೂ । ಸರ್ವಾಂಗಲಿಂಗಿ ದಾಸೋಹದ...ನನೂ ಇಂತಿ ಅೞವತ್ತೆರಡು ವಿಧಾನದಲ್ಲಿ ನಿಪುಣನಾದವನೂ । ನಂ ಸವಂಣನೂ । ಆ ಬಸವಂಣನ ಪಾದ್ಪದ್ಮಂಗಳಿಗೆ ತ್ರಿಸಂಧ್ಯಾ ಅಹೆ...ತ್ರೆಯಲ್ಲು ನಮೊ ನಮೊಯೆಂದು ಬದುಕಿದೆನು ಪಂಚಸ್ಥಲ ಶಿಕ್ಕೆ ಸಾಕ್ಷಿ ಸಹಾ...ಕ್ಕಾಂ ಮಂಗಳಮಹಾ ಶ್ರೀ ಶ್ರೀ.

ವಿಷಯ : ಬಸವಣ್ಣನ ಚರಿತ್ರೆ.

ವಿಶೇಷ : ಸಮಗ್ರ. ಕೆಲವು ಗರಿಗಳ ತುದಿ ಮುರಿದಿದೆ.

—ಜಿಜಿಎಂ

## 15

| | | |
|---|---|---|
| ಕ. ೧೬೯೪ | ಬಸವಣ್ಣನವರ ವಚನ | ವಚನ |
| ೧೭.೩" × ೨.೧" | ಬಸವಣ್ಣ | ಸು. ೧೧೬೦ |
| ೧-೬೬ ಪತ್ರ | ೮ ಪಂಕ್ತಿ | ೭೪ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ ! ಶ್ರೀ ವಿರಕ್ತಿದೇಶಿಕೇಂದ್ರಾಯ ನಮಃ ! ಬಸವರಾಜದೇವರ ಷಡುಸ್ಥಲದ ವಚನ। ಪಿಂಡಸ್ಥಳ। ಉದಕದೊಳಗೆ ಬೈಚಿಟ್ಟ। ಬಯಕೆಯು ಕಿಚ್ಚಿನಂತೆಯಿದ್ದಿತ್ತು ಸಸಿಯೊಳಗಣ ರಸದ ರುಚಿ ಯಂತೆ ಯಿದ್ದಿತ್ತು। ನನೆಯೊಳಗಣ ಪರಿಮಳದಂತೆ ಯಿದ್ದಿತ್ತು। ಕೂಡಲ ಸಂಗಮದೇವಾ ಕಂನ್ನೆಯ ಸ್ನೇಹದಂತೆ ಯಿದ್ದಿತ್ತು ॥ ೧ ॥

**ಅಂತ್ಯ :** ಶ್ರೀ ಭಕ್ತಿಸ್ಥಲಕ್ಕೆ ಸೇರಿದ ವಚನ ೫೨೭। ಮಹೇಶ್ವರಸ್ಥಲಕ್ಕೆ ೨೪೦ ಪ್ರಸಾದಿ ಸ್ಥಲಕ್ಕೆ ೩೦ ಪ್ರಾಣಲಿಂಗಿಸ್ಥಲಕ್ಕೆ ೫೮ ಶರಣಸ್ಥಲಕ್ಕೆ ೬೫ ಐಕ್ಯಸ್ಥಲಕ್ಕೆ ೪೧ ಅಂತು ಸ್ಥಲ ೬ಕ್ಕಂ ಮಿಶ್ರ ೩೬ಕ್ಕೆ ಸೇರಿದ ವಚನ ವೊಟ್ಟು ೯೬೦ಕ್ಕಂ ಸಮಾಪ್ತಃ ॥ ಶ್ರೀಮಹೀಸೂರ ಚಾಮುಂಡಾದ್ರಿ ಪಂಚಗವಿಮಠಕ್ಕೆ ಕಾರಣ ಕರ್ತರಾದ ಸಂಲೆಗಾವಿ ಚರಮೂರ್ತಿಗಳು ಶಿವಬಸವದೇಶಿಕೇಂದ್ರರಿಗೋಸ್ಕರ ತಯಾರಾದ ಬಸವೇಶ್ವರನ ಷಡುಸ್ಥಲದ ವಚನ ಶ್ರೀ ಶಾಲಿವಾಹನಶಕ ೧೭೬೩ರಲ್ಲಿ ಬರದಂತಾ ವಚನ. ಯಿದೆ ಶಾಲಿವಾಹನಶಾಖೆ ೧ನೆ ಇಶ್ವರ ಸಂವತ್ಸರದಲ್ಲಿ ಮೈಯ್ಸೂರ ಸೌಸ್ತಾನದ ಶ್ರೀಚಾಮರಾಜ ವಡೆಯರವರ ಮಹಲಿನಲ್ಲಿ ಯಿರುವ ಗು ॥ ಬಸವಲಿಂಗಪ್ಪನವರ ಭಾವಮೈದ ನಂಜಪ್ಪನು ಬರದು ಯಿರುವ ಬಸವೇಶ್ವರ ವಚನ ಷಡುಸ್ಥಲದ ವಚನವಾನಾ ಶಾಂತ ಮಲ್ಲಪ್ಪನವರಿಗೆ ಗುರಿಕಾರ್ರು ಅವಸರದ ಹೋಬಳಿ ಪುಟ್ಟಣ್ಣನವರು ಯಿ ಸ್ವಾಮಿಗಳಿಗೆ ವಪ್ಪಿಸಿದಂತ್ತಾ ವಚನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ವೀರಶೈವ ಷಟ್ಸ್ಥಲಸಿದ್ಧಾಂತ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

## 16

| | | |
|---|---|---|
| ಕ. ೯೯೪.೧ | ಬಸವ ತ್ರಿವಿಧಿ | ತ್ರಿವಿಧಿ |
| ೮" × ೨.೨" | ಸಿದ್ಧರಾಮ | ಸು. ೧೧೬೦ |
| ೧-೭ ಪತ್ರ | ೧೩ ಪಂಕ್ತಿ | ೪೪ ಅಕ್ಷರ |

**ಆದಿ :** ಶ್ರೀ ಗುರುಬಸವಲಿಂಗಾಯನಮಃ ಬಸವ ತ್ರಿವಿಧಿ ॥ ಕಂದ ॥
ಬಸವೇಶನೆ ಬಸವರಾಜನೆ
ಬಸವಣ್ಣನೆ ಬಸವ ತಂದೆ ಬಸವಕೃಪಾನಿಧಿ

ಬಸವ ಪರಮೇಶ್ವರೀಶ್ವರ
ಬಸವ ಪ್ರಮಥಾಧಿದೇವ ರಕ್ಷಿಸು ಬಸವಾ ॥ ೧ ॥

ತ್ರಿವಿಧಿ ॥ ಪ್ರಥಮಂತು ಬಸವಣ್ಣ ದ್ವಿತೀಯಂತು ಲಿಂಗವು
ತ್ರುತಿಯಂತು ತತ್ವ ಬ್ರಹ್ಮಾಂಡವೆಲ್ಲ
ಅಕಳಂಕ ಗುಣನಿಧಿ ಚಿದಾನಂದ ಬಸವಂಗೆ
ಭಕ್ತನಾದೆನು ಗುರುವೆ ಯೋಗಿನಾಥಾ ॥ ೧ ॥

ಅಂತ್ಯ : ಸ್ವವಾಹ್ವಯದ ಚಿದ್ರಸ ಷಟ್ಸ್ಥಲ
ಪಂಚವಿಂಶತಿ ಶತತ್ರಿವಿಧಿಯಂ
ವೊಸೆದೋದಿ ಕೇಳಿ ಪಠಿಸಲು
ವಸವಪ್ಪುದು ಭುಕ್ತಿ ಸುಖ ಸಾಂಮ್ರಾಜ್ಯಾ ॥
ಬಸವಸ್ತೋತ್ರದ ತ್ರಿವಿಧಿ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಬಸವೇಶ್ವರನ ಸ್ತೋತ್ರ.

ವಿಶೇಷ : ಪ್ರತಿ ಶುದ್ಧವಾಗಿದೆ. ಶಕಟರೇಫವಿದೆ. ಇದರ ಜೊತೆಯಲ್ಲಿ ಮಿಶ್ರಸ್ತೋತ್ರ ತ್ರಿವಿಧಿಯೇ ಮೊದಲಾದ ೨೭ ಕೃತಿಗಳಿವೆ. ೮೪–೧೧೦ ಪತ್ರಗಳಿಲ್ಲ.

—ಜಿಜಿಎಂ

## 17

| ಕೆ. ೧೫೩೯/೫ | ಬಸವ ತ್ರಿವಿಧಿ | ತ್ರಿವಿಧಿ |
|---|---|---|
| ೧೩.೩" × ೧.೭" | ? | ? |
| ೧ ಪತ್ರ. | ೯ ಪಂಕ್ತಿ | ೮೫ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ಃ ಬಸವ ತ್ರಿವಿದಿ ಬರಉದೂ ॥
ಜಯ ಜಯ ಬಸವೈಯ್ಯ ಜಯ ಜಯ ಬಸವರಸ
ಜಯ ಜಯ ಬಸವಲಿಂಗ ಗುರುತುದೆಯೆ
ಜಯ ಸಿದ್ಧಿಯನಿತ್ತು ಸಲಹಯ್ಯ ॥

ಅಂತ್ಯ : ಬೇವಿಯಂ ಕಾಯೊಳು ಆವ ರುಚಿಯೊ ಬಸವ
ದೇವ ನೀವೆಂನವರೆಯಲು ಹುರುಳಿಲ್ಲ
ಪಾವಂನಮೂರ್ತಿ ಕೃಪೆಯಾಗಂ ॥ ೧೪ ॥
ಕೆಡುವೊಡಲ ನಾನಂಬಿ ಮ್ಮುಡ ನಿಂಮ ನೆನೆಯಾದೆ
ಪೊಡವಿ...

ವಿಷಯ : ಬಸವಣ್ಣನ ಸ್ತುತಿ.

ವಿಶೇಷ : ಅಸಮಗ್ರ. ೧೪ ಪದ್ಯಗಳು ಮಾತ್ರ ದೊರೆತಿವೆ ಇದೇ ಕಟ್ಟಿನಲ್ಲಿ ರಾಘವಾಂಕ ಚಾರಿತ್ರ ಮೊದಲಾದ ೫ ಕೃತಿಗಳಿವೆ. —ಜಿಜಿಎಂ

## 18

ಕೆ. ೧೭೬೩/೭ ಬಸವಪವಾಡದ ಸೋಬಾನೆ ಹಾಡು

೯.೫" × ೧.೪" ಸಿದ್ಧಲಿಂಗೇಶ ?

೫ ಪತ್ರ ೫ ಪಂಕ್ತಿ ೪೦ ಅಕ್ಷರ

ಆದಿ : ಶ್ರೀರಾಗ
ಕಾಲಾಣ್ಯ ಪಟ್ಟಣದಲ್ಲಿ ಪವಾಡವನಿಲದೆ
ಗೆಲುಸಿದನ್ಯಾರಂಮ್ಮ ಸಕಿಯುಳೆ ಸೋಬನವೋ ॥ ಪಲ್ಲ
ಎಲ್ಲ ದೇವರದೇವ ಅಲ್ಲಮುಪ್ರಭುರಾಯ
ಬಲ್ಲಿದ ಬಸವರಾಜೇಂದ್ರನೆ ಸಕಿಯಾಳೇ ॥ ಸೋಬಾನೆ ॥ ೧ ॥

ಅಣಕಾದಿ ಪರಶಿವ ಹಣೆಗಣ್ಣ ಕೇಳತ್ತೆ
ಪಣೆಗಣ್ಣ ತೆರದಿತ್ತನ್ಯಾರಮ್ಮ ಸಕಿಯಾಳೆ ॥ ೨ ॥
ಎಣಂಕೆಯಿಲ್ಲದ ಮಹಿಮ ಪ್ರಾಣಸ್ವರೂಪ
ಸದ್ಗುಣಮಣಿ ಬಸವರಾಜೇಂದ್ರನೆ ಸಕಿಯಾಳೆ ॥ ೩ ॥

ಅಂತ್ಯ : ಜಾಣ ಸದ್ಭಕ್ತರಾ ಪ್ರಾಣ ಪಾವಾಡವ
ಮಾಣದೇ ಪೇಳ್ದಾತನ್ಯಾರಂಮ್ಮ ಸಖಿಯಾಳೇ
ಕ್ಷೋಣಿಯೊಳು ಆರಾಧ್ಯವಂಶಸುಪ್ರಾಣಿಪುರದ
ಶಿದ್ಧಲಿಂಗೇಶನೆ ಸಖಿಯಾಳೆ ಸೋಬಾನವೋ ॥ ೨೬ ॥
ಶ್ರೀಮಾದೇಶ್ವರ ಸ್ವಾಮಿಯವರ ಪಾದವೆ ಗತಿ.

ವಿಷಯ : ಬಸವ ಪವಾಡಗಳ ವಿವರ.

ವಿಶೇಷ : ಇದಲ್ಲದೆ ಕಾಲಚಕ್ರ, ವಿಶ್ವಕರ್ಮಪುರಾಣವ್ಯಾಖ್ಯಾನ ಮುಂತಾದ ೮ ಕೃತಿಗಳಿವೆ. —ಜಿಜಿಎಂ

## 19

ಕೆ. ೧೧೩೩ ಬಸವ ಪುರಾಣ ಭಾಮಿನೀ ಷಟ್ಪ

೧೪.೮ × ೨.೧" ಭೀಮಕವಿ ೧೩೬೯

೧-೨೦೧ ಪತ್ರ ೧೧ ಪಂಕ್ತಿ ೮೦ ಅಕ್ಷರ

ಆದಿ : ಬಸವೇಶ್ವರ ಪುರಾಣವ ಬರವುದಕ್ಕೆ ಸುಭಾಮಸ್ತು ನಿರ್ವಿಘ್ನಮಸ್ತು ॥
ರಾಗ ಮಲಹರಿ ॥

ಆದಿಶಿವಲಿಂಗಕ್ಕೆ ವಾಹನ
ವಾದ ನಂದೀಶ್ವರನೆ ಮತ್ತೆ ಶಿ
ಲಾಮುನಿಗುದೆಯಿಸಿದ ಪರಿಯಂ ಪೇಳ್ವೆನೆಂತೆನಲೂ ॥ ಪದ ॥

ಶ್ರೀ ಗುರುವೆ ದೀಕ್ಷಾಗುರುವೆ ಶಿ
ಕ್ಷಾಗುರುವೆ ರಕ್ಷಾಗುರುವೆ ಸ
ರ್ವಾಗಮೋಕ್ತ ಕಳಾಗುರುವೆ ಶಿವಯೋಗ ಧರ್ಮಾರ್ಥಾರ್ಥ
ಭೋಗುರುವೆ ತ್ಯಾಗ ಗುರುವೆ ಸು
ಧೀಗುರುವೆ ವಾಚಾಗುರುವೆ ಭವ
ರೋಗಹರ ಶರಣಾಗು ಬಸವ ಮಹಾಗುರುವೆ ನಮಗೆ ॥ ೧ ॥

ಅಂತ್ಯ : ಕೋವಿದರು ಕೇಳೊಳ್ಳಿತೆನಲುಡು
ದೇವನಿಧಿಯುನವೆಂದು ಸಂಖ್ಯೆಗ
ಳೋವಿ ಶಕವರ್ಷಂಗಳಾಗಲ್ ಸೌಮ್ಯ ವತ್ಸರದಾ
ಶ್ರಾವಣ ಬಹುಳ ಪಕ್ಷ ದಶಮಿಾ
ಜೀವವಾರದೊಳಾದಿವೃಷಭೇಂ
ದ್ರಾವತಾರದ ಬಸವ ಚರಿತೆ ಸಮಾಪ್ತಿಯಾಯಿತ್ತು ॥ ೬೨ ॥

* * * *

ಯಿದು ಸಕಲ ಮಹೇಶ್ವರಾಮಲ
ಪದಪಯೋಜ ಪರಾಗಮದ ಷ
ಟ್ಪದಿಯೆನಿಪ ಪಾಲ್ಕುರಿಕೆ ಸೋಮೇಶ್ವರನ ಕಾರುಣ್ಯಂ
ಪೊದವಿದಖಿಳ ಕಳಾಪ್ರಪೂರಿತ
ಹೃದಯ ಭೀಮಕವಿ ಪ್ರಣೀತಾ
ಭ್ಯುದಯ ಬಸವ ಪುರಾಣ ಕಥೆಯೊಳಗೆಂಟನೆಯ ಕಾಂಡಂ ॥ ೬೮ ॥

ಅಂತು ಸಂಧಿ ೭ಕ್ಕಂ ಪದನು ೪೮೬ಕ್ಕಂ ಮಂಗಳ ಮಹಾಶ್ರೀ. ಅಂತು ಕಾಂಡ ೮ಕ್ಕಂ ಪದಸಂಧಿ ೫೦ಕ್ಕಂ ಷದ ೩೦೫೨ಕ್ಕಂ ಯಿದಕ್ಕೆ ಸ್ತೋತ್ರ ಪದ ಆಶೀರ್ವಾದ ಪದಂಗಳು ೨೧ ಪದದ ಕಳೆದು ಕಥಾಲಾಪಣೆಗೆ ೩೦೩೧ ಪದನು ಭೀಮಕವಿ ಪ್ರೋಕ್ತಂಗಳು ॥ ಗುರುಭಕ್ತನ ಕಥೆ ಮೊದಲಾದವು ಪ್ರಕ್ಷಿಪ್ತಂಗಳು ಆ ಕಥೆಗೆ ಸೇರಿಸಿದ ಪದನು ಸಂಧಿ ೧೦ ಕ್ಕಂ ಪದ ೫೬೬ಕ್ಕಂ ಅಂತು ಸಂಧಿ ೬೦ಕ್ಕಂ ಪದನೂ ೩೬೧೬ಕ್ಕಂ ಮಂಗಳ ಮಹಾ ಶ್ರೀ. ಶ್ರೀ. ಶ್ರೀ. ವಿರೋಧಿಕೃತ ನಾಮ ಸಂವಚ್ಚರದ ಶ್ರಾವಣ ಬವಳ ಸೋಮವಾರ (ಪಂಚಮಿ) ಐದನೆಯ ಘಳಿಗಿಯಲ್ಲಿಯು ಬಸವೇಶ್ವರನ ಪುರಾಣವ ಬರದು ಮುಗಿಯಿತ್ತು, ಪ್ರಭುಸ್ವಾಮಿಗಳ ಹಸ್ತಕಮಲದಲ್ಲುದ್ಭವವಾದ

ಸಿದ್ಧಲಿಂಗದೇವರು ಬರದ ಪುರಾಣವೂ ಸಾಪ್ತಮಂಗಳ ಮಹಾಶ್ರೀ.

ವಿಷಯ : ಬಸವ, ಮುಗ್ಧಸಂಗಯ್ಯ, ನಂಬಿಯಣ್ಣ, ದೀಪದಕಲಿ ಮೊದಲಾದ ಶಿವಶರಣರ ಕಥೆಗಳು.

ವಿಶೇಷ : ಶಕಟರೇಫವಿದೆ. ಸಮಗ್ರವಾಗಿದೆ. ಬರಹ ಚೆನ್ನಾಗಿದೆ. ಅಂತ್ಯದಲ್ಲಿ ಪ್ರತಿ ಮಾಡಿದವನ ಹಾಗೂ ಕಾಲವಿಚಾರಗಳಿವೆ. [ಕ.ಹ.ಪ್ರ.ಸೂ. ತೃತೀಯ ಸಂಪುಟ ಪುಟ ೨೨-೨೫. ಕ್ರಮಾಂಕ 1024-1026 ನೋಡಿ]

—ಕೆಆರ್‌ಎಸ್

## 20

| | | |
|---|---|---|
| ಕೆಎ. ೫೯೪ | ಬಸವ ಪುರಾಣ | ಭಾಮಿನೀ ಷಟ್ಪದಿ |
| ೧೨.″ × ೮.೩″ | ಭೀಮಕವಿ | ೧೩೬೯ |
| ೧೧-೬೬೬ ಪುಟ | ೩೩ ಪಂಕ್ತಿ | ೧೪ ಅಕ್ಷರ |

ಆದಿ : ಧರಣಿಯೊಳು ಸಾಷ್ಟಾಂಗವೆರಗಿಯೆ
ಕರಯುಗಳ ಮುಕುಳಿತದೊಳೊಂದಿಸಿ
ಪರಮಗುರು ಚಿತ್ತೈಸು ಲೋಕಾಲೋಕ ಚರಿತೆಗಳ ॥ ೫೪ ॥

ಬಿನ್ನೈಸಲೆಂದಿರ್ದ ಹದನಂ
ಮುಂನರಿದು ಪರಮೇಶ್ವರಂ ಹಿಮ
ಗುಂ ನಯನದಿಂ ನೋಡುವವಸರದೊಳು ಮಹಾದೇವಿ
ತನ್ನ ವಲ್ಲಭನನುಮತದಿ ಕೈ
ಸಂನೆಯಲಿ ಕರವೆಲೆ ಮುನಿಪ ನೀ
ನಂನಿಯುನೆ ಪೇಳ್ವಿಳಿದು ಬಂದ ಸಮಸ್ತ ಕಾರ್ಯವನು ॥ ೫೫ ॥

ಅಂತ್ಯ : ಅರಿಗಳವಟ್ಟುದು ಭವದ್ದೃಢ
ಸಾರ ವೀರಾಚಾರ ಭಕ್ತಿವಿ
ಚಾರ ಭಾವನೆಯಿಾ ಮಹಾಮಹಿಮಾ ಮಹೋಂನತಿಯು
ಆರು ಬಲ್ಲರಿದಂ ಬಸವ ಸುಕು
ಮಾರ ಸಕಳೇಶ್ವರನೆ ಬಲ್ಲನು
ಧಾರುಣೀವಳಯದೊಳೆಸೆವ ನಿಂಮನುವಿನಿರವೆನುತ ॥ ೬೨ ॥

ವಿಷಯ : ಬಸವ, ಮುಗ್ಧಸಂಗಯ್ಯ, ದೀಪದಕಲಿ, ನಂಬಿಯಣ್ಣ ಮೊದಲಾದ ಶರಣರ ಕಥೆಗಳು.

ವಿಶೇಷ : ಆದಿಯಲ್ಲಿ ಹಾಗೂ ಅಂತ್ಯದಲ್ಲಿ ಕೆಲವು ಪದ್ಯಗಳಿಲ್ಲ. ಕಲ್ಲಚ್ಚಿನ ಪ್ರತಿ. ಪಾದಗಳ ವಿಂಗಡಣೆ ಇದೆ. ಅಕ್ಷರಗಳು ಸ್ಪಷ್ಟವಾಗಿವೆ. —ಕೆಆರ್‌ಎಸ್

## 21

| ಕೆ. ಎ. ೩೭೨ | ಬಸವ ಪುರಾಣ (ಕನ್ನಡ ವ್ಯಾಖ್ಯಾನ) | ಶ್ಲೋಕ, ಗದ್ಯ |
|---|---|---|
| ೧೦.೪" × ೯.೫" | ಶಂಕರಾರಾಧ್ಯ, ಮಲ್ಲಿಕಾರ್ಜುನ | ೧೫೫೩ |
| ೧-೧೯೭ ಪುಟ | ೨೦ ಪಂಕ್ತಿ | ೨೦ ಅಕ್ಷರ |

**ಆದಿ :** ಬಸವ ಪುರಾಣದ ಸಂಸ್ಕೃತ ಶ್ಲೋಕದ ಟೀಕೆ ॥ ............ಕದಾಚಿತ್, ಒಂದಾನೊಂದು ದಿನದಲ್ಲಿ । ಪತ್ರಪುಷ್ಪಾಣಿ । ಪತ್ರಪುಷ್ಪಗಳನ್ನು.........
......ಕೆಲವು ಮೃಗಂಗಳು । ಆವೃತ್ಯ । ಸುತ್ತುವರಿದುಕೊಂಡು

× × ×

ಶ್ಲೋ ॥ ಜಟಾಚ್ಛಟಾವೃತಾಲಕ್ಷ್ಯಮೂರ್ತಿರ್ನೀಲಶಿಲಾಘನ: । ಅಂತಃಶ್ಶಿಪವ (? ಮ) ಸಂಖ್ಯಾತಪೂಜಾವಸ್ತುಭಿರರ್ಚಯನ್ ॥ ಜಟಾಚ್ಛಟಾವೃತಾಲಕ್ಷ್ಯಮೂರ್ತಿ: ಜಟಾ, ಜಡೆಗಳ । ಛಟಾ, ಸಮೂಹಗಳಿಂದ । ಆವೃತ್ತ, ಸುತ್ತುವರಿಯಲ್ಪಟ್ಟ । ಅಲಕ್ಷ್ಯ, ಕಾಣಬಾರದುಥ । ಮೂರ್ತಿ :, ದೇಹವನುಳ್ಳಂಥ ॥ ನೀಲಶಿಲಾಘನ :, ನೀಲ, ಕಪ್ಪಾದ । ಶಿಲಾ, ಪಾಷಾಣದೋಪಾದಿಯಲ್ಲಿ । ಘನ :, ದೊಡ್ಡಿಯ (?) ನಾದ । ಅಂತಃ, ಅಂತಃಕರಣದಲ್ಲಿ । ಶಿವಂ, ಪರಮೇಶ್ವರನನ್ನು । ಅಸಂಖ್ಯಾತಪೂಜಾವಸ್ತುಭಿಃ । ಅಸಂಖ್ಯಾತ, ಲೆಕ್ಕವಿಲ್ಲದ । ಪೂಜಾವಸ್ತುಭಿಃ, ಪೂಜಾದ್ರವ್ಯಗಳಿಂದ । ಅರ್ಚಯನ್, ಪೂಜಿಸುತ್ತಿರ್ದಂಥಾ ಯೋಗೀಶ್ವರನು । ದೃಷ್ಟಃ, ಕಾಣಲ್ಪಟ್ಟನು ॥ ೩೭ ॥

**ಅಂತ್ಯ :** ಬಸವಪುರಾಣೇ ಜಗದೇವಚರಿತಾಖ್ಯಾನಂ ನಾಮ ತ್ರಿಂಶೋಧ್ಯಾಯಃ ॥ ಇತಿ, ಇನ್ನೆನ್ದು । ಅಸಂಖ್ಯಾತ, ಲೆಕ್ಕವಿಲ್ಲದ । ಮಾಹೇಶ್ವರ, ಜಂಗಮ ಸ್ವಾಮಿಗಳ । ದಿವ್ಯ, ಒಪ್ಪುವನ್ಥ । ಶ್ರೀಪಾದಪದ್ಮ , ಶ್ರೀಪಾದ ಕಮಲಂಗಳ, × × × ಪ್ರಮಥಕವೇಃ, ಶಿವಶರಣರ ಕವೀಶ್ವರ ನಾದ । ಶಂಕರಾರಾಧ್ಯಸ್ಯ, ಶಂಕರಾರಾಧ್ಯರ ಕೃತಿ ಪ್ರಬನ್ಧವಾದ, ಬಸವ ಪುರಾಣೇ, ಬಸವ ಪುರಾಣದಲ್ಲಿ, ಜಗದೇವಚರಿತಾಖ್ಯಾನಂ ನಾಮ, ಜಗದೇವ ಚರಿತ್ರೆಯ ಪೇಳ್ವುದೆಂಬ । ತ್ರಿಂಶೋಧ್ಯಾಯಃ, ಮೂವತ್ತನೆಯ ಅಧ್ಯಾಯವು ॥ ಶ್ರೀ ॥ ಇದು ಶ್ರೀಮದಮೃತೇಶ್ವರ ಚರಣಾರವಿನ್ದ ಮಕರಂದಾಸ್ವಾದಾಮನ್ದ ನನ್ದದಿಂದಿರಾಯಮಾಣ ವಿಶುದ್ಧಾನ್ತಃಕರಣ ವಂಕಿಣಿ ನಾರಾಯಣಾಂಕ ಸಮರ ನಿಶ್ಶಂಕ ಚಿಕ್ಕ ಭೂಪಾಲಗರ್ಭಾಬ್ಧಿ ಚನ್ದ್ರೋದಯ ಸೋಮಾಂಬಿಕಾ ಗರ್ಭಶುಕ್ತಿಮುಕ್ತಾಫಲ ಸತತ ಸಂತರ್ಪಿತ ನಿರವಧಿಕ ವೀರ ಮಾಹೇಶ್ವರ ವಾಂಛಿತಾರ್ತ್ಥ ಸಾರ್ತ್ಥ ಶ್ರೀಮದ್ಭಿಜ್ಜವರ ಪುರವರಾದೀಶ್ವರ ಶ್ರೀಮದಿಮ್ಮಡಿ ಚಿಕ್ಕಭೂಪಾಲ ಕೃಪಾಲಾಲಿತ ಮಲ್ಲಿಕಾರ್ಜುನ ಕವೀಶ್ವರ

ವಿರಚಿತಮಪ್ಪ ಶಂಕರಾರಾಧ್ಯಸ್ಯ ಕೃತೇಃ ಸಂಸ್ಕೃತ ಬಸವ ಪುರಾಣದ ಕರ್ಣಾಟಕ ವ್ಯಾಖ್ಯಾನದಲ್ಲಿ ಜಗದೇವಯ್ಯನ ಪೇಳ್ವುದೆಂಬ ಮೂವತ್ತನೆಯ ಧ್ಯಾಯವು ಸಮಾಪ್ತ ॥ ಅನ್ತು ಬಸವಪುರಾಣ ಅಧ್ಯಾಯವು ಮೂವತ್ತಕ್ಕಂ ಮಂಗಳ ಮಹಾಶ್ರೀ.

ದುರ್ಮ್ಮತಿ ಸಂವತ್ಸರದ ಚೈತ್ರ ಬ॥ ೭ ಮಂಗಳವಾರದಲ್ಲಿ ಹೊನ್ನುಡಿಕ್ಕೆ ತಿಮ್ಮಣ್ಣನ ತಮ್ಮ ಲಿಂಗರಸಯ್ಯನು ಬರೆದನ್ತಾ ಬಸವಪುರಾಣದ ಪುಸ್ತಕಕ್ಕೆ ಶುಭಮಸ್ತು ಶೋಭನಮಸ್ತು ॥

**ವಿಷಯ :** ಬಸವೇಶ್ವರನ ಚರಿತ್ರೆ.

**ವಿಶೇಷ :** ಈ ಪ್ರತಿಯಲ್ಲಿ ಕೆಲವು ಕಡೆ ವಿಷಯ ಲುಪ್ತವಾಗಿದೆ. ಇದನ್ನು ಮದರಾಸು ಪ್ರಾಚ್ಯಕೋಶಾಗಾರದಲ್ಲಿ 1934–35ರಲ್ಲಿ 19–10–1ನೆ ಸಂಖ್ಯೆಯ ಓಲೆಪ್ರತಿಯಿಂದ ಪ್ರತಿಮಾಡಲಾಗಿದೆ. ೧೪೭ ಮತ್ತು ೧೪೮ ಪುಟಗಳು ಪುನರಾವರ್ತಿತವಾಗಿವೆ. —ಬಿಎಸ್‌ಎಸ್

## 22

| ಕೆ. ೧೨೦೪/೧೭ | ಬಸವ ರಗಳೆ | ರಗಳೆ |
|---|---|---|
| ೧೦.೩ × ೧.೨″ | ? | ? |
| ೧೨೩-೧೨೪ ಪತ್ರ | ೯ ಪಂಕ್ತಿ | ೪೪ ಅಕ್ಷರ |

**ಆದಿ :** ......ದೇವರಾಜ ಸಿದ್ಧ ಸಾಧ್ಯ ಯಕ್ಷ ರ
ಕ್ಷೋ ವಿಹಂಗರಾಟ್ಸ್ವತಂನಗ ಸೋಮ ಧೂಮ ಕರ್ಮರು
ಜೀವಿತೇಶ ವಿದ್ಯುತಪಾಶ ಸೇವಿತೊ ವಿದ್ಯಾಂಘ್ರಿ ರಾ
ಜೀವ ನಿಂಮ ನಾಂ ಪೊಗಳ್ವೆ ಶ್ರೀ ವೃಷಾದಿ ನಾಯಕಃ ಪ್ರಸಿದ್ಧ ಭಾವ
ಶರಣು ಬಸವ ॥

**ಅಂತ್ಯ :** ಅಘವನ ದಹನಂ ಬಸವ
ಅಘಕುಲ ನಿಸ್ಸೀಮ ಭೀಮ ನಾಮಂ ಬಸವಾ
ಅಘಜಲ ವಡಬಂ ಬಸವಾ
ಅಘತಿಮಿರಗದ್ಯುಮಣಿ ಬಸವ
ಬಸವ ರಗಳೆ ಸಂಪೂರ್ಣ ಮಂಗಳ ಮಹಾಶ್ರೀ.

**ವಿಷಯ :** ಬಸವ ಸ್ತುತಿ.

**ವಿಶೇಷ :** ಶಕಟರೇಫದ ಪ್ರಯೋಗವಿದೆ. ಇದೇ ಕಟ್ಟಿನಲ್ಲಿ ಷಡಕ್ಷರಿಯ ರಗಳೆ, ಶಿವಾಧವ ಶತಕ, ಮಂತ್ರ ಗೋಪ್ಯ ಮೊದಲಾದ ೭೧ ಕೃತಿಗಳಿವೆ. ಇದಲ್ಲದೆ ಗುರುತಿಸಲಾಗದ ಕೆಲವು ಪತ್ರಗಳಿವೆ. —ವೈಸಿಬಿ

## 23

| ಕ. ೧೨೫೮/೨ | ಬಸವರಾಜದೇವರ ಷಡುಸ್ಥಲದ ವಚನ | ವಚನ |
|---|---|---|
| ೯" × ೧.೬" | ಬಸವಣ್ಣ | ಸು. ೧೧೬೦ |
| ೧-೧೩೮ ಪತ್ರ | ೭ ಪಂಕ್ತಿ | ೪೪ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯೇ ನಮಃ ॥ ಬಸವರಾಜದೇವರ ಷಡು ಸ್ಥಲದ ವಚನ ॥ ಖಂಡ ಸ್ಥಲ ॥ ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು। ಸಶಿಯೊಳಗದಿ ರಸದ ರುಚಿಯಂತಿದ್ದಿತ್ತು। ನವೆಯೊಳಗಣ ಪರಿಮಳದಂತೆ ಇದ್ದಿತ್ತು। ಕೂಡಲ ಸಂಗಮದೇವಾ ಕಂನೆಯ ಸ್ನೇಹ ದಂತೆ ಇದ್ದಿತ್ತು ॥ ೧ ॥ ಖಂಡಜ್ಞಾನ ಸ್ಥಲ ॥ ಕಾಳಿಯ ಕಂಕಣದಿಂದ ಮುನ್ನ। ತ್ರಿಪುರ ಸಂಹಾರದಿಂದ ಮುಂನ। ಹರಿ ವಿರಂಚಿಗಳಿಂದ ಮುಂನ। ಉಮೆಯ ಕಲ್ಯಾಣದಿಂದ ಮುಂನ। ಮುಂನ ಮುಂನ ಅಂದಿಂಗೆ ಯೆಳೆಯ ನೀನು ಹಳೆಯ ನಾನು ಮಹಾದಾನಿ ಕೂಡಲ ಸಂಗಮದೇವಾ ॥ ೨ ॥

**ಅಂತ್ಯ :** ಐಕ್ಯಸ್ಥಲ ಸಮಾಪ್ತಂ ॥ ಮಂಗಳ ಮಹಾ ಶ್ರೀ ಶ್ರೀ ॥
ಭಕ್ತಸ್ಥಲಕ್ಕೆ ಸೇರಿದ ವಚನ ೫೨೩ ಮಹೇಶ್ವರ ಸ್ಥಲಕ್ಕೆ ೨೪೦ ಪ್ರಸಾದಿ ಸ್ಥಲಕ್ಕೆ ೩೩೦ ಪ್ರಾಣಲಿಂಗಿ ಸ್ಥಲಕೆ ೫೮ ಶರಣ ಸ್ಥಲಕ್ಕೆ ೬೫ ಐಕ್ಯ ಸ್ಥಲಕ್ಕೆ ೪೦ ಅಂತು ಸ್ಥಲ ೬ಕ್ಕಂ ಮಿಶ್ರ ೩೬ಕ್ಕೆ ॥ ಸೇರಿದ ವಚನ ೯೬೦ಕ್ಕಂ ಮಂಗಳ ಮಹಾ ಶ್ರೀ.

ಬಸವೇಶ್ವರ ದೇವರ ವಚನವ ರಾಚವಡ್ಡಿ ಮಠದ ಪೆದ್ದ ಮರುಳ ವೀರಣ್ಣ ದೇವರ ಶಿಷ್ಯರು ಸಿದ್ಧಲಿಂಗದೇವರಿಗೆ ಚುದ್ರಶೇಖರದೇವರ ಶಿಷ್ಯರು ಸಿದ್ಧಲೀಗ ದೇವರಿಗೆ ಅಗಡಿಯ ನಂಜೆದೇವರ ಶಿಷ್ಯರು ಮರುಳಸಿದ್ಧರ ಶಿಷ್ಯರು ಪರ್ವತ ದೇವರು ಕೃಪೆಯಿಂದ ಬರದ ಬಸವೇಶ್ವರದೇವರ ವಚನ ಸಮಾಪ್ತಿ ॥ ಮಂಗಳ ಮಹಾ ॥

**ವಿಷಯ :** ಷಟ್ಸ್ಥಲಕ್ಕೆ ಸಂಬಂಧಿಸಿದ ಬಸವಣ್ಣನವರ ವಚನಗಳು.

**ವಿಶೇಷ :** ಕೆಲವು ಪತ್ರಗಳು ತ್ರುಟಿತ. ಸುಂದರಾಕ್ಷರ. ಈ ಕಟ್ಟಿನಲ್ಲಿ ಶರಣು ಬಸವ ರಗಳೆ ಮತ್ತು ಬಸವಲಿಂಗ ರಗಳೆ ಎಂಬ ಇನ್ನೆರಡು ಕೃತಿಗಳಿವೆ. —ಎಂಪಿಎಂ

## 24

| ಕ. ೧೪೦೨/೨ | ಬಸವರಾಜದೇವರ ಷಡುಸ್ಥಲದ ವಚನದ ಕಥಾಸಾರ | ಗದ್ಯ |
|---|---|---|
| ೧೬" × ೨" | ? | ? |
| ೧-೩೪ ಪತ್ರ | ೧೨ ಪಂಕ್ತಿ | ೬೬ ಅಕ್ಷರ |

**ಆದಿ :** ಶ್ರೀಗುರು ಬಸವ ಲೀಗಾಯ ನಮಃ ॥ ಬಸವರಾಜದೇವರ ಷಡುಸ್ಥಲದ

ವಚನದ ಕಥಾಸಾರ ॥ ೨ನೆಯ ವಚನದ ಕಥೆ ॥ ಕಂಕಾಳಿ ಷೋಡಶಂ ಭವೇತ್। ಸ್ಕಂದ ಪೌರಾಣದಲ್ಲಿಯ ಕಾಳಿಕಾ ಖಾಂಡದಲ್ಲಿ ಸೂತಮುನಿ ನೈಮಿಷಾರಂಣ್ಯವಾಸಿಗಳಿಗೆ ಬಲಿಯು ಬಾಗೀರಥಿಯ ತೀರದಲ್ಲಿ ವೊಂದು ಕಡಮೆ ನೂಱುಯಗ್ನವ ಮಾಡಿ ಮತ್ತೊಂದು ಮಾಡಬೇಕೆಂಬಾಗ ××× ಹೋಗಿ ಮೇನಕಾದೇವಿಯ ಕೈಯಲ್ಲಿ ಕೊಡಲು ಆಕೆ ಸಲಹಿದಳು ಬಳಿಕ ಜವ್ವನವಾಗಲು ಕಶ್ಯಪ। ಅತ್ರಿ। ಭಾರಧ್ವಾಜ। ವಿಶ್ವಾಮಿತ್ರ ಗೌತಮ। ಜಮದಗ್ನಿ। ವಸಿಷ್ಟರೆಂಬ ಯಿೀ ಸಪ್ತಋಷಿಗಳ ಕಯ್ಯ ಕೇಳಿಸಿ ಶಿವನು ಪಾರ್ವತಿಯ ಮದಿವಿಯಾಗಿ ಕೈಲಾಸದಲ್ಲಿದ್ದರೂ

ಅಂತ್ಯ : ಶರಣ ಸ್ಥಲದಲ್ಲಿ ೨೨ನೆ ವಚನ ಕಥೆ ॥ ಬಸವೇಶ್ವರನರಮನೆಯಲ್ಲಿ ಪ್ರಸಾದವ ಕರಿಯ ಬಿಡಾಲ ಮುಟ್ಟುತ್ತಿರೆ ಬಸವೇಶ್ವರನು ಬಿಜ್ಜಳ ನೋಲಗದಿ ಛಃ ಛಾಃಯೆಂದು ಕೈಯ್ಯ ಚಪ್ಪಳಿಕ್ಕೆ ××× ಬಸವೇಶ್ವರಂಗೆ ದಂಡ ಪ್ರಣುತನಾಗಿ ಸಾಷ್ಟಾಂಗವೆಱಗಿ ವಂದಿಸಿ ರತ್ನಾಂಬರವ ಕಾಣಿಕೆಗೆ ತನ್ನ ಶಿರವನಿಕ್ಕಿದನೂ ॥ ೧ ॥ ೬೬ ॥

ವಿಷಯ : ಬಸವಣ್ಣನವರ ವಚನಗಳಿಗೆ ಪೂರ್ವ ಕಥೆಗಳು.

ವಿಶೇಷ : ಸಮಗ್ರ, ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಸಂಪಾದನೆಯ ಸಾರಾಮೃತ ಮೊದಲಾದ ೫ ಕೃತಿಗಳಿವೆ.

—ಜಿಜಿಎಂ

## 25

| ಕೆ. ೭೭೩/೧೦ | ಬಸವರಾಜ ರಗಳೆ | ರಗಳೆ |
|---|---|---|
| ೬.೬" × ೧.೮" | ? | ? |
| ೮೭-೯೩ ಪತ್ರ | ೮ ಪಂಕ್ತಿ | ೨೪ ಅಕ್ಷರ |

ಆದಿ : ಗುರು ಬಸವಲಿಂಗಾಯ ನಮಃ। ಬಸವರಾಜ ರಗಳೆ।

ಕಂದ ॥ ಶ್ರೀವರ ಪೂಜಿತ ಚರಣವ
ಭಾವಜ ಮದ ಶೈಲ ಶಂಭು ಗಿರಿಸುತೆಯುರಸನ
ಪಾವನ ಪರಮಜ್ಞಾನಿಯ
ಕೋವಿದನಂ ಪೊಗಳ್ವೆ ನಿತ್ಯ ಬಸವೇಶ್ವರನಂ ॥

ರಗಳೆ ॥ ಶ್ರೀಮದಮಲ ಚರಣಂ ಸೈವಲ ಸಮರವನುಜ ಬಸವರಾಜ
ಅಮಮಾಯಾದಿ ನುತಿಯ ತತಿಯು ತತಿಯು ಪಿಮ್ಮಾೃತಿತ ಬಸವರಾಜ ॥ ೧ ॥
ಅಂಗ ಲಿಂಗಾಸಂಗ ಪ್ರಾಣ ಲಿಂಗಾವಾದ ಬಸವರಾಜ ॥
ಜಂಗಮಾಂಗ ಜಂಗಮೈಕ್ಯ ಲಿಂಗದಂದ ಬಸವರಾಜ ॥ ೨ ॥

ಅಂತ್ಯ : ತ್ರಾಹಿ ತ್ರಾಹಿ ಬಸವ ತಂದೆ । ತ್ರಾಹಿ ತ್ರಾಹಿ ಬಸವ ಶರಣು ಶರಣು ಶರಣು ಶರಣಾರ್ತ್ರಿ ಬಸವರಾಜ ॥

ಕಂದ ॥ ನೂರೆಂಟು ಬಸವ ಸ್ತುತಿಯಂ
ಸಾರಸದಿಂದೋದಿ ಕೇಳಿ ವಿಸ್ತರಿಸುವರಿಗೆ
ವಾರಾನಿಜ ಭಕ್ತಿ ಮುಕ್ತಿಯಂ
ತೋಱಿಸುವನು ಸತ್ಯ ನಿತ್ಯ ಮದ್ಗುರು ಶಾಂತಾ ॥ ೧ ॥
ಬಸವರಾಜ ರಗಳೆ ಸಮಾಪ್ತ ಮಂಗಳ ಮಹಾಶ್ರೀ ॥

ವಿಷಯ : ಬಸವ ಸ್ತುತಿ.

ವಿಶೇಷ : ಸಮಗ್ರಕೃತಿ. ಇದರೊಡನೆ ಗುರು ರಗಳೆ, ಷಡಕ್ಷರಿಯ ರಗಳೆ, ಶರಣು ಬಸವ ರಗಳೆ, ವೀರಶೈವ ರಗಳೆ, ಭೀಮಕವೀಶ್ವರ ರಗಳೆ, ಸದ್ಗುರು ರಗಳೆ, ಮನೋವಿಕಾರ ರಗಳೆ, ಗುರುಬೋಧಾಮೃತ ರಗಳೆ, ಬಸವೇಶ್ವರ ಪವಾಡದ ರಗಳೆ, ಲಿಂಗಾರ್ಚನೆ ರಗಳೆ, ಭಕ್ತಿಬಿನ್ನಹದ ರಗಳೆ, ಮಂಗಳಾಷ್ಟಕ (ಶತಗಣ ನಾಮಸ್ತೋತ್ರ), ಅಷ್ಟಾವರಣದ ಮಂಗಳಾಷ್ಟಕ, ಇಪ್ಪತ್ತಮೂರು ಮಂಗಳಾಷ್ಟಕಗಳು, ದೇವೀಸ್ತೋತ್ರ ಇತ್ಯಾದಿಗಳಿವೆ. —ಎಸ್ಎನ್ಕೆ

## 26

| ಕೆ. ೯೯೮/೬ | ಬಸವರಾಜ ರಗಳೆ | ರಗಳೆ |
|---|---|---|
| ೫″ × ೧.೫″ | ? | ? |
| ೩೧-೩೫ ಪತ್ರ | ೬ ಪಂಕ್ತಿ | ೨೨ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಬಸವರಾಜ ರಗಳೆ

ಕಂಧ ॥ ಶ್ರೀವರ ಪೂಜಿತ ಚರಣನ
ಭಾವಜ ಮದಶೈಲ ಶಂಭು ಗಿರಿ ಸುತೆಯರಸನ
ಪಾವನ ಪರಮ ಗ್ನಾನಿಯ
ಕೋಪಿದನಂ ಪೊಗಳ್ವೆ ನಿತ್ಯ ಬಸವೇಶ್ವರನಂ ॥

ಲಲಿತ ರಗಳೆ ॥ ಶ್ರೀಮದಮಲ ಚರಣ ಸೇವ್ಯ ನಮರದನುಜ ಬಸವರಾಜ
ಅಮೆಯಾಧಿ ನುತಿಯ ತತಿಯ ಪೆರ್ಮೆ೯ತೀತ ಬಸವರಾಜ ॥ ೧ ॥

ಅಂತ್ಯ : ಕಂಧ॥ನೂಱೆಂಟು ಬಸವ ನುತಿಯಂ
ಸಾರಸದಿಂದೋದಿ ಕೇಳಿ ವಿಸ್ತರಿಸುವರೀಗ
ಪಾರ ನಿಜ ಭಕ್ತಿ ಮುಕ್ತಿಯ
ಸೇರಿಸುವನು ಸತ್ಯ ನಿತ್ಯಮದ್ಗುರು ಶಾಂತಾ ॥
ಬಸವರಾಜ ರಗಳೆ ಸಮುಪ್ತ ಮಂಗಮಹ ಶ್ರೀಶ್ರೀ

ವಿಷಯ : ಬಸವ ಸ್ತುತಿ.

ವಿಶೇಷ : ಇದರಲ್ಲಿ ಗುರು ರಗಳೆಯೇ ಮುಂತಾದ ಇನ್ನಿತರ ೮ ಕೃತಿಗಳಿವೆ.

—ಜಿಜಿಎಂ

## 27

ಕೆ. ೧೪೦೩/೪ ಬಸವರಾಜ ರಗಳೆ ರಗಳೆ

೮.೭" × ೧.೩" ? ?

೨೩-೩೨ ಪತ್ರ ೫ ಪಂಕ್ತಿ ೩೩ ಅಕ್ಷರ

ಆದಿ : ಕಂದ ॥ ಶ್ರೀ ರಾಜಪೂಜಿತ ಚರಣವ
ಭಾವಜಮುದ ಶೈಲ ಶಂಭು ಗಿರಿಸುತೆಯಃರಸನ
ಪಾವನ ಪರಮಗ್ನಾನಿಯು
ಕೋವಿದನಂ ನಾಬಃಗಳೆ ನಿತ್ಯ ಬಸವೇಶ್ವರನಂ ॥ ೧ ॥

ರಗಳೆ ॥ ಶ್ರೀಮದ ಮರಣ ಶೈವನಮರದನುಜ ಬಸವರಾಜ
ಅಮಾಯಾದಿ ನುತಿಯ ತತಿಯ ಪೆರ್ಮೆತೀತ ಬಸವರಾಜ ॥ ೧ ॥

ಅಂತ್ಯ : ಕಂದ॥ನೂರೆಂಟು ಬಸವನ ನುತಿಯುಂ
ಸಾರಸದಿಂದೋದಿ ಕೇಳಿ ವಿಸ್ತರಿಸುವರ್ಗೆ
ಮಾರಹರ ಭಕ್ತಿ ಮುಕ್ತಿಯು
ತೋಱುದ್ಧರಿಸುವನು ನಿತ್ಯಮುದ್ಗುರು ಶಾಂತ
ಬಸವರಾಜ ಸಮಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಬಸವಣ್ಣನ ಸ್ತುತಿ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೦ ಕೃತಿಗಳಿವೆ.

—ಜಿಜಿಎಂ

## 28

ಕೆ. ೧೧೬೭/೩ ಬಸವರಾಜ ವಿಜಯ ಚಂಪು

೧೨.೮" × ೨.೩" ಷಡಕ್ಷರದೇವ ೧೬೫೦

೧-೧೪೪ ಪತ್ರ ೧೩ ಪಂಕ್ತಿ ೭೮ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಬಶವರಾಜ ವಿಜಯ ಪುರಾಣ ಬರ–
ವುದಕ್ಕೆ ಶುಭಮಸ್ತು ॥

ವೃ ॥ ಶ್ರೀಮತ್ಕಲ್ಯಾಣ ಭೂಬೃನ್ನುತ ಸುತರ ಪದಂ ದಿವ್ಯಂ ಗಂಗಾಂಬಿಕಾ ಸ
ತ್ಪ್ರೇಮ ವಾಸಂ ಗಣೇಂದ್ರಾನ್ವಿತ ನಿರುಪಮ ವಾಮಾಧಾರನ ಶ್ರಾಂತ ಸತ್ವಾ

ರಾಮಂ ಭೂತಿ ಪ್ರಯುಕ್ತಂ ಪ್ರಣವರುಚಿ ಪರಾನಂದ ಧರ್ಮಂ ಸ್ವಲೀಲೋ
ದ್ಧಾಮಂ ರಕ್ಷಿಪ್ಪುದೆಂಮಂ ಬಿಡದನವರತಂ ನಂದಿಕೇಶಂ ಮಹೇಶಂ ॥ ೧ ॥

ಅಂತ್ಯ : ಕುಷ್ಟ ಮುಖ ದುಸ್ಸಹ ಬಲಿಷ್ಟ ಗದಮರ್ದ್ಧನ ಗರಿಷ್ಟ ನಿಜ ಪಜ್ವಲ
ಯುಧಿಷ್ಟಿರನರಾರ್ಚಾ ।
ಧಿಷ್ಟಿತ ಜಗತ್ರಯ ವರಿಷ್ಟ ಗರುಡಾಂಕ ಪರಮೇಷ್ಟಿ ನುತವರ್ಗ್ಗ ಪದನಿಷ್ಠ
ಜನಲೋಲಾ ।
ಶ್ರೇಷ್ಠ ಸುಕವಿ ಪ್ರಕರ ಪಷ್ಟ ಸುರಭೋಜ ಖಲಕಾಷ್ಟದವ ಪಾವಕ ಪರಿಷ್ಟ
ಗಣವೃಂದ
ಜೇಷ್ಟ ಪರಿತರ್ಜಿತ ಲಘಿಷ್ಟ ಮತವಾದಿ ಕುಲಸುಷ್ಟ ವಚನೋತ್ತರ ಮಹಿಷ
ಬಸವೇಶಾ ॥ ೧೧೫ ॥

ಗದ್ಯ ॥ ಇದುವಿನಮದಖಿಳ ಸುರಾ ಸುರೇಂದ್ರ ಮಕುಟ ತಟ ಘಟಿತ ಮಣಿ ಗಣಾಗಣಿ ರುಚಿ ನಿಚಯ ತರುಣಾರುಣಾತಪ ಪರಿಲಸತ ಪರಮ ಶಿವಲಿಂಗ ಪಾದಾರವಿಂದ ಪರಾಗ ಭಸಿತ ಭಾಸುರ ಲಲಾಟ ಪಟ್ಟ ಸರಸ ಜನಮಾನಿತೋಭಯ ಕವಿತಾ ವಿಶಾರದ ಶ್ರೀ ಷಡಕ್ಷರಿದೇವ ಭಕ್ತಿ ವಿರಚಿತ ಶಿವದ್ಬಸವ ರಾಜವಿಜಯ ಮಹಾ ಪುರಾಣಳ್ಬಸವರಾಜ ವಿಜಯ ವರ್ಣನಂ ದ್ವಿಚತ್ವಾರಿಂಶಾಶ್ವಾಸಂ ಮಂಗಳ ಮಹಾ ಶ್ರೀ.
ಆಕತು ಆಶ್ವಾಸ ೪೨ಕ್ಕಂ ಪದಗಣನೆ ೩೪೭೭೧ಕ್ಕಂ ಮಂಗಳ ಮಹಾ ಶ್ರೀ

ವಿಷಯ : ಬಸವೇಶ್ವರನ ಚರಿತ್ರೆ.

ವಿಶೇಷ : ಇದೇ ಕಟ್ಟಿನಲ್ಲಿ ಶಬರಶಂಕರ ವಿಳಾಸ ಮತ್ತು ಪಾಷಾಣ ಮಾಲಾವೃತ್ತ ಎಂಬ ಗ್ರಂಥಗಳಿವೆ

—ವೈಶಿಬಿ

## 29

| ಕೆ. ೧೩೧೮ | ಬಸವರಾಜ ವಿಜಯ | ಚಂಪು |
|---|---|---|
| ೧೧″ × ೧.೨″ | ಷಡಕ್ಷರದೇವ | ೧೬೩೦ |
| ೧-೨೦೦ ಪತ್ರ | ೧೦ ಪಂಕ್ತಿ | ೬೧ ಅಕ್ಷರ |

ಆದಿ : ಶ್ರೀ ಶಿವಾಭ್ಯೋ ನಮಃ ॥ ಶ್ರೀಮದ್ ಬಸವಲಿಂಗಾಯ ನಮಃ ॥ ಶ್ರೀಮದ ಸಂಖ್ಯಾತ ಪ್ರಮಥ ರುದ್ರ ಭಕ್ತ ಮಹಾ ಗಣೇಭ್ಯೋ ನಮಃ ॥ ನಿರಂತರಾಯೊಸ್ತು ॥ ಸರ್ವತಾಭದ್ರಮಸ್ತು ಬ....ಜವಿಜಯ ಪುರಾಣಂ ॥

ವೃತ್ತ ॥ ಶ್ರೀಮತ್ಕಲ್ಯಾಣ ಭೂಭುನ್ನತ ಸುಕರ ಪದಂ ದಿವ್ಯ ಗಂಗಾಂಬಿಕಾ ಸ
ತ್ಪ್ರೇಮಾವಾಸಂ ಗಣೇಂದ್ರಾನ್ವಿತನುರು ಮಹಿಮಾಧಾರನ ಶ್ರಾಂತ ಸತ್ಯಾ

ರಾಮಂ ಭೂ....ಪ್ರಯುಕ್ತಂ ಪ್ರಣವರುಚಿ ಪದಾನಂದ ಧರ್ಮಸ್ವವಿಲೋ
ದ್ಧಾಮಂ ರಕ್ಷಿಪುದೆಮ್ಮಂ ಬಿಡದನವರತಂ ನಂದಿಕೇಶಂ ಮಹೇಶಂ ॥ ೧ ॥

ಅಂತ್ಯ : ಸುವರ್ಣ ರಥ ಪೂಜಿತೆ ಸುಕರ ಕೀರ್ತಿ ವಿಭ್ರಾಜಿತೇ
ಕೃಪಾರಸ ತರಂಗಣಿ ಕುಪಿತ ದೈತ್ಯ ಸಂಹಾರಿಣೀ
ಕಪರ್ದಿ ಹೃದಯಪ್ರಿಯೆ ಕನಕಮರ್ತೇ ಸಚ್ಚಿನ್ಮಯೇ
ಜಪಾಸುಮರುಚಿ ವೃಜೇ ಜನನಿ ಪಾಲಿಸದ್ರೀಂದ್ರಜೇ ೧೧೪

ಗದ್ಯ ॥ ಇದು ವಿಷಮದಖಿಳ ಸುರಾಸುರೇಂದ್ರ ಮಕುಟತತಟಘಟಿತ ಮಹೀಗಣಾ-
ಗಣಿತ ರುಚಿ ನಿಚಯ ತರುಣಾ ತಪ ಪರಿಲಸಿತ ಪರಮ ಶಿವಲಿಂಗ ಪಾದಾರ
ವಿಂದ ಪರಾಗ ಭಸಿತ ಭಾಸುರ ಲಲಾಟ ಪಟ್ಟ ಸರಸಜನಮಾನಿತೋಭಯ
ಕವಿತಾ ವಿಶಾರದ ಶ್ರೀ ಷಡಕ್ಷರಿದೇವ ಭಕ್ತಿ ವಿರಚಿತ ಶ್ರೀಮದ್ಬಸವರಾಜ
ವಿಜಯ ಮಹಾ ಪುರಾಣದೊಳ್ ಬಸವರಾಜವಿಜಯ । ವರ್ಣನಂ ದ್ವಾಚ-
ತ್ವಾರಿಂಶಾಶ್ವಾಸಂ ಮಂಗಳಮಸ್ತು ॥ ಆಶ್ವಾಸ ೪೨ಕ್ಕೆ ಪದನು ೩೪೭೧ಕ್ಕಂ
ಮಂಗಳ ಮಹಾಶ್ರೀ × × × ಹೇವಿಳಂಬಿ ನಾಮಸಂವತ್ಸರದ
ಪುಷ್ಯ ಶು. ಪೌರ್ನಮಾ ಸೋಮವಾರದಲ್ಲು ಶ್ರೀಮದ್ಬಸವರಾಜವಿಜಯ
ಮಹಾಪುರಾಣ ಸಂಪೂರ್ಣ ಮಂಗಳಮಸ್ತು.

ವಿಷಯ : ಬಸವರಾಜನ ಚರಿತ್ರೆ

ವಿಶೇಷ : ಸಮಗ್ರ. —ವೈಸಿಬಿ

## 30

| ಕೆ. ೧೨೫೮/೩ | ಬಸವಲಿಂಗ ರಗಳೆ | ರಗಳೆ |
|---|---|---|
| ೯" × ೧.೬" | ? | ? |
| ೩ ಪತ್ರ | ೧೦ ಪಂಕ್ತಿ | ೫೨ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಬಸವಲಿಂಗ ರಗಳೆ ॥

ವೃತ್ತ ॥ ಶರಣಗುಣಾದ್ರಿ ವಜ್ರಮಂದಮೋಹ ದುರುಕ್ತಿಗಜಾಳಿ ಸಿಂಹಾಯ ॥
ಸ್ಥಿರಮತಿವಾರ್ಧಿ ಕುಂಭಜ ದುರಾಶ ಮಹಾ...ನಾಗ ವೈರಿ
ದುಸ್ತರಭವ ಭೀತಿ ಕಾನನ ಕುಠಾರ ಕಿಲ್ಬಿಷ ಗುಲ್ಮದಾತ್ರ ಮ
ದ್ಗುರು ಬಸವೇಶನಾಮಳಸುನಾಮ ಮಹಾತ್ಮರು ಓದಿಯಕ್ಕಜಿಂ ॥

ಅಂತ್ಯ : ಶರಣು ಶರಣು ಬಸವಲಿಂಗ ॥ ೧೧೯ ॥
ಶರಣು ಶರಣು ಬಸವಲಿಂಗ ॥ ೧೨೦ ॥

ಕಂದ ॥ ಕಂತುಹರ ಬಸವಲಿಂಗನ
ಇಂತಪ್ಪುತ್ಸಾಹ ರಗಳೆಯುಂ ಪಠಿಸೋದುವ

ಸತತ ಕೇಳುವ ಶರಣರ
ಚಿಂತಾಮಣಿ ಒಸವ ಲಿಂಗನಾಮುಂ ಪ್ರೇಮುಂ ॥ ೧ ॥
ಬಸವಲಿಂಗ ರಗಳೆ ಸಮಾಪ್ತಂ ಮಂಗಳ ಮಹಾಶ್ರೀ.

**ವಿಷಯ :** ಬಸವೇಶ್ವರ ನಾಮ ಮಹಿಮೆ.

**ವಿಶೇಷ :** ಶಕಟರೇಫದ ಬಳಕೆ ಇದೆ. ಪತ್ರಗಳು ತ್ರುಟಿತವಾಗಿವೆ. ಅಕ್ಷರ ಸುಂದರ. ಈ ಕಟ್ಟಿನಲ್ಲಿ 'ಬಸವರಾಜದೇವರ ಷಡುಸ್ಥಲದ ವಚನ' ಮತ್ತು 'ಶರಣು ಬಸವ ರಗಳೆ' ಎಂಬ ಇನ್ನೆರಡು ಕೃತಿಗಳಿವೆ.

—ಎಂಪಿಎಂ

## 31

| ಕೆ. ಬಿ. ೬೯೪/೯ | ಬಸವಲಿಂಗ ರಗಳೆ | ರಗಳೆ |
|---|---|---|
| ೬.೫" × ೮.೩ | ? | ? |
| ೧೮೧-೧೯೧ ಪತ್ರ | ೧೮ ಪಂಕ್ತಿ | ೨೨ ಅಕ್ಷರ |

**ಆದಿ :** ರಾಗ ॥ ಮೋಹನ ॥ ಆದಿತಾಳ ॥
ಶ್ರೀ ಮಹಾ ವೃಷಭ ಪ್ರಶಿದ್ಧರೂಪ ಬಸವಲಿಂಗ ।
ಧಾಮನಿಧಿಸಿ ಬಿಂದು ಕೋಟಿಧಾಮ ಶೀಮ ಬಸವಲಿಂಗ ॥
ಸತ್ವರಜೋತಮೋಗುಣಪ್ರಭಾವ ನೀನು ಬಸವಲಿಂಗ ।
ತತ್ವಮಸಿಪೆದೈಕ್ಯವಚನ ಧರ್ಮಯುಕ್ತ ಬಸವಲಿಂಗ ॥

**ಅಂತ್ಯ :** ಹೊಂದಿ ಸಂಗಮೇಶಲಿಂಗದೊಲಿಮೆ ಪಡದೆ ಬಸವಲಿಂಗ ।
ಅಂದೆದೋಳ್ಶಿವೈಕ್ಯ ನಗರದಲ್ಲಿ ಮೆರದೆ ಬಸವಲಿಂಗ ॥
ಮಂಗಲಂತೆ ಮಂಗಲಂ ತೆ ಮಂಗಲಂ ತೆ ಬಸವಲಿಂಗ ।
ಮಂಗಲಂ ತೆ ನಿತ್ಯಸೌಖ್ಯ ಮಂಗಲಂ ತೆ ಬಸವಲಿಂಗ ॥
× × × × ಮಂಗಳಂ ಜಗತ್ಪ್ರಭೋಃ ॥ ೨೧೬ ॥
ಶ್ರೀ ಬಸವೇಶ್ವರಾಯ ನಮೋನ್ನಮಃ ॥

**ವಿಷಯ :** ಬಸವನ ಮಹಿಮಾವರ್ಣನೆ.

**ವಿಶೇಷ :** ಕೃತಿ ಸಮಗ್ರ. ಪ್ರತಿ ಸುದೃಢ. ಬರವಣಿಗೆ ಸುಂದರ. ಇದರೊಂದಿಗೆ ಶ್ರೀರಾಮ ಮಹಿಮಾ ಸ್ತೋತ್ರ ಮುಂತಾದ ಕೃತಿಗಳಿವೆ.

—ಎಂಪಿಎಂ

## 32

| ಕೆ. ೧೨೮೧ | ಬಸವ ಶಿಖಾಮಣಿ | ಸಾಂಗತ್ಯ |
|---|---|---|
| ೯″ × ೧.೩″ | ಕಾಡ | ? |
| ೨೧-೯೪ ಪತ್ರ | ೬ ಪಂಕ್ತಿ | ೫೦ ಅಕ್ಷರ |

**ಆದಿ :** ......ರು ।
ಕುಲದಿವಪ್ಪಿಹುದು ಆರುಣ್ಯಾ ॥ ೫೯ ॥
ತರುಣಿ......ಬೇಡುವ ಪರಿಯಂತೆ
ಹಿರಿಯಾರ...... ಸೈರಿಸುವಂತೆ
ಶಿರದಂತೆ ಹತ್ತಿಯು ನರದಂತೆ ಮುನಿಗಳ
ಪರಿಯಂತೆ ಪರದಾರಿಯಂತೆ ॥೬೦ ॥

**ಅಂತ್ಯ :** ಕೇಳಿ ಸಜ್ಜನರು ಬಸವಣ್ಣ ಭಕ್ತಿಯು
ತಾಳಿ ಪವಾಡವ ಮೆರದೂ
ಭಾಳಾಕ್ಷ ಸಂಗಮೇಶ್ವರನೊಳೈಕ್ಯವಾದ
ಯೇಳು ಸಂಧಿಗೆ ಶರಣಾತಿ ॥ ೨೦೧ ॥

ಅಂತು ಸಂಧಿ ೭ಕ್ಕೆ ಪದನು ೧೧೧೧ಕ್ಕೆ ಮಂಗಳ ಮಹಾಶ್ರೀಶ್ರೀ.

**ವಿಷಯ :** ಬಸವಣ್ಣನ ಚರಿತ್ರೆ.

**ವಿಶೇಷ :** ಅಸಮಗ್ರ. ೨ನೆಯ ಸಂಧಿ ೫೯ನೆಯ ಪದ್ಯದಿಂದ ಮುಂದಕ್ಕೆ ಪೂರ್ತಿ ಇದೆ. ಪ್ರತಿ ಶುದ್ಧವಾಗಿದೆ.

—ಜಿಜಿಎಂ

## 33

| ಕೆ. ೧೪೫೧/೨ | ಬಸವ ಸ್ತುತಿ | ಹಾಡು |
|---|---|---|
| ೭.೮″ × ೧.೭″ | ಪಾಲ್ಕುರಿಕೆ ಸೋಮಾರಾಧ್ಯ | ಸು. ೧೨೦೦ |
| ೧೨೧-೧೨೩ ಪತ್ರ | ೧೦ ಪಂಕ್ತಿ | ೪೫ ಅಕ್ಷರ |

**ಆದಿ :** ಶ್ರೀಗುರು ಶಂಭುಲಿಂಗ ಪರಬ್ರಹ್ಮ ಸಾಂಬಸದಾಶಿವ ಮಹಾಲಿಂಗ ಮೂರ್ತಯೇ ನಮಃ ॥ ಬಸವ ಸ್ತುತಿ ಬರೆಯುವದಕೆ ಶುಭಮಸ್ತು ॥

ಪಲ್ಲ ॥ ಪಾಹಿಮಾಂ ಶರಣು ಬಸವ
ಪಾಹಿಮಾಂ ಶರಣು ಬಸವ
ಪಾಹಿಮಾಂ ಶರಣು ಬಸವ ಬಸವ ಪಾಹಿಮಾಂ

ಪ ॥ ಬಸವ ವೃಷಾದಿಪ ಶರಣು
ಬಸವ ನಂದಿನಾಥ ಶರಣು
ಬಸವರಾಜಂ ಶರಣು ಬಸವ ಪಾಹಿಮಾಂ ॥ ೧ ॥

ಅಂತ್ಯ : ಗೊತ್ತು ಭಕ್ತರಿಗೆ ಕರ್ತು ಕೂಡಲಸಂಗಮೇಶ
ಆತ್ಮದಲ್ಲಿಯ್ಯ ಪಾದಕರ್ತು ಬಸವನೂ
ಪಾಹಿಮಾಂ ಶರಣು ಬಸವಾ
ಪಾಹಿಮಾಂ ಶರಣು ಬಸವಾ
ಪಾಹಿಮಾಂ ಶರಣ ಬಸವ ಬಸವ ಪಾಹಿಮಾಂ ॥ ೩೩ ॥
ಯಿತಿ ಶ್ರೀಮದ್ಗುರು ಪಾಲ್ಕುರಿಗೆ ಸೋಮನಾರಾಧ್ಯರು ನಿರೂಪಿಸಿದ ಬಸವ ಸ್ತುತಿ ಸಂಪೂರ್ಣಕ್ಕೆ ಮಂಗಳ ಮಹಾಶ್ರೀ × × ×

ವಿಷಯ : ಬಸವ ಸ್ತುತಿ.

ವಿಶೇಷ : ಇದೇ ಕಟ್ಟಿನಲ್ಲಿ ಚೋರಬಸವ ಚಾರಿತ್ರ ಎಂಬ ಗ್ರಂಥವಿದೆ.

—ವೈಸಿಬಿ

## 34

| ಕೆ. ೧೧೬೪/೯ | ಬಸವ ಸ್ತುತಿ | ವಚನ |
|---|---|---|
| ೧೧" × ೧.೭" | ? | ? |
| ೧–೬ ಪತ್ರ | ೯ ಪಂಕ್ತಿ | ೪೨ ಅಕ್ಷರ |

ಆದಿ : ಶ್ರೀ ಗುರುವೇ ಗತಿ । ಯಂನ ಸ್ಥೂಲ ತನುವಿಂಗೆ ಯಿಷ್ಟಲಿಂಗವಾದಾತ ಬಸವಂಣ ॥ ಯಂನ ಸೂಕ್ಷ್ಮ ತನುವಿಂಗೆ ಪ್ರಾಣಲಿಂಗವಾದಾತ ಬಸವಂಣ ॥ ಯಂನ ತಾರುಣ ತನುವಿಂಗ ಭಾವಲಿಂಗವಾದಾತ ಬಸವಂಣ । ಯಂನ ದ್ರಕ್ಕಿಂಗೆ ಯಿಷ್ಟಲಿಂಗವಾದಾತ ಬಸವಂಣ । ಯಂನ ಮನಕ್ಕೆ ಪ್ರಾಣಲಿಂಗವಾದಂತ ಬಸವಣ್ಣ । ಯಂನ ನೇತ್ರಕ್ಕೆ ಶಿವಲಿಂಗವಾದಾತ ಬಸವಣ್ಣ ॥ ೨ ॥ ಯಂನ ಹೃದಯಕ್ಕೆ ಮಹಾಲಿಂಗವಾದಾತ ಬಸವಂಣ ।

ಅಂತ್ಯ : ಆಂ ವೋಂ ಸಾಂ ವಾಂ ನಾಂ ಮಾಂ ಸಿಂ ವಾಂ ಯಾಂ ಓಂ ॥ ಜಪದ ಮಂತ್ರ ೭೨ ತಿಂಗಳಿಗೆ ಅಷ್ಟ ಮಹಾಸಿದ್ಧಿ । ॥ ೧೦೮ ॥ ತಿಂಗಳಿಗೆ ತ್ರೈಜಗದಾದಿ ಪತಿ ನಿರಂಜನ ನಿರ್ಗುಣ ಸಿವಯ್ಯಗಾ ಸಿದ್ಧಿ । ಯಿಾ ಜಾವದಾದಿ ಮರಣವಾದರೆ ಬಯಲು ಬ್ರಂಹ್ಮವ ಬೆರದರು । × × × ಜೀವಂನ ಮುಕ್ತರಾದರು । ಚಂನ ಬಸವಣ್ಣನೇ ಸಾಕ್ಷಿಯಾಗಿ ಕೂಡಲ ಚಂನಸಂಗಮ ದೇವ ॥ ಶ್ರೀ ಶ್ರೀ ॥

ವಿಷಯ : ಬಸವೇಶ್ವರನ ಸ್ತುತಿ.

ವಿಶೇಷ : ಅಕ್ಷರಗಳು ಸುಂದರವಾಗಿಲ್ಲ. ಗರಿಗಳು ಚೆನ್ನಾಗಿಲ್ಲ. ಈ ಕಟ್ಟಿನಲ್ಲಿ 'ಜಪ ವಿಧಿ' ಮುಂತಾದ ಇತರ ೧೬ ಕೃತಿಗಳಿವೆ.

—ಎಂಪಿಎಂ

## 35

| ಕ. ಬಿ. ೬೯೯/೨೨ | ಬಸವ ಸ್ತುತಿ | ಹಾಡು |
|---|---|---|
| ೬″ × ೮.೫″ | ? | ? |
| ೨೬-೨೭ ಪತ್ರ | ೨೪ ಪಂಕ್ತಿ | ೨೨ ಅಕ್ಷರ |

ಆದಿ : ಶ್ರೀಗುರು ಬಸವಲ್ಲಿಂಗಾಯ ನಮಃ ॥
ಯಾಕೆ ಕೃಪೆಯ ಮಾಡಲೊಲ್ಲೊ ಬಸವಯ್ಯಾ ।
ನಿಂ ಮನೇ ಕಕಾಲ ಭಜಿಸುತಿರ್ದೆ ಬಸವೈಯ ॥ ಪಲ್ಲ ॥

ಬೇಡುವೆನೊ ನಿಂಮನೊಂದ ಬಸವೈಯ್ಯ ।
ಶರಣರ ಕೂಡೆ ಬಾಳುವಂತೆ ಮಾಡು ಬಸವೈಯ್ಯ ॥
ಕಾಂಡಬೇಡ ಕಾಯೆ ಯಂನ ಬಸವೈಯ್ಯ ಬೊಂಬೆ ।
ನಾಡಿಸುವ ಸುತ್ರದಾರಿ ಬಸವೈಯ್ಯ ॥ ೧ ॥

ಅಂತ್ಯ : ರಾಸಿದೈವಂಗಳನೊಲ್ಲೆ ಬಸವೈಯ್ಯ ನಿಂಮ ।
ದಾಸಿಯೆಂದುರಕ್ಷಿಸೈಯ್ಯ ಬಸವೈಯ್ಯ ।
ವಾಸೆಪುತಯುಂನೊಳೇಕೆ ಬಸವೈಯ್ಯ ।
ದೋಶನಾಶ ಕೊಟ್ಟುರೆಶನೆಂಬೆ ಬಸವೈಯ್ಯ ॥ ೭ ॥

ವಿಷಯ : ಬಸವೇಶ್ವರನ ಸ್ತುತಿ.

ವಿಶೇಷ : ಸಮಗ್ರ ಕೃತಿ. ಶಿಥಿಲ ಪ್ರತಿ. ಅಶುದ್ಧ ಬರವಣಿಗೆ. ಮೋಡಿ ಅಕ್ಷರ. ಇದರೊಂದಿಗೆ ‘ ಸಿದ್ಧಲಿಂಗನ ಅಷ್ಟಕ ’ ಕೆಬಿ ೬೯೯/೨೧ ‘ ಶಿವಾಷ್ಟೋತ್ತರ ಶತನಾಮ ’ ಎಂಬ ಸಂಸ್ಕೃತ ಕೃತಿ ಇವೆ.

—ಎಂಪಿಎಂ

## 36

| ಕೆ. ೧೪೬೫ | ಬಸವ ಸ್ತೋತ್ರ | ವಚನ |
|---|---|---|
| ೯.೫ × ೧.೧″ | ಚೆನ್ನಬಸವಣ್ಣ | ೧೨ನೆಯ ಶತಕ |
| ೧-೫೨ ಪತ್ರ | ೫ ಪಂಕ್ತಿ | ೪೮ ಅಕ್ಷರ |

ಆದಿ : ಬಸವ......ದಕ್ಕೆ ಶುಭಾಮಸ್ತು॥ ಜಯ......ಡಲ। ಸಪ್ತಸಮುದಂಗಳಿಲ್ಲ ದಂದು। ವೊಂದು ಮಹಾವೃಕ್ಷವಿದ್ಧಿತ್ತಯ್ಯ। ಆ ವೃಕ್ಷವ ಕಂಡು...... ಶಿವಾ ಯೆನುತಿದ್ದೆನು। ಆ ವೃಕ್ಷದಿಂದ ಶಡು ಸಾಖ್ಯಂಗಳು ಪುಟ್ಟಿದವು। ಆ ಶಡು ಸದಾಖ್ಯಂಗಳನೆಳ...

ಅಂತ್ಯ : ಗುರುವೊಂದೆ। ಬಸುರು ಲಿಂಗವೊಂದೆ। ಬಸುರು ಜಂಗಮವೊಂದೆ। ಬಸುರು ಪ್ರಸಾದವೊಂದೆ। ಬಸುರು ಯಿವನಾರೈಯ್ಯ। ಅಮಳೋಖ್ಯವ...... ತೋರಿದವರು। ಯಿವನಾರೈಯ್ಯಾ। ಪ್ರಜ್ವಲಿತವ ಮಾಡಿ। ಬೇರೆ ಬೇರೆ ಕರತಳಾಮಳಕವ ಮಾಡಿ। ತೋರಿದವರು ಪೂರ್ವಾಚಾರಿ ಭಕ್ತಿಭಂಡಾರಿ। ಬಸವಂಣ ನೀನೆನಗೆ। ಗೊಹೇಶ್ವರ ಲಿಂಗವ ತೋರಿದೆಯಾಗಿ। ಲೋಕಾಧಿ ಲೋಕವು। ಕಿಂಚಿತ್ತು ॥ ೧೫೩ ॥ ಬಸವಂಣನ ಸ್ತೋತ್ರ, ಪ್ರಾಕಂಪತಿ ಯಿದ್ಧಷ್ಟು ಸಮಾಪ್ತ ಮಂಗಳ ಮಹಾ ಶ್ರೀ

ವಿಷಯ : ಬಸವೇಶ್ವರನನ್ನು ಸ್ತುತಿಸುವ ವಚನಗಳು.

ವಿಶೇಷ : ಆದಿಯಲ್ಲಿ ೩ ಗರಿಗಳು ತ್ರುಟಿತವಾಗಿವೆ. ಅಲ್ಲಲ್ಲಿ ಹುಳು ತಿಂದಿದೆ. ಬರಹ ಚೆನ್ನಾಗಿದೆ.

—ಕೆಆರ್ಎಸ್

37

| ಕೆ. ೧೧೩೫/೩ | ಬಸವ ಸ್ತೋತ್ರ | ವಚನ |
|---|---|---|
| ೬.೫" × ೨" | ? | ? |
| ೩೪-೫೧ ಪತ್ರ | ೧೩ ಪಂಕ್ತಿ | ೪೨ ಅಕ್ಷರ |

ಆದಿ : ...ಯ ಕೇಳಲಾಗದು। ಆದಿಲಿಂಗ ಅನಾದಿ ಬಸವಂಣನು। ಲಿಂಗವು ಬಸವಂಣನುದರದಿಂದ ಪುಟ್ಟಿತ್ತು। ಜಂಗಮ ಮಡಿಪಿ ಬಸವಂಣನುಧರ ದಿಂದ ಪುಟ್ಟಿತ್ತು। ಪ್ರಸಾದವು ಬಸವಂಣನನು ಕರಿಸಲಾಯಿತ್ತು। ಯಿಂತೀ ತ್ರಿವಿಧಕ್ಕೆ ಬಸವಂಣನು। ಮತ್ತಂ ನಮಃ ಶಿವಾಯ ಶಿವಶಕ್ತಿ। ಓಂ ನಮಃ ಶಿವಾಯ ಬಸವಂಣನು। ಯಿಂತೀ ಶಿವಲಿಂಗ ಮಂತ್ರವನೆ ಯಿಂನ ಮನೋ ಮೂರ್ತಿಯಾಗಿ ಬೆಳಗಿ ತೋಱಿದೆಯಾಗಿ। ಕೂಡಲ ಚೆಂನ ಸಂಗಯ್ಯನಲ್ಲಿ ಆವ ನಿರ್ನ್ನಯವಿಲ್ಲದುದು ಓಂ ನಮಃ ಶಿವಾಯ ಬಸವ ಗುರುವೆ ಶರಣು ಶರಣು ಯೆನುತಿರ್ದೆನೂ ॥ ೨೨ ॥

ಅಂತ್ಯ : ಅರ್ಚಿಸಲು ಬೇಡವವ ಪೂಜಿಸಲು ಬೇಡವದ। ನಿತ್ಯ ಜಪ ತಪ ನಿನಗೆ ಬೇಡಾ। ಸಚ್ಚಿನಂದ ಗುರು ಕಪಿಲ ಸಿದ್ಧಮಲ್ಲಿಕಾರ್ಜುನಯ್ಯನ ಬಸವಾಕ್ಷರ ತ್ರಯುವ ನೆನೆ ನಿನಗೆ ನಿತ್ಯಪದವೂ ॥ ೧೨೩ ॥
ಬಸವಸ್ತೋತ್ರ ಸಂಪೂರ್ನ ಮಂಗಳ ಮಹಾ ಶ್ರೀ

ವಿಷಯ : ಬಸವನನ್ನು ಸ್ತುತಿಸುವ ವಚನಗಳು.

ವಿಶೇಷ : ಆದಿಯಲ್ಲಿ ೧-೨೨ನೆಯ ವಚನಗಳವರೆಗೆ ಪತ್ರಗಳಿಲ್ಲ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಆಚರಣೆಯ ವಚನ, ಸಂಬಂಧದ ವಚನಗಳೇ ಮೊದ ಲಾಗಿ ಒಟ್ಟು ಆರು ಕೃತಿಗಳಿವೆ.

—ಕೆಆರ್ಎಸ್

38

ಕೆ. ೬೬೪/೩ ಬಸವಸ್ತೋತ್ರದ ತ್ರಿವಿಧಿ ಪದ್ಯ (ತ್ರಿವಿಧಿ)
೯.೫" × ೨.೪" ಸಿದ್ಧರಾಮ ಸು. ೧೧೬೦
೬ ಪತ್ರ ೧೨ ಪಂಕ್ತಿ ೬೭ ಅಕ್ಷರ

ಆದಿ : ಗುರು ಬಸವ ಲಿಂಗಾಯ ನಮಃ। ಬಸವೇಶ್ವರನ ತ್ರಿವಿದಿ ... ಪರಮೇಶ್ವ-
ರೀಶ್ವರಿ। ಬಸವಾಪ್ರಮಥಾದಿ ದೇವರಕ್ಷಿಸು ಬಸವ ॥ ೧ ॥
॥ ತ್ರಿವಿದಿ ॥ ಪ್ರಥಮಂತು ಬಸವಂಣಾ। ದ್ವಿತೀಯೆಂತು। ಲಿಂಗವೂ।
ತೃತೀಯೆಂತೂ ಸತ್ಸ ಅಕಳಂಕ ಗುಣಸಿಧೇ ಚಿದಾನಂದಾ ಬಸವಂಗೆ।
ಭಕ್ತ ತಾನಾದೆನು ಗುರುವೆ ಯೋಗಿನಾಥ ॥ ೧ ॥

ಅಂತ್ಯ : ಇಂತು ಬಸವ ಸ್ತವವಂ
ಸಂತತಂ ನೆನದಿ......
ಸಶಿತಾನಂದಗುರು ಬಸವಂಣ್ಣಾಣೆತೆಯೊಳುಯಲಿ
ವಚಾ ವರಸೆನನ್ನಾನು ಯೋಗಿನಾಥ ॥ ೧೨೫ ॥
ಬಸವ ಸ್ತೋತ್ರದ ತ್ರಿವಿಧಿ ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ

ವಿಷಯ : ಬಸವೇಶ್ವರನ ಸ್ತುತಿ.

ವಿಶೇಷ : ಪತ್ರಗಳು ಒಂದು ಕಡೆಯ ತುದಿಯಲ್ಲಿ ತ್ರುಟಿತವಾಗಿವೆ. ಪತ್ರಸಂಖ್ಯೆಯಿಲ್ಲ.
ಈ ಕಟ್ಟಿನಲ್ಲಿ ಈ ಗ್ರಂಥವಲ್ಲದೆ ಮಿಶ್ರಸ್ತೋತ್ರಾದಿ ೧೭ ಪದಗಳು ಇವೇ
ಮೊದಲಾದ ೩೫ ಕನ್ನಡ ಗ್ರಂಥಗಳೂ. ಶಿವಭುಜಂಗ ಸ್ತೋತ್ರಾದಿ ೧೬
ಸಂಸ್ಕೃತ ಗ್ರಂಥಗಳೂ, ಒಂದು ತೆಲುಗು ಕೃತಿಯೂ ಇವೆ

—ಎಸ್‌ಬಿ

39

ಕೆ. ೮೮೧/೮ ಬಸವಸ್ತೋತ್ರದ ತ್ರಿವಿಧಿ ತ್ರಿವಿಧಿ
೮" × ೧.೮" ಸಿದ್ಧರಾಮ ಸು. ೧೧೬೦
೭೯-೮೬ ಪತ್ರ ೧೧ ಪಂಕ್ತಿ ೫೦ ಅಕ್ಷರ

ಆದಿ : ಬಸವ ಸ್ತೋತ್ರದ ತ್ರಿವಿಧಿ ॥ ಕಂದ ॥
ಬಸವೇಶನೆ ಬಸವರಾಜನೆ
ಬಸವಂಣನೆ ಬಸವ ತಂದೆ ಬಸವ ಕೃಪಾನಿಧಿ
ಬಸವ ಪರಮೇಶ್ವರಿ ಶರ
ಬಸವ ಪ್ರಮಥಾದಿ ದೇವ ರಕ್ಷಿಸು ಬಸವಾ ॥
ಪ್ರಥಮಂತು ಬಸವಂಣ ದ್ವಿತಿಯಂತು ಲಿಂಗಾವು

ತೃತಿಯುಂತು ತತ್ವ ಬ್ರಹ್ಮಾಂಡವೆಲ್ಲಾ ಅಕಳಂಕಗುಣನಿಧಿ ಚಿದಾನಂದ
ಬಸವಂಗೆ ಭಕತನಾದೆನು ಗುರುವೆ ಯೋಗಿನಾಥಾ ॥ ೧ ॥

ಅಂತ್ಯ : ಯಿಂತು ಬಸವಸ್ಥವವ ಸಂತತಂ ನೆನೆದೀಗ ನಿ
ಶ್ಚಿಂತನಾದೆನ್ನೈ ಸುಖತರದಲ್ಲಿ
ಸಚ್ಚಿದಾನಂದ ಗುರು ಬಸವಂಣನಾಣತೆಯಲಿ
ವಚ್ಚಾತ ನಿನಗಾನು ಯೋಗಿನಾಥಾ ॥ ೧೨೫ ॥
ಬಸವ ಸ್ತೋತ್ರದ ತ್ರಿವಿಧಿ ಸಮಾಪ್ತ ಮಂಗಳ ಮಹಾ ಶ್ರೀ ॥

ವಿಷಯ : ಬಸವ ಸ್ತುತಿ.

ವಿಶೇಷ : ಗ್ರಂಥ ಸಮಗ್ರವಾಗಿದ್ದು ಶಕಟರೇಫವನ್ನು ಬಳಸಿದೆ. ಒಂದೆರಡು ಗರಿಗೆ ಹುಳು ಹೊಡೆದಿದೆ. ಇದೇ ಕಟ್ಟಿನಲ್ಲಿ ಶಂಕರದೇವರ ಕಂದ, ರುದ್ರಾವಾಚ, ಲಿಂಗಸ್ತೋತ್ರದ ಷಟ್ಪದಿ ಮೊದಲಾದ ಒಟ್ಟು ೧೨ ಕೃತಿಗಳಿವೆ. [ಕ.ಹ.ಪ್ರ.ವ.ಸೂ. ತೃತೀಯ ಸಂಪುಟ. ಪು. ೩೧–೩೩ ಕ್ರಮಾಂಕ ೧೦೩೩–೧೦೩೬ ನೋಡಿ].

—ಕೆಆರ್‌ಎಸ್

40

| ಕೆ. ೧೦೦೬/೧೮ | ಬಸವಸ್ತೋತ್ರದ ತ್ರಿವಿಧಿ | ತ್ರಿವಿಧಿ |
|---|---|---|
| ೭.೭" × ೧.೫" | ಸಿದ್ಧರಾಮ | ಸು. ೧೧೬೦ |
| ೪೧–೪೯ ಪತ್ರ | ೧೦ ಪಂಕ್ತಿ | ೪೬ ಅಕ್ಷರ |

ಆದಿ : ಬಸವಸ್ತೋತ್ರದ ತ್ರಿವಿಧಿ.

ಕಂದ ॥ ಬಸವೇಶನೆ ಬಸವರಾಜನೆ
ಬಸವಂಣನೆ ಬಸವತಂದೆ ಬಸವ ಕೃಪಾನಿಧಿ
ಬಸವ ಪರಮೇಶ್ವರೀಶ್ವರ
ಬಸವ ಪ್ರಮಥಾದಿ ದೇವ ರಕ್ಷಿಸು ಬಸವ ॥ ೧ ॥

ಪ್ರಥಮಂತು ಬಸವಂಣ ದ್ವಿತಿಯೆಂತು ಲಿಂಗವು
ತ್ರುತಿಯುಂತು ತತ್ವ ಬ್ರಹ್ಮಾಂಡವೆಲ್ಲ
ಅಕಳಂಕ ಗುಣನಿಧಿ ಚಿದಾನಂದ ಬಸವಂಗೆ
ಭಕ್ತನಾದೆನು ಗುರುವೆ ಯೋಗಿನಾಥಾ ॥ ೨ ॥

ಅಂತ್ಯ : ಯಿಂತು ಬಸವಸ್ತವವ ಸಂತತಂ ನೆನೆದೀಗ ನಿ
ಶ್ಚಿಂತನಾದೆನ್ನೈ ಸುಖತರದಲ್ಲಿ
ಸಚ್ಚಿದಾನಂದ ಗುರು ಬಸವಂಣನಾಣತೆಯೆಲ್ಲಿ
ವಚ್ಚಿತ ನಿಮಗಾನು ಯೋಗಿನಾಥಾ ॥ ೧೭೫ ॥

ಬಸವಸ್ತೋತ್ರದ ತ್ರಿವಿಧಿ ಸಮಾಪ್ತ ಮಂಗಳ ಮಹಾ.

ವಿಷಯ : ಬಸವೇಶ್ವರನ ಸ್ತುತಿ.

ವಿಶೇಷ : ಸಮಗ್ರ. ಶಕಟರೇಫವನ್ನು ಬಳಸಿದೆ. ಪತ್ರಿಯೊಂದು ಪದ್ಯವೂ 'ಯೋಗಿ ನಾಥಾ' ಎಂಬ ಅಂಕಿತದಿಂದ ಕೊನೆಯಾಗುತ್ತದೆ. ಇದೇ ಕಟ್ಟಿನಲ್ಲಿ ಷಡ್ವಕ್ತ್ರ (ಸಂ), ಮಂಗಳಾಷ್ಟಕ (ಸಂ), ಗುರುಸ್ತೋತ್ರದ ತ್ರಿವಿಧಿ ಮೊದಲಾದ ಒಟ್ಟು ೨೪ ಕೃತಿಗಳಿವೆ. [ಕ.ಹ.ಪ್ರ.ವ.ಸೂ. ಚತುರ್ಥ ಸಂಪುಟ ಪುಟ ೩೧–೩೪ ಕ್ರಮಾಂಕ ೧೦೩೩–೧೦೩೬ ನೋಡಿ].

—ಕೆಆರ್‌ಎಸ್

## 41

ಕೆ. ೧೯೫೫/೩ ಬಸವಸ್ತೋತ್ರದ ತ್ರಿವಿಧಿ ತ್ರಿವಿಧಿ
೮.೬೬" × ೩" ಸಿದ್ಧರಾಮ ಸು. ೧೧೬೦
೧೫–೨೫ ಪತ್ರ ೯ ಪಂಕ್ತಿ ೨೬ ಅಕ್ಷರ

ಆದಿ : ಕಂದ ॥ ಬಸವೇಶನೆ ಬಸವರಾಜನೆ
ಬಸವಂಣನೆ ಬಸವ ತಂದೆ ಬಸವ ಕೃಪಾನಿಧಿ
ಬಸವ ಪರಮೇಶ್ವರೀಶ್ವರ
ಬಸವ ಪ್ರಮಥಾದಿ ದೇವ ರಕ್ಷಿಸು ಬಸವಾ ॥ ೧ ॥

ಅಂತ್ಯ : ಇಂತು ಬಸವಸ್ತವವ ಸಂತತ ನೆನೆದೀಗ ನಿ
ಶ್ಚಿಂತ ನಾದೆನ್ನೈ ಸುಖತರದಲ್ಲಿ
ಸಚ್ಚಿದಾನಂದ ಗುರು ಬಸವಂಣ ನಾಣತೆಯುಲ್ಲಿ
ವಚ್ಚುತ ನೀನಾಗಲು ಯೋಗಿನಾಥ ॥ ೧೨೪ ॥
ಬಸವ ಸ್ತೋತ್ರದ ತ್ರಿವಿಧಿ ಸಂಪೂರ್ಣ ಮಂಗಳ ಮಹಾಶ್ರೀ

ವಿಷಯ : ಬಸವೇಶ್ವರನ ಸ್ತುತಿ.

ವಿಶೇಷ : ಇದೇ ಕಟ್ಟಿನಲ್ಲಿ ಗಣನಾಮ ಸ್ತೋತ್ರದ ತ್ರಿವಿಧಿ, ಗುರುಸ್ತೋತ್ರದ ತ್ರಿವಿಧಿ ಮುಂತಾದ ೧೯ ಗ್ರಂಥಗಳಿವೆ.

—ವೈಸಿಬಿ

## 42

ಕೆ. ೧೧೩೯/೧೦ ಬಸವಸ್ತೋತ್ರದ ತ್ರಿವಿಧಿ ತ್ರಿವಿಧಿ
೭"×೨" ಸಿದ್ಧರಾಮ ಸು. ೧೧೬೦
೧-೧೩ ಪತ್ರ ೯ ಪಂಕ್ತಿ ೩೦ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಬಸವ ತ್ರಿವಿದಿ ॥

ಕಂದ ॥ ಬಸವೇಶನೆ ಬಸವರಾಜನೆ
ಬಸವಂಣನೆ ಬಸವ ತಂದೆ ಬಸವ ಕೃಪಾನಿಧಿ
ಬಸವ ಪರಮೇಶ್ವರೀಶ್ವರ
ಬಸವ ಪ್ರಮಥಾದಿದೇವ ರಕ್ಷಿಸು ಬಸವಾ

ತ್ರಿವಿದಿ : ಪ್ರಥಮಂತು ಬಸವಂಣ ದ್ವಿತಿಯಂತು ಲಿಂಗವು
ತ್ರುತಿಯುಂತು ತತ್ವ ಬ್ರಹ್ಮಾಂಡಾವೆಲ್ಲ
ಅಕಳಂಕ ಗುಣಸಿಧಿ ಚಿದಾನಂದ ಬಸವಂಗೆ
ಭಕ್ತನಾದೆನು ಗುರುವೆ ಯೋಗಿನಾಥಾ ॥ ೧ ॥

ಅಂತ್ಯ : ಯಿಂತೂ ಬಸವ ಸ್ತವವಾ ಸಂತಾತಂನೆನಗೀಗ ನಿ
ಚಿಂತನಾದೆನ್ನೈ ಸುಖತರದಲ್ಲಿ
ಸಚ್ಚಿದಾನಂದ ಗುರು ಬಸವಂಣನಾಣತೆಯಲ್ಲಿ
ವಚ್ಚಾತ ನಿಮಗಾನು ಯೋಗಿನಾಥಾ ॥ ೧೨೭ ॥
ಬಸವಸ್ತೋತ್ರದ ತ್ರಿವಿದಿಗೆ ಸಮಾಪ್ತ ಮಂಗಳ ಮಹಾ ಶ್ರೀ

ವಿಷಯ : ಬಸವೇಶ್ವರನ ಸ್ತೋತ್ರ.

ವಿಶೇಷ : ಗ್ರಂಥ ಸಮಗ್ರ. ಕೆಲವು ಕಡೆ ಪ್ರಾಸ ಎರಡೆರಡು ಸಾಲುಗಳಿಗೆ ಅನುಸರಿಸಿದೆ. ಪ್ರತಿ ಪದ್ಯದ ಕೊನೆಯಲ್ಲಿ 'ಯೋಗಿನಾಥಾ' ಎಂಬ ಅಂಕಿತವಿದೆ. ಈ ಕೃತಿಯಲ್ಲದೆ ಇದರೊಂದಿಗೆ ಶಿವಾಧವ ಶತಕಾದಿ ೩೬ ಗ್ರಂಥಗಳಿವೆ. ಇದರಲ್ಲಿ ಕೆಲವು ಸಂಸ್ಕೃತ ಗ್ರಂಥಗಳೂ ಇವೆ.

—ಎಸ್‌ಬಿ

## 43

ಕೆ. ೧೯೪/೧ ಬಸವಸ್ತೋತ್ರದ ತ್ರಿವಿಧಿ ತ್ರಿವಿಧಿ
೭.೨"×೧.೭" ಸಿದ್ಧರಾಮ ಸು. ೧೧೬೦
೧–೨೫ ಪತ್ರ. ೬ ಪಂಕ್ತಿ ೩೨ ಅಕ್ಷರ

ಆದಿ : ಶ್ರೀ ಗುರುಬಸವ ಲಿಂಗಾಯ ನಮಃ ॥ ಬಸವಸ್ತೋತ್ರದ ತ್ರಿವಿಧಿ ॥

ಕಂದ ॥ ಬಸವೇಶನೆ ಬಸವರಾಜನೆ
ಬಸವಂಣನೆ ಬಸವ ತಂದೆ ಬಸವ ಕೃಪಾನಿಧಿ
ಬಸವ ಪರಮೇಶ್ವರೀಶ್ವರ
ಬಸವ ಪ್ರಮಥಾದಿದೇವ ರಕ್ಷಿಸು ಬಸವಾ ॥ ೧ ॥

ಪ್ರಥಮಂತು ಬಸವಣ್ಣ ದ್ವಿತೀಯಂತು ಲಿಂಗವು
ತೃತೀಯಂತು ತತ್ವ ಬ್ರಹ್ಮಾಂಡವೆಲ್ಲ

ತುಂಗಕುಚಗಳ ಕುಂಕುಮಾಂಕಿತ
ಮಂಗಳಾಂಗ ಮಹೇಶ ಪರಶು ಕು
ರಂಗವರದಾಭಯಕರಾಬ್ಜ ಸುಮೇರು ಕೋದಂಡಾ ॥೧॥ × × ×

ಪೂರ್ವದಲ್ಲಿ ಸರ್ವಸುಜನ ಮನೋಹರವಾದ ನೈಮಿಶಾರಣ್ಯದಲ್ಲಿ ಭಕ್ತಿ ಜ್ಞಾನ ತಪೋನಿಷ್ಠರಾದ ಶೌನಕಾದಿ ಮುನಿಶ್ರೇಷ್ಠರು × × × ಯಲೆ ಸೂತಪುರಾಣೀಕನೆ ಕೇಳಲು ಪುಳಕಾಂಕುರವನೆಸಗುವ ದಕ್ಷಿಣೋತ್ತರ ಪಿನಾಕಿನೀ ನದಿಗಳೆರಡರ ಮಹಿಮೆ ನಿಂನಿಂದಾ ಹೇಳಲ್ಪಟ್ಟಿತು. ಅದಂ ಕೇಳಿ ನಾಉ ಕೃತಾರ್ಥರಾದೆವು. ಲವಲಕೆಯುಳ್ಳವರಾಗಿ ಯಿನ್ನೊಂದ ಕೇಳಲಿಚ್ಛೈಸುವೆವು. ಯಲೊ ಸೂತಮುನಿಯೆ ನೀನು ಆದರದಿಂದೆಮಗೆ ಪೇಳುವದು. ದಕ್ಷಿಣ ದಿಕ್ಕಿಗೆ ಹರಿಯುವ ಪಿನಾಕಿನೀ ನದಿ ಯಿರುವದೊ ಆ ನದಿಗೆ ಪಶ್ಚಿಮದಿಕ್ಕ ನಲ್ಲಿ ಪಿನಾಕಿನಿ ವಂಹ್ನಿನದಿಗಳ ಸಂಗಮದ ಸಮೀಪದಲ್ಲಿ ನೈರುತ್ಯದಿಕ್ಕಿನೊಳು ದಕ್ಷಿಣ ಕೈಲಾಸವೆಂಬ ಸಿದ್ಧಗಂಧರ್ವರಿಂದ ಸೇವಿತವಾದ ಮಹಾಗಿರಿಯಿರು ವದು. ಅಲ್ಲಿ ಭಗವಂತನಾದ ಮಹೇಶನು ಮರಕತಾಂಬಿಕೆಯೊಡನೆ ವಿಹರಿ ಸಕ್ತಿಹುನು ಯಂದು ನಿನ್ನಿಂದ ಮೊದಲು ದಯಯಿಂದ ಹೇಳಲ್ಪಟ್ಟಿತಲ್ಲಾ.

**ಅಂತ್ಯ :** ಯಿಂತು ರಿಪುಕುಲತಿಮಿರಮಿಹಿರ ತುಷಾರಕರ ವರವಂಶವಾರ್ಧಿ ನೃಪಾಲ ಮಗೆ ಕೌಸ್ತುಭ ಕಳಲೆ ತಿಂಮ್ಮನರೇಂದ್ರ ನಂದನ ಕಾಂತ ತನೃಪಾಲ ತನಯು ನಯು ಕೋವಿದದೊಡಬಲಪತಿಸುತಸುಜನನುತ ವೀರರಾಜತನೂಜ ಗಿರಿಜಾ ರಮಣಾ ಚರಣಾರವಿಂದ ನಿರಂತ ಧ್ಯಾನನಿರ್ಧೂತಾಶೇಷಕಲುಷ ಗೀರ್ವಾಣ ಕರ್ನಾಟಕೋಭಯು ಸಾಹಿತೀ.ರಚಿತ ಬುಧಜನ ಮನೋರಂಜನ ನಂಜರಾಜ ನಂ ಬ್ರಹ್ಮಾಂಡ ಪುರಾಣೋಕ್ತ ಭದ್ರಾದ್ರಿ ಮಹಿಮೆಯಂ ಕರ್ನಾಟಕೋಕ್ತಿ ಯಿಂದಖಿಲರರಿವಂತೆ ಪೇಳ್ದ ನಂಜರಾಜ ವಚೋವಿಲಾಸಮೆಂಬೀ ಟೀಕು ಸಮಾಪ್ತವಾದುದು.

**ವಿಷಯ :** ಪಿನಾಕಿನಿ ಮತ್ತು ವಂಹ್ನಿ ನದಿಗಳ ಸಂಗಮದಲ್ಲಿರುವ ಭದ್ರಾದ್ರಿಯ ಮಹಿಮೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಶುದ್ಧವಾಗಿದೆ.

—ಜಜಿಎಂ

## 152

| ಕೆ. ಎ. ೩೮೭ | ಭದ್ರಗಿರಿ ಮಾಹಾತ್ಮ್ಯ | ಗದ್ಯ |
|---|---|---|
| ೧೩.೨" × ೮.೫" | ಕಳಲೆ ನಂಜರಾಜ | ಸು. ೧೭೪೦ |
| ೧-೧೭೦ ಪುಟ | ೨೩ ಪಂಕ್ತಿ | ೧೫ ಅಕ್ಷರ |

**ಆದಿ :** ಶ್ರೀ ಕಳಲೆ ನಂಜರಾಜ ಕವಿ ಕೃತ ಭದ್ರಗಿರಿ ಮಾಹಾತ್ಮ್ಯ. ಶ್ರೀ × ×

ಶ್ರೀ ಮದ್ಭದ್ರಗಿರಿ ಮಹಾತ್ಮ್ಯೆ ಬರೆಯುವುದಕ್ಕೆ ಶುಭಮಸ್ತು. ಶ್ಲೋಕ ॥
ವಂದೇ ಹಂ ಗಿರಿಜಾಸೂನುಂ ಗಿರಿಜಾಂ ಗಿರಿಜಾಪತಿಂ
ಲಕ್ಷ್ಮೀಂ ಲಕ್ಷ್ಮೀಪತಿಂ ವಾಣೀಂ ವಾಣೀಶಂ ಚ ಗುರೂನ್ ಶ್ರಿಯೈ ॥
ಮಂಗಳವನೆಮಗೀವುದಿಂದು ತ
ರಂಗಿಣೀಧರ ವೃಷಭರಾಜ ತು
ರಂಗ ಜಿತಸಾರಂಗದಾನವ ಸರ್ವಮಂಗಳೆಯು
ತುಂಗ ಕುಚಗಳ ಕುಂಕುಮಾಂಕಿತ
ಮಂಗಳಾಂಗ ಮಹೇಶ ಪರಶು ಕು
ರಂಗ ವರದಾಭಯು ಕರಾಬ್ಜ ಸುಮೇರು ಕೋದಂಡ ॥ ೧ ॥

× × ×

ಆ ನೃಪಾಲತನಯ ಕಾಂತನರೇಂ
ಧ್ರನಾತನ ... ಹವಣಂಗನು
ದಾನ ಶೌರ್ಯ ಖ್ಯಾತ ದಳಪತಿ ಕಳಲೆ ದೊಡನೃಪಾ
ನಾನದೆಂತುಸುರೆವೆನು ಕಡ ...
... ... ... ... ತನ
ಭಾನುತೇಜವ ಪೊಗಳಲವರಾಚಾರ್ಯಗಳವಲ್ಲ ॥ ೬ ॥

× × ×

ಯಿಂತು ಹದಿನೈದು ಭಾಮಿನಿಷಟ್ಪದಿಗಳಿಂದ ಗಿರಿಜಾರಮಣನು ಗಿರಿಜೆಯಂ ಗುರುಗಳಂ ನಿಜ ವಿಮಳ ವಂಶಾವಳಿಯುಂ ರಚಿಪ ಕೃತಿನಾಮಮಂ ಪೇಳಿ ಬಳಿಕೀ ಕೃತಿಯು ... ... ಪೂರ್ವದಲ್ಲಿ ಸರ್ವ ಸುಜನ ಮನೋಹರಮಾದ

ಅಂತ್ಯ : ಯಿಂತು ರಿಪುಕುಲತಿಮಿರ ಮಿಹಿರ ತುಷಾರವರ ವಂಶವಾರ್ಧಿ ನೃಪಾಲ ಮಣಿ ಕೌಸ್ತುಭ ಕಳಲೆ ತಿಮ್ಮನರೇಂದ್ರನಂದನ ... ... ನೃಪಾಲ ತನಯ ಕೋವಿದ ದೊಡಬಲಪತಿಸುತ ಸುಜನ ನುತ ವೀರರಾಜತನೂಜ ಗಿರಿಜಾ ರಮಣ ಚರಣಾರವಿಂದ ನಿರಂತಧ್ಯಾನ ನಿರ್ಧೂತಾಶೇಷ ಕಲುಷ ಗೀರ್ವಾಣ ಕರ್ಣಾಟಕೋಭಯ ಸಾಹಿತಿ ರಚಿತ ಬುಧಜನ ಮನೋರಂಜನ ನಂಜ ರಾಜನಂ ಬ್ರಹ್ಮಾಂಡ ಪುರಾಣೋಕ್ತ ಭದ್ರಾದ್ರಿ ಮಹಿಮೆಯುಂ ಕರ್ಣಾಟ ಕೋಕ್ತಿಯಿಂದಖಿಲರರಿವಂತೆ ಪೇಳ್ದ ನಂಜರಾಜ ವಚೋವಿಲಾಸಮೆಂಬೀ ಟೀಕು ಸಮಾಪ್ತಮಾದುದು.

ವಿಷಯ : ಭದ್ರಾಚಲ ಮಹಿಮೆ.

ವಿಶೇಷ : ಇದನ್ನು ೧೯೪೮ರಲ್ಲಿ ಪ್ರತಿ ಮಾಡಲಾಗಿದೆ.

—ಬಿಎಸ್‌ಎಸ್

## 153

| ಕ, ಎ. ೪೩೪ | ಭರತಶಾಸ್ತ್ರ | ಶ್ಲೋಕ, ಟೀಕು |
|---|---|---|
| ೯" × ೧೦.೪" | ? | ? |
| ೧_೧೮ ಪುಟ | ೨೦ ಪಂಕ್ತಿ | ೨೦ ಅಕ್ಷರ |

ಆದಿ : ಶ್ರೀಗುರು ಮಲ್ಲಿಕಾರ್ಜುನನೇ ಗತಿ ಮತಿ ॥
ನಾದ ಬಿಂದು ಕಲಾತೀತಂ ಶಿವಭಕ್ತಿ···ಆಧಾರಂ
ನದಬಿಂದುಶ್ವಯೇತೇ ಗಾನ ಸುಲಕ್ಷಣಂ ॥
ಟೀ॥ ನಾದವಿದ್ಯತೆ ನಾದಬಿಂದುಗಳಾದ [ಸ] ಕಟ್ಟಳೆಯುನಜುಯಬೇಕು.
ಶಿವಶಕ್ತಿಯೆಂಬೆರಡೀಗವೆ ಆಧಾರವೆಂದು ಹೇಳಲು ಪಟ್ಟುದು ॥ ೨೩ ॥
ನಾದಪಂಚಕ ಮೇವಾಪಿ ಬಿಂದುಪಂಚಕದಂಚವೇತ
ಆಕಾರಂ ನಾದತೋ ಬ್ರಹ್ಮಂ ಊಕರು ಬಿಂದುರುಚ್ಯತೆ ॥
ಟೀ॥ ಇನ್ನು ನಾದಬಿಂದುಗಳೆಂಬಿವೆರಡು ಶಬ್ದವು ಹತ್ತು ಕಟ್ಟಳೆಯ ಕೂಡಿ
ಕೊಂಡಿಹುದು. ಅದಕೆ ನಾದವೆಂಬದು ಕಟ್ಟಳೆಯ ಹೇಳುತಯಿದ್ದನು ॥೨೪॥

ಅಂತ್ಯ : ಆ ಬಂಗ ತಾಳದ ಕಳಸ ॥ ಜೆಕತದಿ। ಜೆಕತದಿದಿ। ಕುಕುತರಿತಾ। ಕಿಣ್ಣಕ
ಜೆಕ್ಕಿಟ·· ಜೆಕತರಿತಾ। ದಿಂದಿಗಿಣಂ। ದಿಗಿಜೆಕತರಿ ತಕ್ಕಿಟ। ತೊಂಗಿಟ
ತೊಕ್ಕಿಟ। ದದುಗಿಣತೊ॥ ಮುದ್ರಿಕೆ ತಳದ ಕಳಸ ॥ ಜೆಂತಕ ಜೆಕ್ಕಿಟ।
ಜೆಕತರಿ। ತಕ್ಕಿಟ। ಕುದು। ದಃಕದುದಃ। ಜೆಕತರಿತಾ। ತಕ್ಕುದಿಕ್ಕುತಾ।
ದಿಕ್ಕು ತಕ್ಕುತಾ। ದಿಕ್ಕಿಟ ತಕಿಟ। ದಿತಕಿಟತಾ। ತಕ್ಕಿಟ ಜೇಕಿಟ। ತಕಕಿಟ
ಜೆಕ್ಕಿಟ ತತತೊಂ। ದದುಗಿಣತೊಂ ॥ ಶ್ರೀ

ವಿಷಯ : ನಾಟ್ಯ ಲಕ್ಷಣ.

ವಿಶೇಷ : ಅಕ್ಷರಗಳು ಸ್ಫುಟವಾಗಿವೆ, ಸುಂದರವಾಗಿವೆ. ಅಸಮಗ್ರ ಪ್ರತಿ.

—ವೈಸಬಿ

## 154

| ಕೆ. ೧೨೩೩ | ಭರತೇಶವೈಭವ | ಸಾಂಗತ್ಯ |
|---|---|---|
| ೧೮.೮" × ೧.೭ | ರತ್ನಾಕರವರ್ಣಿ | ೧೫೫೭ |
| ೭೧–೩೮೪ ಪತ್ರ | ೮ ಪಂಕ್ತಿ | ೭೫ ಅಕ್ಷರ |

ಆದಿ : ಶ್ರೀಆದಿಪರಂಪರ ಅರಹಂತೇಭ್ಯೋ ನಮಃ
ಕಣ್ಮುಚ್ಚಿ ನೋಡಿದರಾತ್ಮಸುಖವ ಕಜಿ
ಗಣ್ಮಿಸುವಾನಂದಜುಪ
ತಣ್ಮಲೆದುತ್ತಮು ಮತಿದೋಜು ಸುಕೃತಾತ್ಮ
ರಾಣ್ಮ ನಿರಂಜನಸಿದ್ಧ ॥ ೧ ॥

ಅಂತ್ಯ : ದೇಶದೊಳಗೆ ಕೀರ್ತಿಯಹುದು ದುರ್ಲೋಹದ
ಪಾಶ ಹರಿವುದು ಕೇಳಿದರೆ
ಯಿಾ ಸಂಸಾರಸಮುದ್ರ ಬತ್ತುವುದೆಂದು
ಸಾಸಿರ ಸೂಳೊದರಿದನು ॥ ೩ ॥

ಶಕನೃಪ ಕಾಲಾಂತರ ಶಕವರ್ಷ ೧೬೭೧ಸಂದ ಶುಕ್ಲಸಂವತ್ಸರದ ಶ್ರಾವಣ ಶು ೭ ಯು ಚಂದ್ರವಾರ ಮಳಲಿ ಪಂಚಪರಮೇಷ್ಠಿಗಳ ಸ್ಮರಣೆಯಿಂದ ಮಗ್ಗೆ ದೊಡ್ಡಯ್ಯಶೆಟ್ಟರ ಮಗ ಪಾಯಂಣನು ಮಳಲಿ ನಾಗಪ್ಪೈಯನವರ ಮಗ ಪದುಮೈಯ್ಯನವರಿಗೆ ಬರೆದುಕೊಟ್ಟ ಭರತೇಶಚರಿತೆಗೆ ಮಂಗಳ ಮಹಾ ಶ್ರೀಶ್ರೀ

ವಿಷಯ : ಭರತನ ಚರಿತ್ರೆ.

ವಿಶೇಷ : ಅಸಮಗ್ರ. ೧–೧೫ ಸಂಧಿಗಳಿಲ್ಲ. ಉಳಿದ ಕೃತಿ ಪೂರ್ಣ ಇದೆ. ಶಕಟರೇಫದ ಬಳಕೆಯಿದೆ.

—ಜಿಜಿಎಂ

## 155

| ಕೆ. ೧೬೪೨/೪ | ಭರತೇಶ ವೈಭವ (ದಿವ್ಯಧ್ವನಿ ಸಂಧಿ) | ಸಾಂಗತ್ಯ |
|---|---|---|
| ೧೫"×೧.೫" | ರತ್ನಾಕರವರ್ಣಿ | ೧೫೫೭ |
| ೨೧ ಪತ್ರ | ೫ ಪಂಕ್ತಿ | ೭೦ ಅಕ್ಷರ |

ಆದಿ : ಶ್ರೀಮದಾದಿಬ್ರಹ್ಮಣೆ ನಮಃ ದಿವ್ಯಧ್ವನಿ ಸಂಧಿ
ಬಯಲ ಪುರುಷ ಬಯಲಾಕಾರ ಬಕ್ಕಟ
ಬಯಲರುಪನೆ ಬಯಲಾಂಗಾ
ಬಯಲಾಧಾರನೆ ಮತಿದೋರು ನಿಚ್ಚ ನಿ
ರ್ವಯಲ ನಿರಂಜನಸಿದ್ಧಾ ॥ ೧ ॥

ಅಂತ್ಯ : ತಿರುಗಿ ತನ್ನಾತ್ಮನ ತಾನೋಡಲದಕ್ಕೆ ಸಂ
ವರೆಯೆಂಬ ತತ್ವಾಭಿಧಾನ ॥ ೬೩ ॥
ಮೋನದಿ ಜಿಂಹೆಯಾಟವ ಕಟ್ಟಿ ಮೈಯಾಟ
ವೇನಿಲ್ಲವೆನಿಸಿ ಕಣ್ಮುಚ್ಚಿ
ಮಾನಸವನು ಹಂಸನೊಳಗಡಗಿಸುವುದು ..

ವಿಷಯ : ಭರತೇಶ್ವರನ ಚರಿತೆ.

ವಿಶೇಷ : ಅಸಮಗ್ರ. ಕೇವಲ ಕೆಲವು ಪತ್ರಗಳಿವೆ. ಅಕ್ಷರ ಸ್ಪಷ್ಟ. ಇದರೊಡನೆ ಶ್ರೀಪಾಲಚರಿತೆ ಮೊದಲಾದ ಇತರ ೩ ಗ್ರಂಥಗಳಿವೆ.

—ಜಿಜಿಎಂ

## 156

| ಕೆ. ೧೮೪೪ | ಭರತೇಶ ವೈಭವ | ಸಾಂಗತ |
|---|---|---|
| ೧೩.೨" × ೧.೯" | ರತ್ನಾಕರವರ್ಣಿ | ೧೫೫೭ |
| ೨-೧೫೪ ಪತ್ರ | ೭ ಪಂಕ್ತಿ | ೪೮ ಅಕ್ಷರ |

ಆದಿ : ··· ವ ಕೆಡಿಸಿ ಪುಣ್ಯವಸರ್ಗಕೆ
ಪೋಪೆನೆಂಬ ವರೆಲ ಕೇಳಿ ॥ ೧೭ ॥
ನಮಾಯೆನ್ನಿ ಜಿನಂ ನಮಂ ಯೆನ್ನಿ ಸಿದ್ಧಂ
ನ್ನಮೋ ಹಂದ ನಮಾಮಿಯೆನ್ನಿ
ಹಾಗೆಂದ ಮೇಲೀ ಕಥೆಗೀ ಭೂಮಿಯೆನ್ನಿ
ಚೆನ್ನಾಗಿನ್ನು ಕೇಳಿ

ಅಂತ್ಯ : ಸಾಕು ಹೋ ಹೊತ್ತಾದುದೆಂದೆಡ ಬಲ ಜಾರಿ
ಗಾ ಕುವರರು ಮೆಯ್ಯ ಮುರಿದು
ನಾಕಲಂಘಿಸ ಕೋಲು ಕೋಲನೊಂದೆಸೆ ಜಿನ
ಗೇಕಚಿತ್ತದೊಳೆರಗಿದರು ॥ ೬೮ ॥
ಕಲಕಿತು ತಿಲಕ ಮ್ಯೆ ಬೆಮರಿತು ಮ್ಯೆಗಿವ
ಮಳಲು ಪತ್ತಿದುದಲ್ಲಿಗಲ್ಲಿ
ಕಳೆಯೇರಿದ ಮೊಗದಿಂ···

ವಿಷಯ : ಚಕ್ರವರ್ತಿ ಭರತೇಶ್ವರನ ಕಥೆ.

ವಿಶೇಷ : ೧ ನೆಯ ಪತ್ರವಿಲ್ಲ. ಅಸಮಗ್ರ.

—ವೈಸಿಬಿ

## 157

| ಕೆ. ಬಿ. ೫೩೨/೯ | ಭರತೇಶವೈಭವ | ಸಾಂಗತ್ಯ |
|---|---|---|
| ೭.೯"×೫.೭" | ರತ್ನಾಕರವರ್ಣಿ | ೧೫೫೭ |
| ೧೬೨-೧೭೪ ಪತ್ರ | ೨೫ ಪಂಕ್ತಿ | ೧೬ ಅಕ್ಷರ |

ಆದಿ : ಭರತೇಶ್ವರನ ಚರಿತೆಯ ನಾಂದಿ ಅಂತ್ಯದ ಸ್ತುತಿಯ ಬರೆಯುವದಕ್ಕೆ
ನಿರ್ವಿಘ್ನಮಸ್ತು ॥ ಶ್ರೀ ॥
ಪರಮ ಪರಂಜ್ಯೋತಿ ಕೋಟಿ ಚಂದ್ರಾದಿತ್ಯ
ಕಿರಣ ಸುಜ್ಞಾನ ಪ್ರಕಾಶಾ
ಸುರರ ಮಕುಟಮಣಿ ರಂಜಿತ ಚರಣಾಬ್ಜ
ಶರಣಾಗು ಪ್ರಥಮ ಜಿನೇಶ ॥ ೧ ॥

ಅಂತ್ಯ : ಆನಂದ ನಾವ್ಯವ…ದಕ್ಷ ಬ್ರಹ್ಮಾ
ನಂದ ಸಿದ್ಧ ಸಮೃದ್ಧಾ
ಧ್ಯಾನೈಕ ಸನ್ಮತಿ ದೋರುಹಿದಕ್ಷ ಸಂ
ದಾನ ನಿರಂಜನ ಸಿದ್ಧಾ ॥ ೧೬೩ ॥
ವೃಷಭ ಮಾಸದಿ ತೊಡಗಿತು ಕುಂಭ ಮಾ
…ತ್ಪತಿಯಾದಿ ಪೂರ್ಣ್ಣವಾಯ್ತು
ವೃಷಭಾಂಗ ಹಂಸ ಸಾಧನೆ ಜಯು ಪರಮ ಪೌ
ರುಷನೆ ಚಿದಂಬರ ಪುರುಷಾ ॥ ೧೬೪ ॥ ಶ್ರೀ

ವಿಷಯ : ಆದಿಚಕ್ರವರ್ತಿಯಾದ ಭರತೇಶ್ವರ ಚರಿತ್ರೆ.

ವಿಶೇಷ : ಅಸಮಗ್ರ ; ಭರತೇಶವೈಭವ ಕಾವ್ಯದಲ್ಲಿ ಆರಿಸಿರುವ ನಾಂದಿ ಮತ್ತು ಅಂತ್ಯದ ಸ್ತುತಿಪದ್ಯಗಳು ಮಾತ್ರವಿವೆ. ಶಕಟರೇಫವಿದೆ. ಇದೇ ಪುಸ್ತಕದಲ್ಲಿ ಜೈನ ಕ್ರಿಯಾಸಾರ, ಹಾಡು (ಜೈನ) ಮೊದಲಾಗಿ ಒಟ್ಟು ೧೪ ಕೃತಿಗಳಿವೆ.

—ಕೆಆರ್‌ಎಸ್

## 158

| ಕೆ. ೧೨೦೪/೨ | ಭರಿತಬೋನದ ವಚನ | ವಚನ |
|---|---|---|
| ೧೦.೩ × ″೧,೨″ | ಮಹಾಲಿಂಗ | ೧೬೩೦ |
| ೧೬ನೆ ಪತ್ರ | ೬ ಪಂಕ್ತಿ | ೬೪ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಭರಿತಬೋನವೆಂದು ವೊಂದು ವೇಳೆ ಚಾಚಿಸಿಕೊಂಡು ಲಿಂಗಕ್ಕೆ ಕೊಟ್ಟೆವು ! ಲಿಂಗ ಪ್ರಸಾದವಾಯಿತೆಂದು…… ಮತ್ತೊಂದು ಪದಾರ್ಥ ಬಂದರೆ ಲಿಂಗದ ಬಿಡಲಮ್ಮರಯ್ಯ ॥

ಅಂತ್ಯ : ಸರ್ವಂಚ ತೃಣಕಾಷ್ಟಂಚ । ಯಿಾ ಅನಂಗ ಸಂಗಿಗಳ ಮುಖವತ ಪ್ರಸಾದಂಚ । ಅನ್ಯ ಗೋಮಾಂಸ ವಿಟ್ಸಮಂ ॥

ವಿಷಯ : ಭರಿತ ಬೋನದ ವಿಚಾರ.

ವಿಶೇಷ : ಅಸಮಗ್ರ. ಇದೇ ಕಟ್ಟಿನಲ್ಲಿ ಪಂಚರತ್ನ, ಮಾರ್ಕಂಡೇಯ ಸ್ತೋತ್ರ, ಷಡುವ್ರತದ ಒಂದೊಂದು ಪತ್ರಗಳಿವೆ. ಇದಲ್ಲದೆ ೨೪ ವಿವಿಧ ಕೃತಿಗಳಿವೆ.

—ವೈಸಿಬಿ

## 159

| ಕೆ.ಬಿ. ೫೩.೨/೧೩ | ಭವ್ಯಾಮೃತ | ಕಂದ |
|---|---|---|
| ೭.೯" × ೫.೯" | ? | ? |
| ೨೫೭_೨೬೫ ಪತ್ರ | ೨೦ ಪಂಕ್ತಿ | ೨೦ ಅಕ್ಷರ |

**ಆದಿ :** ಭವ್ಯಾಮೃತ ಬರೆಯುದಕ್ಕೆ ನಿರ್ವಿಘ್ನಮಸ್ತು ॥
ಶ್ರೀಮದ್ಗುರುಯೋಗಿವಂದ್ಯಂ
ಕಾಮಾಂತಕಕಾಲ ವಿಜಯಗುಣಗಣ ನಿಳಯಂ
ಸ್ವಾಮಿ ಪರಮಾತ್ಮದೇವನ
ಪ್ರೇಮದೊಳೊಂದಿ ಪೆಸರಾಗಿಯಾದಷ್ಟು ದಿನಂ ॥ ೧ ॥

**ಅಂತ್ಯ :** ಭವ್ಯಾಂಮೃತವನಾಸಂನ
ಭವ್ಯಂಗಮೃತೋಪಮುಂಮಿದಂ ತಾನಾ
ಭವ್ಯಂಗೆ ಕಾಳಕೂಟಂ
ನವ್ಯಜಿನೇಶ್ವರನ ವಚನ ನಂಬಿರೆ ಮೋಕ್ಷಂ ॥ ೧೧೧ ॥
ಯಿಂತೀ ಭವ್ಯಾಮೃತಕ್ಕೆ ಮಂಗಳ ಮಹಾಶ್ರೀ

**ವಿಷಯ :** ಜೈನತತ್ತ್ವ.

**ವಿಶೇಷ :** ಸಮಗ್ರ. ಶಕಟರೇಫವಿದೆ. ದಪ್ಪ ಕಾಗದ. ಇದೇ ಪುಸ್ತಕದಲ್ಲಿ ಜೈನಕ್ರಿಯಾಸಾರ, ದೇವರಾಜಾಷ್ಟಕ, ಹಾಡುಗಳು ಮೊದಲಾಗಿ ಒಟ್ಟು ೧೪ ಕೃತಿಗಳಿವೆ.

—ಕೆಆರ್‌ಎಸ್

## 160

| ಕೆ. ೮೨೮/೧ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೧೮.೫"×೧.೬" | ಆತ್ಮಾರಾಮ | ? |
| ೧-೨೧೧ ಪತ್ರ | ೧೧ ಪಂಕ್ತಿ | ೧೦೮ ಅಕ್ಷರ |

**ಆದಿ :** ಶ್ರೀ ಗಣೇಶಾರದಾ ಗುರುಭ್ಯೋ ನಮಃ ॥ ಶ್ರೀ ಲಕ್ಷ್ಮೀವೆಂಕಟೇಶ್ವರಾಯ ನಮಃ। ಶ್ರೀಕ್ಷೇತ್ರಪಾಶಾಕಾಂಬಯರ್ಾಯ ನಮಃ ॥ ಶ್ರೀ ಶಂಕರಾಚಾರ್ಯಾಯ ನಮಃ ॥ ಭಾಗವತದ ದಶಮಸ್ಕಂಧ ॥

ಪಲ್ಲವಾ ॥ ಅವನಿದುಷ್ಟಕ್ಷತ್ರ ಕುಲಭಾ
ರವನು ಸೈರಿಸಲರಿಯದಬುಜೋ
ದ್ಭವಗೆ ಬಿಂನೈಸಿದಳು ಒಲಿದುದು ಮೇಲೆ ಸುರಕಾಯ್ಯಾ ॥
ಪದನು ॥ ಹೇಳಿದಿರಿ ನೀವೆಸಗೆ ನಾನಿದ
ಕೇಳಿದೆನಲಾ ಸೋಮಸೂರ್ಯರ

ಪೀಳಿಗೆಯ ಭೂಪೋತ್ತಮರ ಪಾವನಚರಿತ್ರವನೂ
ಹೇಳಬಹುದು ತನಗೆಯದು ಭೂ
ಪಾಲರಂನ್ವಯದೊಳಗೆ ಲಕ್ಷ್ಮೀ
ಲೋಲನವತರಿಸಿದ ಕಥೆಯನಿದನೆಂದನಾ ಭೂಪಾ ॥ ೧ ॥

**ಅಂತ್ಯ :** ಯಿದನಖಿಳಯೋಗೀಂದ್ರ ಪದಯುಗ
ಪದುದಮುಚರಿತ ಧ್ಯಾನ ನಿರ್ಮಳ
ಹೃದಯನಹ ಯೋಗೀಂದ್ರನಖಿಳೋದಿತ ಸದಾನಂದಾ
ಮುದದಲಭಿವರ್ಸಿಸಿದ ನಲ್ಲಿವಂ
ದದಲಿ ಗುಣದೋಷವನು ಕೋ
ವಿದರು ತಿದ್ದುವುದೀ ಕೃತಿಯ ವಿಸ್ಮಿತ ಪದಾಕೃತಿಯಾ ॥ ೩೩ ॥

ವೋಕ್ಕುವಿನ ಗುಣದೋಷ
ಲೇಖನ ಕರ್ತುಂವಿಗೆತ್ಮಣದು
ವಚನನ ನಿಯಂತ್ರು ನಿತ್ಯಾತುಮುನು
ರಕ್ಷಿಸು ಗಳಿಳಗಳ ಸಜ್ಜನರಾ ॥ ೩೪ ॥

ಅಂತು ಸಂಧಿ ೧೦೫ಕ್ಕಂ ಪದನು ೫೩೪೪ಕ್ಕಂ ಮಂಗಳ ಮಹಾಶ್ರೀ ಯಿತಿ ಶ್ರೀಮದ್ಭಗವತ ಮಹಾಪುರಾಣದಲ್ಲಿ ಕರ್ನಾಟಕ ಶಬ್ದಾಲಂಕಾರಮಾದ ಆತ್ಮಾರಾಮ ವಿರಚಿತಮಪ್ಪ ಭಾಮಿನಿಷಟ್ಪದಿ ನಿಕಾಯಮಾದ ಕಂನಡ ಭಾಗವತದಲ್ಲಿ ದಶಮಸ್ಕಂದ ಸಂಪೂರ್ನಂ ॥

**ವಿಷಯ :** ಜಗತ್ಸೃಷ್ಟಿ, ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

**ವಿಶೇಷ :** ಸ್ಫುಟಾಕ್ಷರ. ಪ್ರತಿ ಉತ್ತಮ ಸ್ಥಿತಿಯಲ್ಲಿದೆ. ಇದೇ ಕಟ್ಟಿನಲ್ಲಿ ಭಾರತ ಎಂಬ ಮತ್ತೊಂದು ಗ್ರಂಥವಿದೆ.

—ವೈಸಿಬಿ

## 161

ಕೆ. ೧೩೪೭ | ಭಾಗವತ | ಭಾಮಿನೀ ಷಟ್ಪದಿ

೧೫.೭"×೧.೮" | ಆತ್ಮಾರಾಮ | ?

೧-೨೬೫ ಪತ್ರ | ೧೨ ಪಂಕ್ತಿ | ೭೨ ಅಕ್ಷರ

**ಆದಿ :** ಶ್ರೀ ಗಣಾದಿಪತಯೇ ನಮಃ ॥ ಶ್ರೀ ಶಾರದಾ ಗುರುಭ್ಯೋ ನಮಃ ॥ ಶ್ರೀ ಶಕುನಿ ವೆಂಕಟೇಶಾಯ ನಮಃ ॥......

ಪಲ್ಲಾ ॥ ಶ್ರೀವರನು ಶಾಶ್ವತನಖಿಳವೇ
ದಾವಳೀ ಸಂಸ್ತುತ್ಯನಮಿತ ಗು

ಣಾವಲಂಬನನಂಬುಜೋದ್ಭವ ಮುಖ್ಯ ಸುರವಂದ್ಯಾ ॥
ದೇವ ದೇವನಶೇಷ ಧರಣೀ
ಗೋವಿಜ ರಕ್ಷಣಾರ್ಥ ಕೃ
ಶಾವಕಾರನು ಮಾಳ್ಪೆ ಯೋಗಕ್ಷೇಮವನು ನಮಗೇ ॥ ೧ ॥

ಅಂತ್ಯ : ವಾರಿಜಪ್ರಿಯ ಸುತನ ತಂಗಿಯು
ಪಾರ ಮಡುವಿಲಿ ಬಿದ್ದ ಖಳನನು
ಮಿಾರಿ ನುಂಗಿದ ಹರಿಯು ಹೆಸರಿನ ಭೂಪನಾತ್ಮಜನಾ
ಸೇರಿ ಸಮಗದ್ದುಗೆಯುಲಿದ್ದನ
ಧಾರುಣೀಪತಿಯಂದು ತಿಳುವಿದ
ಶ್ರೀರಮಣ ಸರಿಗೂಡಿ ಸಲವೀ ಕೃತಿಯ ಕೇಳ್ದವನಾ ॥ ೪ ॥
ಶ್ರೀ ಕೃಷ್ಣಾರ್ಪಣಮಸ್ತು. ಈ ಪುಸ್ತಕವ ಬರದಾತ ಜಾನೂರ ದೇವಯ್ಯ
ನವರ ಮೊಮ್ಮಗ ಬಿದಿರೆ ದೇವಣ್ಣನು ಬರದ ಪುಸ್ತಕಕ್ಕೆ ಆ ಚಂದ್ರಾರ್ಕಮಸ್ತು

ವಿಷಯ : ಜಗತ್ಸೃಷ್ಟಿ, ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಸಮಗ್ರ. ಮೊದಲ ೧೭ ಪತ್ರಗಳ ತುದಿ ಮುರಿದಿದೆ.

—ವೈಸಿಬಿ

162

| ಕೆ. ೮೪೯ | ಭಾಗವತ | ಭಾಮಿನೀಷಟ್ಪದಿ |
|---|---|---|
| ೧೦.೩″ × ೧.೬″ | ಚಾಟುವಿಠಲನಾಥ | ಸು. ೧೫೩೦ |
| ೧-೫೦ ಪತ್ರ | ೧೦ ಪಂಕ್ತಿ | ೫೬ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ ॥ ಯೇಕಾದಶ ಸ್ಕಂಧವ ಬರವದಕ್ಕೆ ಮಂಗಳ
ಮಹಾಶ್ರೀ.
ಮೇದಿನಿಯಭಾರತನು ತಿದ್ದಲು
ವೇದ ವಂದಿತ ಕೃಷ್ಣ ಬಳಿಕಾ
ಯಾದವರಿಗೆ ಮುನೀಶ್ವರರ ಶಾಪವನು ಮಾಡಿಸಿದಾ ॥
ಪದನೂ ॥ ಶ್ರೀಲಕ್ಷ್ಮೀಯರಸನೇ ಕಮಲಜ
ಶೂಲಿವಂದಿತ ಚರಣ ಭಕ್ತಜ
ನಾಳಿ ಹೃದಯನಿವಾಸ ಮುನಿಜನ ವಂದ್ಯ ಶುಭಚರಿತ್ರಾ
ಕಾಲ ಕರ್ಮಾದಿ ದೂರನಿಗಮಾ
ಜಾಲ ಲಾಲಿತ ಮಹಿಮ ವೇಣುಲಿ

ಲೋಲನೆನಿಸುವ ಗೋಪಿನಾಥನು ಸಲಹುಗೆಂಮುವನೂ ॥ ೧ ॥

**ಅಂತ್ಯ :** ಸಿಕ್ಕಿ ಕಳೆಯಿತು ಹರಿಣ ಬೇಡನ
ಹೆಕಳದ ಗಂಟೆಯು ನಿನಾದದ
ಕಕ್ಕುಜಿಂದದ ಕಂಡು ತಿಳಿಉದುಯಿತರ ವಿಷಯುಗಳಾ ॥
ಸೊಕ್ಕಿನಾಳಪಗಳ ಕೇಳ್ದರೆ
ಕಕ್ಕುಲಿತೆಯಿಂ ಯೋಗಿ ಕೆಡುವನು
ನಿಪಜದಿಂ ದೊರವನೆಲ್ಲವನರಸ ಕೇಳೆಂದಾ ॥ ೨೮ ॥
ಕುಣಿವ ವಾದ್ಯದ ಸುಗೀತಗಳರಂ
ತಣಿಯಂ ನಾಲಿಯುರಂದ್ದು ವಮಾಡಲು
ಜುಣಿಗಿ ಪೂಗದೆ ಸವಿಸಲು

**ವಿಷಯು :** ಶ್ರೀ ಕೃಷ್ಣನ ಮಹಿಮೆ.

**ವಿಶೇಷ :** ಪತ್ರಗಳಿಗೆ ಅಲ್ಲಲ್ಲಿ ಹುಳು ಹೊಡೆದು ರಂಧ್ರಗಳಾಗಿವೆ, ಶಕಟರೇಫದ ಪ್ರಯೋಗವಿದೆ. ೧೧ನೆಯ ಸ್ಕಂಧದಲ್ಲಿ ೧ರಿಂದ ೧೩ನೆಯ ಸಂಧಿ ಹಾಗೂ ೧೪ನೆಯ ಸಂಧಿಯಲ್ಲಿ ೨೮ ಪದ್ಯಗಳವರೆಗೆ ಮಾತ್ರ ಇದೆ. ಬರವಣಿಗೆ ಮುದ್ದಾಗಿದೆ.

—ಕೆಆರ್‌ಎಸ್

## 163

| ಕೆ. ೯೨೨ | **ಭಾಗವತ** | ಭಾಮಿನೀಷಟ್ಪದಿ |
|---|---|---|
| ೧೪.೬"×೧.೪" | ಚಾಟುವಿಠಲನಾಥ | ಸು. ೧೫೩೦ |
| ೧-೨೦೯+೧-೧೮೪ ಪತ್ರ | ೫ ಪಂಕ್ತಿ | ೪೪ ಅಕ್ಷರ |

**ಆದಿ :** ಶುಭಮಸ್ತು ॥ × × ಭಾಗವತದ ಪುಸ್ತಕಾ ॥ ಷಷ್ಟಮಸ್ಕಂಧಾ.
ಹೇಳಿದನು ಮುನಿನಾಥ......
ಮೌಳಿಮಣಿಗೆ ಮಹಾಘನಿಕರೊಂ
ನ್ಮೂಲನೈಕ ಸಮರ್ಥವಹ ಹರಿನಾಮ ನಿಷ್ಕ್ರತಿಯಕಾ ॥
ಪ···ಮುನಿಪ ಚಿತ್ತವಿಸು ಮನ್ವಂ
ತರವನಾ ಸ್ವಾಯಂಭು ವಾದ್ಯರ
ಚರಿತವನು ತತ್ಪುತ್ರ ಪೌತ್ರಾದ್ಯಖಿಳಚರಿತ...
...ಸಾಗರಗಿರಿ ನದಿವನ ಭುವನಾ
ಸ್ತರಣವನು ಕರುಣಿಸಿದೆ ಜ್ಯೋತಿಶ್ಚತ್ರ ಸಂಸ್ಥಿತಿಯಾ ॥ ೧ ॥

**ಅಂತ್ಯ :** ಪ್ರಳಯ ಜಳಧಿಯುಲಾಡಲೆಂದೇ

ತಳದು ಮತ್ಸ್ಯಕ್ರುತಿಯು ಕಾ · ನು ಶ್ರುತಿ
ಗಳನು ತಂದಿತ್ತುಬುಜ ಭಗವ · ಸುರನನು ಸಂಹರಿಸಿ
ವಲಿದು ಸತ್ಯವ್ರತಗೆ ತತ್ವವ
ತಿಳುಹ ನಿಜದಲಿ ನಿಂದ ಕರುಣಾ
ಜಲಧಿ ನಿತ್ಯಾತುಮನ ಮತ್ಸ್ಯಕ್ರುತಿಗೆ ನಮೊಯೆಂಬೆ ॥ ೫೭ ॥
ಅಂತು ಸಂಧಿ ೨೪ಕಂ ಪದನೂ ೯೮೨ಕಂ ಅಷ್ಟಮಸ್ಕಂಧ ಸಮಾಪ್ತಃ
ಮಂಗಳ ಮಹಾಶ್ರೀ ××× 
ಹೇಳಿದನು ವೈವಸ್ವತನ ವಂಶವಿ
ಶಾಲ ಚಾರಿತ್ರವನು ಭೂಪಾಲ
ಮೌಳಿಮಣಿಗೆ ಮುನಿನಾಥ ಮನವೊಲಿದು ॥ ಶ್ರೀ ॥

**ವಿಷಯ :** ಜಗತ್ಸೃಷ್ಟಿ, ಸೂರ್ಯವಂಶ ಮತ್ತು ಚಂದ್ರವಂಶದ ರಾಜರ ಕಥೆ.

**ವಿಶೇಷ :** ಆರನೆಯ ಸ್ಕಂಧದಿಂದ ಎಂಟನೆಯ ಸ್ಕಂಧದವರೆಗೆ ಮಾತ್ರ ಪೂರ್ತಿಯಾಗಿದೆ. ಎಲ್ಲಾ ಪತ್ರಗಳು ಹುಳುಗಳಿಂದ ತೂತಾಗಿದ್ದು ದುರ್ಬಲ ಸ್ಥಿತಿಯಲ್ಲಿದೆ. ೬, ೭ನೆಯ ಸ್ಕಂಧಗಳು ೧–೨೧೯ ಪತ್ರಗಳಿವೆ. ಇದರಲ್ಲಿ ೪೫, ೪೬, ೪೭ ನೆಯ ಪತ್ರಗಳಿಲ್ಲ. ೮ನೆಯ ಸ್ಕಂಧವು ೧–೧೮೪ ಪತ್ರಗಳಲ್ಲಿದೆ.

—ಕೆಆರ್ಎಸ್

## 164

| ಕೆ. ೧೨೧೩ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೧೨.೪"×೧.೯" | ಚಾಟುವಿಠಲನಾಥ | ಸು. ೧೫೩೦ |
| ೧-೧೪೩ + ೧-೧೫೨ ಪತ್ರ | ೧೦ ಪಂಕ್ತಿ | ೭೦ ಅಕ್ಷರ |

**ಆದಿ :** ............
...... ......
......ರ್ಥವನು ನಿರ್ವಿಘ್ನದಾಯಕವಾ
ಭೋಗಿ ಭೋಗ ವಿಭೂಷಣನು ಸಕ
ಲಾಗಮೈಕ ಸ್ತುತ್ಯಗುಣಗಣ
ಸಾಗರನ ಕಾರುಣ್ಯದಲ್ಲಿ ವಿಘ್ನೇಶನೊಲವಿನಲಿ ॥ ೧ ॥

**ಅಂತ್ಯ :** ಬಿಟ್ಟನಾ ರಾಜ್ಯವನು ಮಹಿಯನು
ಬಿಟ್ಟನಾ ಸತಿಯರನು ಸುತರನು
ಬಿಟ್ಟನಾ ದುರ್ಲಭವೆನಿಪ್ಪ ಸಾಮ್ರಾಜ್ಯವೈಭವವಾ
ಬಿಟ್ಟನಾ ಕರಿತುರುಗ ನಿಕರವ

ಬಿಟ್ಟನಾ ಬಾಂಧವರ ಮೋಹವ
ಬಿಟ್ಟನೊಂದೇ ನಿಮುಷದಲ್ಲಿ ವೈರಾಗ್ಯಪರನಾದಾ ॥ ೧೫ ॥
ಕನಸಲಾ ರಾಜ್ಯವಿದು ತೋಪ್ರ್ಪದು
ಮು···ಕೃತಿ ಎನುತ ಬುದ್ಧಿಯು
ಲನುಪಮನು ನಿಲಿಸಿದನು ಮನವನುಯ್ಯೊನಿಷ್ಠೆಯಲಿ
ನೆನಸೆನಿಪ್ಪಚ್ಚುತನ ಪದಯುಗ
ವನಜ ಸಾರಸುಧಾರಸಾಸ್ವಾ
ದನ ಪರಾಯಣ ನಾ......

ವಿಷಯ : ಜಗತ್ಸೃಷ್ಟಿ. ಸೂರ್ಯವಂಶ ಮತ್ತು ಚಂದ್ರವಂಶದ ರಾಜರ ಕಥೆ

ವಿಶೇಷ : ಅಸಮಗ್ರ. ಶಕಟರೇಫವಿದೆ. ಬರಹ ಚೆನ್ನಾಗಿದೆ. ಈ ಕಟ್ಟಿನಲ್ಲಿ ಮೊದಲ ೧೪೩ ಪತ್ರಗಳು ಭಾಗವತದ ಆದಿಯ ಭಾಗದಿಂದ ಆರಂಭವಾಗುತ್ತದೆ, ಎರಡನೆಯ ೧–೧೫೨ನೆಯ ಪತ್ರಗಳು ಸಪ್ತಮಸ್ಕಂಧದಿಂದ ಆರಂಭವಾಗುತ್ತದೆ. [ಕ ಹ ಪ್ರ ವ ಸೂ ತೃತೀಯ ಸಂಪುಟ ಪುಟ, ೧೨೮–೧೩೯ ಕ್ರಮಾಂಕ 1136–1148 ನೋಡಿ]

—ಕೆಆರ್‌ಎಸ್

## 165

| | | |
|---|---|---|
| ಕ. ೧೨೪೬ | ಭಾಗವತ – | ಭಾಮಿನೀ ಷಟ್ಪದಿ |
| ೨೧.೫"×೨.೧" | ಚಾಟುವಿಠಲನಾಥ | ಸು. ೧೫೩೦ |
| ೬-೪೫೦ ಪತ್ರ | ೧೧ ಪಂಕ್ತಿ | ೬೫ ಅಕ್ಷರ |

ಆದಿ : ಉರಿದುದುರಿ ಬಳಲಿತು ಬಳಲಿಕೆ
ಮರಣಭಯ ಮೃತವಾಯ್ತುಮೋಘದ
ಗುರುತನೂಜನ ಬಾಣವದು ನಿರ್ವಾಣ ಗಂಡುದಲ್ಯೆ
ಹರಿವ ರಾಯಣರಧಿಕ ಬಲರೆಂ
ದಿರದೆ ಸಾರುವ ಧರೆಗೆ ತನ್ನಯ
ಬಿರುದಿನ ಸಂಭದವೊಲಿರದೋವಿದನು ಬಾಲಕನ ॥ ೫೧ ॥

ಅಂತ್ಯ : ಯೆನುತೆನುತ ತತ್ಕೀರ್ತಿ ಗುಣವನು
ನೆನೆದು ವಿಸ್ತರಿಸುತ್ತ ನಾಮವ
ನನವರತ ಕೀರ್ತಿಸುತ ಕೇಳುತ ತತ್ಕಥಾಮೃತವಾ
ವಿನುತ ವೈಷ್ಣವ ಸಂಗಸುಖದಲಿ
ದಿನವ ಕಳಿಉ × ಷ್ಟಪದಯುಗ

ವನಜ ವಿಶ್ರಾಂತಾತ್ಮನಿದ್ದನು ಬಹಳ ಭೋಗದಲಿ ॥ ೨೭ ॥
ಸಕಲವನು ತಂನ್ನೊಳಗೆ ····

ವಿಷಯ : ಜಗತ್ಸೃಷ್ಟಿ. ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಅಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

166

ಕ. ೧೩೧೧ ಭಾಗವತ ಭಾಮಿನೀ ಷಟ್ಪದಿ
೧೭.೫"×೧.೩" ಚಾಟುವಿಠಲನಾಥ ಸು. ೧೫೩೦
೧-೩೫೦ ಪತ್ರ ೭ ಪಂಕ್ತಿ ೭೦ ಅಕ್ಷರ

ಆದಿ : ಭಾಗವತವೂ ಪ್ರಥಮ ಸ್ಕಂಧವೂ ॥ ಶ್ರೀ ಸುಬ್ರಹ್ಮಣ್ಯ ಗುರುವೇ ನಮಃ ॥
ಶ್ರೀಗಣಾಧೀಶ್ವರನು ಸನ್ನುತ
ಯೋಗ ಭೋಗ ಫಲಪ್ರದಾಯಕ
ನೀಗೆಮಗೆಯಿಷ್ಟಾರ್ಥವನು ನಿರ್ವಿಘ್ನದಾಯಕವ
ಭೋಗಿ ಭೋಗ ವಿಭೂಷಣನು ಸಕ
ಲಾಗಮೈಕಸ್ತುತ್ಯಗುಣಗಣ
ಸಾಗರನು ಕಾರಂಣ್ಯದಿ ವಿಘ್ನೇಶನೊಲವಿನಲಿ ॥

ಅಂತ್ಯ : ವರ್ನಿಶಿಸಿದೆನಿದರೊಳಗೆ ವೈಷ್ಣವ
ರುನ್ನತಾತಂಳ ಪುಣ್ಯಚರಿತ ಮ
ಹಾರ್ಣವದಲೊಂದೇಕ ದೇಶಸ್ಮಾಯಿ ಗುಣಗಣವ
ವರ್ಣಧರ್ಮವನಚ್ಯುತಾರ್ಪಣ
ಧನ್ಯತೆಯನಾಖ್ಯಾನಥನಾ
ವರ್ನನದಲ್ಲೆಯ್ದುವರು ನಿತ್ಯಾತುಮನ ನಿಜಪದವ ॥ ೬೧ ॥
ಅಂತೂ ಸಂಧಿ ೧೪ಕ್ಕಂ ಪದನು ೭೦೬ಕ್ಕಂ ಮಂಗಳ ಮಹಾ ಶ್ರೀ ಶ್ರೀ ಸಪ್ತಮ
ಸ್ಕಂಧ ಸಂಪೂರ್ಣವಾಯಿತು × × ಕೃಷ್ಣಾರ್ಪಣಮಸ್ತು

ವಿಷಯ : ಜಗತ್ಸೃಷ್ಟಿ, ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಅಸಮಗ್ರ. ಭಾಗವತ ಏಳನೆಯ ಸ್ಕಂಧದವರೆಗಿದೆ.

—ಜಿಜಿಎಂ

## 167

| | | |
|---|---|---|
| ಕೆ. ೧೩೩೩ | ಭಾಗವತ (೫ ಸ್ಕಂಧ) | ಭಾಮಿನೀ ಷಟ್ಪದಿ |
| ೧೧"×೨.೨" | ಚಾಟುವಿಠಲನಾಥ | ಸು. ೧೫೩೦ |
| ೪–೯೧ ಪತ್ರ | ೧೧ ಪಂಕ್ತಿ | ೪೮ ಅಕ್ಷರ |

**ಆದಿ :** ......ನಿಜಾಂಘ್ರಿ ಛಾಯೆ ಗವುರೀ ಪತಿ ಸುಂ······
ರ್ಥನಂ ವದನಾ ॥ ೫ ॥......ಮ ಶ್ರೀ ರಾಮನಾದ । × × × ×
ರದ ವಿರಮ ತತ್ವಾಮೃತ ರಸಾಯನವಾ ॥

**ಅಂತ್ಯ :** ಯಿಂತು ಕೋಠಿ ಚಿಂತೆಯುಲಿ ಕಾಲಿನ
ಕೊಂತವನು ಕೆಡೆಯೋದದು ನರಕದ
ತಿಂತಿಣಿಯು ದುಃಖವನು ಮೇಣೀಭವದ ಭವಣೆಗೆಯು ॥
ಚಿಂತೆಯಿಲ್ಲದೆ ಕಳದು ಸಲೆ ನಿ
ಶ್ಚಿಂತನಾಗಿಹನುಭಯಂಕರ್ಮಾ
ಭ್ರಾಂತಿಯದು ನೆರೆ ಬಿಟ್ಟು ನಿತ್ಯಾತುಮನೆ ತಾನಾಗಿ ॥ ೨೮ ॥

ಅಂತು ಸಂಧಿ ೧೪ಕ್ಕಂ ಪದನು ೬೩೩ಕ್ಕಂ ಮಂಗಳ ಮಹಾಶ್ರೀ॥ ಜಯನೂ॥ ಇತೀ ಶ್ರೀ ಮದ್ಭಾಗವತ ಪುರಾಣೇ ಸಮಸ್ತ ವೇದಶಾಸ್ತ್ರ ಪುರಾಣೇತಿಹಾಸ ಪ್ರಯುಕ್ತೆ । ದ್ವ್ಯಾಸರಾಂತೆ ಕಲಿಯುಗಾಧಿ ಪ್ರವೇಶೆ । ಕರ್ನಾಟಾಮೃತಲೀಲಾ ಶುಕ ಪ್ರಯುಕ್ತೆ ಭಕ್ತಿಜ್ಞಾನ ವೈರಾಗ್ಯ ಮೋಕ್ಷಪ್ರಧಾತೆ । ಸಕಲ ಮುನಿಗಣ ಸಂಮಾತೆ । ಸರ್ವಪಾತಕ ವಿಮುಕ್ತೆ × × × ಕರ್ನಾಟಕ ಕೃತಪಂಚಮ ವೇದೇ ಶ್ರೀ ಮದ್ಭಾಗವತೇ ಪಂಚಮ ಸ್ಕಂಧಂ ಸಂಪೂರ್ಣಂ । ಮಂಗಳ ಮಹಾ ಶ್ರೀ ॥

**ವಿಷಯ :** ಜಗತ್‌ಸೃಷ್ಟಿ, ಸೂರ್ಯವಂಶ ಮತ್ತು ಚಂದ್ರವಂಶದ ರಾಜರ ಕಥೆ.

**ವಿಶೇಷ :** ಬರವಣಿಗೆ ಸುಂದರವಾಗಿದೆ. ಗರಿಗಳು ಹಳೆಯುವು. ಕೆಲವು ಗರಿಗಳು ತ್ರುಟಿತವಾಗಿವೆ. ಆದಿಯಲ್ಲಿ ೩ ಪತ್ರಗಳಿಲ್ಲ. ೪, ೫ ಮತ್ತು ೬ನೆಯ ಪತ್ರಗಳು ತೀರಾ ತ್ರುಟಿತವಾಗಿವೆ. ೯೧ನೇ ಪತ್ರ ಮುರಿದಿದೆ.

—ಎಂಪಿಎಂ

## 168

| | | |
|---|---|---|
| ಕೆ. ೧೩೫೦ | ಭಾಗವತ | ಭಾಮಿನೀ ಷಟ್ಪದಿ |
| ೧೫" × ೧.೬" | ಚಾಟುವಿಠಲನಾಥ | ಸು. ೧೫೩೦ |
| ೩೭೭–೫೭೩ ಪತ್ರ | ೮ ಪಂಕ್ತಿ | ೭೮ ಅಕ್ಷರ |

**ಆದಿ :** ದಶಮಸ್ಕಂಧ ॥
ಪಲ್ಲವ ॥ ಅವನಿದುಷ್ಟಕ್ಷಾತ್ರ ಕುಲಭಾ

ರವನು ಸೈರಿಸಲಾರದಬುಜೋ
ದ್ಭವಗೆ ಬಿನ್ನೈಸಿದರೆ ಬಲಿದುದು ಮೇಲೆ ಸುರಕಾರ್ಯ್ಯ ॥
ಪದನೂ ॥ ಹೇಳಿದಿರಿ ನೀವೆಮಗೆ ತಾದಿತ
ಕೇಳಿದೆಯಲಾ ಸೋಮ ಸೂರ್ಯರ
ಪೀಳಿಗೆಯ ಭೂಪೋತ್ತಮರ ಪಾವನ ಚರಿತ್ರವನೂ
ಕೋಳ ಬೇಹುದು ತನಗೆ ಯದುಕುಲ
ಪಾಲರನಯದೊಳಗೆ ಲಕ್ಷ್ಮೀ
ಲೋಲನವತರಿಸಿದ ಕಥೆಯನದನೆಂದನಾ ಭೂಪಾ ॥ ೧ ॥

ಅಂತ್ಯ : ಅಂತು ಅಧ್ಯಾಯ ೬೪ಕ್ಕಂ ಪದನೂ ೧೧೭ಕ್ಕಂ ಮಂಗಳ ಮಹಾ ಶ್ರೀ.
ಪಲ್ಲವ ॥ ಶೌರಿ ಸಂಗ್ರಾಮದಲಿ ಪೌಂಡ್ರಕ
ಧಾರುಣೀಶಾಧೀಶನಸುವನು
ಸೇರಿಸಿದನಂತಕನ ಪುರಕೆ ಸುದರುಶನಾಸ್ತ್ರದಲಿ ॥ ೩ ॥

× × ×

ಹೇಳಿದರು ವೃತ್ತಾಂತವನು ಬಲು
ಗಾಳಗವನಾ ಪೌಂಡ್ರಕಾಖ್ಯ ನೃ
ಪಾಲನಲಿ ಮಾಡಿದುದನಾತನ...

ವಿಷಯ : ಜಗತ್ಸೃಷ್ಟಿ, ಸೂರ್ಯವಂಶ–ಚಂದ್ರವಂಶದ ರಾಜರ ಕಥೆ.

ವಿಶೇಷ : ಅಸಮಗ್ರ, ಬರಹ ಸುಂದರವಾಗಿದೆ.

—ಕೆಆರ್‌ಎಸ್

## 169

ಕೆ. ೧೪೧೬ ಭಾಗವತ ಭಾಮಿನೀ ಷಟ್ಪದಿ
೧೯.೬" × ೨.೧" ಚಾಟುವಿಠಲನಾಥ ಸು. ೧೫೩೦
೧-೧೧೮ ಪತ್ರ ೯ ಪಂಕ್ತಿ ೬೫ ಅಕ್ಷರ

ಆದಿ : ಒಡಮತಿಗಳಲ್ಪಾಯುಗಳು ಕಲಿ
ಯೆಡೆಯ ಮನುಜರುನರಿಗುಣಂಗಳ
ನುಡಿಯಲರಿಯರು ಒಡಲ ಹೊರದೆ ದಿನವ ನೀಗುವರೂ
ನುಡಿಯಬೇಡದಿಂದಾದರೆರಗರೆ
ಪಡೆಯರೆ ಸದ್ಗತಿಯನೆನುತವೆ
ನಡಸುವೆನು ಫಲಜಾತದಿಂದೀ ದ್ವಾದಶದ ಕಥೆಯಾ ॥ ೪ ॥

ಅಂತ್ಯ : ಪೊಂಗೊಳಲ ಸಂಗೀತದಲಿ ಗೋ

ಪಾಂಗನೆಯುರಂಗಂಗಜದ ಬಾ
ಣಂಗ ಬೆಂಗರಿಗೆ ಸಂತಭಕ್ತರಿಗಿಷ್ಟವೀವುತ್ತ
ಭಂಗಿಸುತ ಭವಭಯುವದಂಗಡಿ
ಹಿಂಗದಾಸರದಂದ ಯೋಗಿಗೆ
ಮಂಗಲವನೊಲಿದಿತ್ತವರ ನಿರ್ವಾಣನಾಯಕನೂ ॥ ೫೫ ॥
ಅಂತು ಸಂಧಿ ೩೦ಕ್ಕಂ ಪದ ೧೧೧೫ಕ್ಕಂ ಮಂಗಳ ಮಹಾಶ್ರೀ ಯೇಕಾದಶ ಸ್ಕಂಧ ಸಮಾಪ್ತಾ

ವಿಷಯ : ಜಗತ್ಸೃಷ್ಟಿ, ಸೂರ್ಯವಂಶ, ಚಂದ್ರವಂಶದ ರಾಜರ ಕಥೆ.

ವಿಶೇಷ : ಶಿಥಿಲ ಪ್ರತಿ. ಕೆಲವು ಗರಿಗಳು ಮುರಿದಿವೆ. ಪ್ರತಿಯೊಂದು ಪತ್ರದ ಅಂಚು ಹುಳು ತಿಂದಿದೆ.

—ವೈಸಿಬಿ

## 170

| ಕೆ. ೧೪೨೦ | ಭಾಗವತ (ದಶಮಸ್ಕಂಧ) | ಭಾಮಿನೀ ಷಟ್ಪದಿ |
|---|---|---|
| ೨೦.೮" × ೨.೩" | ಚಾಟುವಿಠಲನಾಥ | ಸು. ೧೫೩೦ |
| ೧–೨೨೨ ಪತ್ರ | ೧೩ ಪಂಕ್ತಿ | ೮೫ ಅಕ್ಷರ |

ಆದಿ : ಶ್ರೀ ಗಣಾಧಿಪತಯೆ ನಮಃ × × × ಶ್ರೀ ಮೂಲಿಕೆ ಹರಿಕಂಮ್ಮಿಮಗ ಚರಡಪ್ಪ ಕಂಮ್ಮಿರಿಗೆ ಅಂಗಿರಸ ಸಂವತ್ಸರವ ಜೇಷ್ಟ ಬ ೧೦ ಯು ರವಿ ವಾರ ಕ್ರಿಷ್ಮಕಂಮ್ಮಿ ಮಗ ಮಂಜುನಾತ ಕಂಮ್ಮಿಯು ಭಾಗೊತ ದಶಮ ಸ್ಕಂದ ಬರಿಯುವರೆ ಪ್ರಾರಂಭ ಮಾಡುವದಕ್ಕೆ ಶುಭಮಸ್ತು ॥ ಪದ ॥
ಅವನಿದುಷ್ಟ ಕ್ಷತ್ರಿಕುಲ ಭಾ
ರವನು ಸೈರಿಸಲರಿಯದಬುಜೋ
ದ್ಭವಗೆ ಬಿಂನೈಸಿದಳು ಬಲಿದುದು ಮೇಲೆ ಸುರಕಾರ್ಯ ॥ ಪದಾ ॥
ಹೇಳಿದಿರಿ ನೀವೆ ನನಗೆ ತಾ ದಿಟ
ಕೇಳಿದೆನಲಾ ಸೋಮ ಸೂರ್ಯರ
ಪೀಳಿಗೆಯ ಭೂಪೋತ್ತಮರ ಪಾವನ ಚರಿತ್ರವನು ।
ಹೇಳಬೇಹುದು ತನಗೆಯದು ಭೂ
ಪಾಲರಂನ್ವಯದೊಳಗೆ ಲಕ್ಷ್ಮೀ
ಲೋಲನವತಿರಿಸಿದುದ ಕಥೆಯಂದನೆಂದನಾ ಭೂಪ ॥ ೧ ॥

ಅಂತ್ಯ : ಸದಮಳಾಚ್ಯುತಕ್ರಿಷ್ಣರಾಯ
ಹೃದಯುವೆನಿಸಿದ ಭಾಗವತ ಶಾ

ಸ್ರದ ಮಹಾಸತ್ಕೀರ್ತಿಲಕ್ಷ್ಮೀವಿಜಯ ಮಂದಿರದ
ತುದಿಯ ಕಳಶಸ್ಥಾನವೆನಲೊ
ಪ್ಪಿದೆನು ನತಜನಂಗಳನು ಪಾಲಿಸು
ತೊದವಿದೊಲುಮೆಯೊಳಚ್ಯುತಾರಣ್ಯಾಖ್ಯಯತಿರಾಯ ॥ ೪೨ ॥

××× ಆಂಗಿರಸದ ಸಂವತ್ಸರದ ಮಾಗ ಬ ೯ಯು ಭಾರ್ಗವಾರ ದಿವ್ಸ ಶ್ರೀ ಕೃಷ್ಣ ಕಂವ್ತಿ ಮಗ ಮಂಜುನಾತ ಕಂವ್ತಿಯು ಯಿ ದಶಮಸ್ಕಂದಲು ಪೂರ್ಣಮಾಡಲ್ಯಾತು.

ವಿಷಯ : ಕೃಷ್ಣಲೀಲೆಗಳು.

ವಿಶೇಷ : ಪ್ರತಿ ಚೆನ್ನಾಗಿದೆ.

—ಜಿಜಿಎಂ

## 171

| ಕೆ. ೧೪೨೧ | ಭಾಗವತ (ದಶಮಸ್ಕಂಧ) | ಭಾಮಿನೀ ಷಟ್ಪದಿ |
|---|---|---|
| ೨೦" × ೨.೩" | ಚಾಟುವಿಠ್ಠಲನಾಥ | ಸು. ೧೫೩೦ |
| ೧–೨೮೦ ಪತ್ರ | ೧೧ ಪಂಕ್ತಿ | ೮೦ ಅಕ್ಷರ |

ಆದಿ : ಸ್ವಸ್ತಿ ಶ್ರೀಗುರು ಗಣೇಶಾಯ ನಮಃ ××× ಸೂಚನೆ ॥ ಶ್ರೀಮದ್ಭಾಗವತ ದೊಳಗಣ ದಶಮಸ್ಕಂದ ಬರಉದಕ್ಕೆ ಶುಭಮಸ್ತು ××× ಭಾಮಿನೀ ಷಟ್ಪದಿ ॥

ಧರಣಿ ದನುಜರ ಭಾರವನು ಸೈ
ರಿಸಲರಿಯದಬುಜೋದ್ಭವಗೆ ಬಿಂನ
ವಿಸಲದನಾಲಿಸಿದ ಬಲಿದುದು ಮೇಲೆ ಸುರಕಾರ್ಯ

ಪದಾ ॥ ಪೇಳಿದಿರಿ ನೀವೆನಗೆ ತಾವಿದ
ಕೇಳಿದೆನೆಲಾ ಸೋಮಸೂರ್ಯರ
ಪೀಳಿಗೆಯ ಭೂಪೋತ್ತು ಪಾವನ ಚರಿತ್ರವನೂ
ಹೇಳಬೇಹುದು ತನಗೆ ಯದುಭೂ
ಪಾಲರನ್ವಯದೊಳಗೆ ಲಕ್ಷುಮಿ
ಲೋಲನವತರಿಸಿದ ಕಥೆಯನದನೆಂದನಾ ಭೂಪ ॥ ೧ ॥

ಅಂತ್ಯ : ಯಿದನಖಿಳ ಯೋಗೀಂದ್ರ ಪದಯುಗ
ಪದುಮ ಚರಿತಧ್ಯಾನ ನಿರ್ಮಲ
ಹೃದಯವಹಯೋಗೀಂದ್ರನಖಿಳೋದಿತ ಸದಾನಂದಾ
ಮುದದಲಭಿವಂದಿಸಿದೆನರಿವಂ

ದದಲಿ ಗುಣದೋಷವನು ನೋಡದೆ ಕೋ
ವಿದರು ತಿದ್ದುವುದೀ ಕಪ್ರತಿಯು ವಿದ್ಯುಕ್ತಪದ ಕೃತಿಯಾ ॥ ೩೫ ॥
ಕರ್ತೃವಿದ...

ವಿಷಯ : ಕೃಷ್ಣಲೀಲೆಗಳು.

ವಿಶೇಷ : ಪ್ರತಿ ಚೆನ್ನಾಗಿದೆ. ಅಶುದ್ಧ.

—ಜಿಜಿಎಂ

## 172

| ಕೆ. ೧೪೨೨ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೨೦.೧″ × ೨.೪″ | ಚಾಟುವಿಠಲನಾಥ | ಸು. ೧೫೩೦ |
| ೧-೩೦೧ ಪತ್ರ | ೧೦ ಪಂಕ್ತಿ | ೬೪ ಅಕ್ಷರ |

ಆದಿ : ಶ್ರೀ ಗಣಾಧಿಪತಯೆ ನಮಃ "ಭಾಗವತ ಪ್ರಥಮ ಸ್ಕಂದ ಬರಉದಕ್ಕೆ
ಶುಭಮಸ್ತು"
ಶ್ರೀಗಣಾಧೀಶ್ವರನೆ ಯೋಗ
ಭೋಗಫಲಪ್ರದಾಯಕ
ಯಿಾಗೆಮಗಿಷ್ಟಾರ್ಥವನು ನಿರ್ವಿಘ್ನದಾಯಕವ
ಭೋಗಿಭೋಗ ವಿಭೂಷಣನು ಸಕ
ಲಾಗಮೈಕ್ಯ ಸ್ತುಉತ್ಯಗುಣಗಣ
ಸಾಗರನು ಕರುಣಾನಿಧಿಯೆ ವಿಘ್ನೇಶನೊಲವಿನಲಿ

× × ×

ಭಾಗವತದರ್ಥವನು ಸಂಗ್ರಹ
ವಾಗಿ ಬಲ್ಲಂದದಲಿ ವಿಷಯ ವಿ
ಭಾಗವನು ತತ್ತ್ವಯೋಜನಜನಿತಸಿದ್ಧಿಯನು
ರಾಗದಿಂದರುಪುವೆ ನಿಖಿಳ ಭವ
ರೋಗಹರವಿದೆನಲ್ಕೆ ಮಹಗಮಜ್ಞರು
ಕೇಳರಂಮ್ಯವನು ಸಜ್ಜನರು ॥ ೯ ॥

ಅಂತ್ಯ ಆವಸಿದನೋದುವನು ಕೇಳುವ
ನಾವನಿ ಶಷಿವಂಶಭೂಪರ
ಪಾವನಾಮಳ ಚರಿತವನು ಹರಿಗುಣಸುಚರಿತವನು ॥
ಆ ವಿಪುಳಪುಂಣ್ಯಾತ್ಮರನು ದುರಿ
ತಾವಳಿಯನಪಹರಿಸಿ ಕೃಪೆಯಲಿ
ಕಾವನಾ ನಿತ್ಯಾತ್ಮ ಕೃಷ್ಣನನಂತ ಗುಣವನಧಿ

ಅಂತು ಸಂಧಿ ೨೩ಕ್ಕಂ ಪದ ೧೦೩೨ ಮಂಗಳ ಮಹಾ ಶ್ರೀ ಶ್ರೀ
ಪರಾಭವ ಸಂವತ್ಸರದ ಭಾದ್ರಪದ ಶುದ್ಧ ೧೫ಮಿಯು ಶನಿವಾರದಲ್ಲಿ
ಬರಿದು ಮುಗಿಸಿದ್ದು ಸಂಪೂರ್ಣ ಹೊಳೆಗದ್ದೆ ಗ್ರಾಮದ ಲಕ್ಷುಮಣ
ವೈದ್ಯನ ಮಗ ಗೋಪಾಲ ವೈದ್ಯನ ಸ್ವಹಸ್ತ ಬರಹದ ಭಾಗವತ
ಸಂಪೂರ್ಣಮಸ್ತು.

ವಿಷಯ : ಸೂರ್ಯ ಚಂದ್ರವಂಶದ ರಾಜರ ಕಥೆ.

ವಿಶೇಷ : ಭಾಗವತ ೧ರಿಂದ ೯ನೆಯ ಸ್ಕಂಧದವರೆಗಿದೆ. ಪ್ರತಿ ಚೆನ್ನಾಗಿದೆ.

—ಜಿಜಿಎಂ

## 173

| ಕೆ. ೧೫೭೪ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೧೪" x ೨.೩" | ಚಾಟುವಿಠ್ಠಲನಾಥ | ಸು. ೧೫೩೦ |
| ೧-೧೮೨ ಪತ್ರ | ೯ ಪಂಕ್ತಿ | ೫೫ ಅಕ್ಷರ |

ಆದಿ : ಶ್ರೀ ಗಣಾಧಿಪತಯೆನಮಃ

........................

........................

ದೇವ ಗೋದ್ವಿಜರಕ್ಷಣಾರ್ಥ ಕೃ
ತಾವತಾರನು ಪಾಳ್ಕೆ ಯೋಗಕ್ಷೇಮವನು ನಮಗೇ ॥ ೧ ॥
ದಸುರಾಸುರಮೌಳಿ ರತ್ನಪ್ರತತಿ × × ×
ಸುರದ್ರುಮವೀಗೆಮಗಿಷ್ಟಾರ್ಥಸತ್ಫಲವ ॥ ೨ ॥

ಅಂತ್ಯ : ಯಿದು ಪರಮ ಮಂಗಳ ಮಹೋದಯ
ವಿದುವೆ ನಾರಾಯಣ ಪರಾಯಣ
ರುದಿತ ಪುಣ್ಯಪವಿತ್ರವಿದನೋದುವ ಮಹಾತ್ಮರಿಗೆ
ಮುದದಲಿದನಾಲಿಸುವ ಪುಣ್ಯಾ
ಸ್ಪದವೆನಿಪ ಮರ್ತ್ಯರಿಗೆ ನೃಪಸಂ
ಪದವನೀವನು ದೇವ ನಿತ್ಯಾತ್ಮನು ನಿಜಸುಖವಾ ॥ ೪೩ ॥
ಅಂತು ಚತುರ್ಥಸ್ಕಂದ ೧ಕ್ಕಂ ಅಧ್ಯಾಯ ೧೯ಕ್ಕಂ ಪದಾ ೯೨೧ಕ್ಕಂ
ಮಂಗಳ ಮಹಾ ಶ್ರೀ ಶ್ರೀ. ಅಂತು ಪ್ರಥಮಾದಿ ಸ್ಕಂದ ೪ ಕ ೩ ಅಧ್ಯಾಯ
೫೧ಕಂ ಪದ ೨೩೫೮ಕಂ ಮಂಗಳ ಮಹಾ × × × ಶಾಲಿವಾಹನ ಶಕ
ವರ್ತಮಾನ ಸಲುವ ೧೭೪೪ನೆ ವಿಕ್ರಮ ಸಂದ ಆಶ್ವೀಜ ಶುದ್ಧ ೧೨ಲು
ಬರದ್ದು ಮುಗಿದ ಪುಸ್ತಕೆ ಶುಭಮಸ್ತು ದೇವ್ನೈಯ್ಯ ಬರದ ಪುಸ್ತಕ

**ವಿಷಯ :** ಜಗತ್ಸೃಷ್ಟಿ ಮತ್ತು ಸೂರ್ಯ. ಚಂದ್ರವಂಶದ ರಾಜರ ಕಥೆ.

**ವಿಶೇಷ :** ನಾಲ್ಕನೆಯ ಸ್ಕಂಧದ ೧೯ ಅಧ್ಯಾಯಗಳವರೆಗಿದೆ.

—ಜಿಜಿಎಂ

## 174

ಕೆ. ೧೫೭೭ | **ಭಾಗವತ** | ಭಾಮಿನೀ ಷಟ್ಪದಿ

೨೦.೪″ × ೨.೩″ | ಚಾಟುವಿಠಲನಾಥ | ಸು. ೧೫೩೦

೧–೧೭೭ ಪತ್ರ | ೧೧ ಪಂಕ್ತಿ | ೧೧೦ ಅಕ್ಷರ

**ಆದಿ :** ಶ್ರೀ ಗಣಾಧಿಪತಯೆ ನಮಃ × × × ಜಗದಾರಾದ್ಯ ವಿರಚಿತ ಕರ್ನಾಟಕ ಭಾಗವತ ಕೃತಿಯು ದಶಮಸ್ಕಂದ ಪ್ರಾರಂಭವಾಗಿ ಬರದ ಪುಸ್ತಕಕ್ಕೆ ಶ್ರೀ ಶುಭಂ ಶೋಭನಮಸ್ತು ॥ ಪೀಠಿಕೆ ॥
ಸೂತನರುಹಿದ ನಿಖಿಳಗುಣ ವಿ
ಖ್ಯಾತ ಶೌನಕ ಮುಖ್ಯ ಮುನಿಗಳಿ
ಗೋತು ಪರಮರಹಸ್ಯವಹ ಭಾಗವತ ಸಂಹಿತೆಯ ॥
ಶ್ರೀವರನು ಶಾಶ್ವತ ನಿಖಿಳ ವೇ
ದಾವಳಿ ಸಂಸ್ತುತ್ಯ ನಮಿತ ಗು
ಣಾವಲಂಬನನಂಬುಜೋದ್ಭವ ಮುಖ್ಯ ಸುರವಂದ್ಯಾ
ದೇವದೇವನ ಪೋಷ ಧರಣೀ
ದೇವಗಾದ್ವಿಜ ರಕ್ಷಣಾರ್ಥಕ್ರ
ತ್ವಾವತಾರನು ಮಾಳ್ಕೆ ಯೋಗಕ್ಷೇಮವನು ನಮಗೆ ॥ ೧ ॥

**ಅಂತ್ಯ :** ಸದಮಳಾಚ್ಯುತ ಕ್ರಿಷ್ಣರಾಯನ
ಹ್ರುದಯವೆನಿಸಿದ ಭಾಗವತ ಶಾ
ಸ್ತ್ರದ ಮಹಾ ಸತ್ಕೀರ್ತಿಲಕ್ಷ್ಮಿಯ ವಿಜಯ ಮಂದಿರದ
ತುದಿಯೆ ಕಳಶಸ್ತಾನವೆನಲೊ
ಪ್ಪಿದೆನು ತನಜನಗಳನು ಪಾಲಿಸು
ತೊದವಿದೊಲು ಮಯ್ಯೊಳಚ್ಯುತಾರಂಣಾಖ್ಯ ಯೆತಿರಾಯ ॥ ೪೨ ॥
ಉಭಯ ಸಂಧಿ ೬ಕ್ಕಂ ಪದ ಯಂಭತ್ತಯೋಳಕ್ಕಂ ಅಂತು ಸ್ಕಂಧ ೩ಕ್ಕಂ ಸಂಧಿ ೧೧೦ಕ್ಕಂ ಪದ ೫೧೫೬ಕಂ ಯಿಂದು ಸಾವಿರದ ನೂರ ಅಯಿವತ್ತೆರಡಕಂ ಮಂಗಲ ಮಹಾ ಶ್ರೀ ಶ್ರೀ.
ಶ್ರೀ ಮಹಾಭಾಗವತ ದ್ವಾದಶ ಸ್ಕಂಡ ಬಿರದ್ಯವೆಯ ಸಂವತ್ಸರದ ಅಶ್ವಿಜ್ಯ ಶು ೧೧ ಮಂಗಳವಾರದ ವರೆಗೆ ಶ್ರೀ ಶುಭಂ

**ವಿಷಯ :** ಜಗತ್ಸೃಷ್ಟಿ, ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ೧೧ನೆಯ ಸ್ಕಂಧದಿಂದ ಆರಂಭವಾಗಿ ೧೨ ಸ್ಕಂಧ ೨ನೆಯ ಸಂಧಿವರೆಗಿದೆ.

—ಜಿಜಿಎಂ

175

ಕೆ. ೧೬೦೨ | ಭಾಗವತ | ಭಾಮಿನೀ ಷಟ್ಪದಿ
೧೪" × ೨.೩" | ಚಾಟುವಿಠಲನಾಥ | ಸು. ೧೫೩೦
೨–೧೯೦ ಪತ್ರ | ೧೦ ಪಂಕ್ತಿ | ೭೪ ಅಕ್ಷರ

ಆದಿ : ...ತಧೀಯ್ಯ ಭಕ್ತಿಗೆ
ಸಲಿಲಿ ಪರಮಾನಂದವನು ಸೀ
ಲಲಗೆ ಮತ್ಸರವ ಮುಟ್ಟಿಸುತಿರ್ದನೊಲವಿನಲಿ ॥ ೧೦ ॥
ಸಿರಿ ರಹಿತ......
......ಭಯವಿಲ್ಲ ದ್ವಾರಕ
ಪುರದ...ರೆನರೆಯಲ್ಲ ದಿವ್ಯ ಸುಧರ್ಮ್ಯಯಶಾಳ್ದರಿಗೆ
ಕರಿ ತುರಗ ರಥ ಪತ್ನಿಯಿಂದಾ
ಧರಣಿಪರು ಸುಖಿವಿದ್ದರಾದಿನ
ಹರಿಯ ಕರುಣದಲೇನನೆಂಬೆನು ಸಿರಿಯ ಸಡಗರವಾ ॥ ೧೧ ॥

ಅಂತ್ಯ : ಆವನೀ ಭಾಗವತವನೋದುವ
ನಾವನೀ ಸತ್ಕಥೆಯ ಕೇಳುವ
ನಾವನಾಲಿಸಿ ಕಿವಿಯಲ್ಲಿ ಕೇಳ್ವರಿಗೀವ ಸಂನ್ಮತಿಯಾ
ಯಿಾವನವರಿಗೆ ಭಾವಶುದ್ಧಿಯ
ನೀವ ಗುಣಗಣ ರೂಪ ಸಂಪದ
ಕಾಯಿಮನಾ ನಿರ್ವಾಣ ಲಿಂಗನು ಸಚ್ಚಿದಾತ್ಮಕನೂ ॥ ೫೬ ॥
ಅಂತು ಸಂಧಿ ೧೨ಕ್ಕಾಂ ಪದ ೬೦೮ಕ್ಕಾಂ ಮಂಗಳ ಮಹಾಶ್ರೀ.
ದ್ವಾದಶಾ ಸ್ಕಂದ ಸಮಾಪ್ತಾ ಶುಭಮಸ್ತು ॥
ಶ್ರೀವಿಜಯುದದಬ್ಧಿದಯ ಶಕದಿನ
ಭಾವಿಸಲ್ಕರರಿತ್ವರುತು ಐಕ್ಯ
ಕೋವಿದನೆ ದಾರ್ರು ವತ್ಸರದು ಮಾಘಮಾಸದೊಳೂ
ಲಾವನಿತ ಪಕ್ಷ ತ್ರಯೋದಸಿ
ದೇವ ಸೋಮ ವಾಸರದಿ ಮುಂಗಿದಿದು
ಪಾವನದ ಪೌರಾಣದ ಭಾಗವತಾಖ್ಯ ಕಂನಡಧೀ ॥ ೧ ॥ ××× ×× ಮಂಗಳ ಮಹಿಮಾಶ್ರೀ.

ವಿಷಯ : ಜಗ್‌ತ್ಸೃಷ್ಟಿ ಸೂರ್ಯ ಚಂದ್ರುವಂಶದರಾಜರ ಕಥೆ.

ವಿಶೇಷ : ೧೧ ಮತ್ತು ೧೨ ನೆಯ ಸ್ಕಂಧಗಳಿವೆ. ಬರಹ ಚೆನ್ನಾಗಿದೆ. ಕೆಲವು ಗರಿಗಳು ಮುರಿದಿವೆ. ಅಲ್ಲಲ್ಲಿ ತ್ರುಟಿತ.

—ಕೆಆರ್‌ಎಸ್

176

ಕೆ. ೧೬೦೪ ಭಾಗವತ ಭಾಮಿನೀ ಷಟ್ಪದಿ

೧೬.೧" × ೨.೫" ಚಾಟುವಿಠಲನಾಥ ಸು. ೧೫೩೦

೬—೨೩೬ ಪತ್ರ ೧೩ ಪಂಕ್ತಿ ೯೦ ಅಕ್ಷರ

ಆದಿ : ..... ..... ಜವನ ಕಾಣಿತ
ರಾಯಣವೇದೌ ವ್ಯಾಸ ಮುನಿ ನಾ
ರಾಯಣ ಧ್ಯಾನದಲಿ ನಾರದನೆಂದು ನೆರೆ ತಿಳಿದೂ
ಆಯಿತೆಂನಯ ಬಯಕೆ ಬೇಸರು
ಬೀಯ್ಯವಾಯಿತೀನೇನೆನುತ ನಿ
ರ್ಮ್ಮಾಯನೆದ್ದನು ಮುಕುಳಿತಾಂಜಲಿ ಶಿಶ್ಯಜನ ಸಹಿತಾ ॥ ೧೩ ॥

ಅಂತ್ಯ : ವಂರ್ನ್ನಿಸಿದೆನಿದರೊಳಗೆ ವೈಷ್ಣವ
ರುಂನ್ನತಾಮಳ ಪುಂಣ್ಯಚರಿತವು
ಹಾರ್ನ್ನವದಲೊಂದೇಕದೇಶಸ್ಥಾಯಿ ಗುಣಗಣವಾ
ವರ್ನ್ನಧರ್ಮ್ಮವನೆಚ್ಚುತಾರ್ಪಣ
ಧಂನ್ಯತ್ಥಿಯನಾಖ್ಯಾನ ಕಥನಾ
ಕರ್ನ್ನನದಲೆಯಿದುವರು ನಿತ್ಯಾತ್ಮುಮನ ನಿಜಪದವಾ ॥ ೬೧ ॥
ಅಂತ್ತೂ ಸಂಧಿ ೧೪ಕ್ಕೆ ಪದ ೭೨೫ಕ್ಕಂ ಮಂಗಳ ಮಹಾಶ್ರೀ
ಶ್ರೀಪಭವ ಸಂವತ್ಸರದ ಶ್ರಾವಣ ಶು. ೩ಯು ಗುರುವರ ಘಳಿಗೆ ೧೫ಲು
ಗದ್ದೆಮನೆ ಹರಿಯಪ್ಪ ಬೆಗ್ಗದೇರ ಮನೆ ಭಾಗವತ ಪುಸ್ತಕ ೧ಕ್ಕೆ ಪ್ರಥಮ
ಆರಭ್ಯ ಸ್ಕಂಧ ೭ಕ್ಕೆ ಆಚಂದ್ರಾರ್ಕ್ಕವಮಸ್ತು ✕ ✕ ಯಿಾ ಪುಸ್ತಕ ಬರದಾತ
ಗಟ್ಟಿದ ಕೆಳಗಣಕಂ ಶಾಲಿಪುರದ ಹೋಬಳಿಗೆ ಏಳಿಕವಾದ ಹಳ್ಳಿಗೇರಿ
ಸೀಮೆ ವಳಗಣ ಕೆರಗಾಲಗ್ರಮದ ನಾಯ್ಕನ ಕಷ್ಟೆ ಯಾಮ ಮನೆಯೋರಿಯ
ನಾರಾಣಪ್ಪನ ಬರಹೂದ ಪುಸ್ತಕಕ್ಕೆ ಶುಭಮಸ್ತು ॥ ಶ್ರೀ.

ವಿಷಯ : ಜಗತ್ಸೃಷ್ಟಿ, ಸೂರ್ಯವಂಶ ಮತ್ತು ಚಂದ್ರವಂಶ ರಾಜರ ಕಥೆ.

ವಿಶೇಷ : ಬರಹ ಸುಂದರ. ಚತುರ್ಥಸ್ಕಂಧದಿಂದ ಸಪ್ತಮಸ್ಕಂಧದವರೆಗಿದೆ. ಅಂತ್ಯದಲ್ಲಿ ಸಂಪ್ರತಿಕಾರನ ಕಾಲವಿಚಾರಗಳಿವೆ.

—ಕೆಆರ್‌ಎಸ್

## 177

ಕೆ. ೧೩೦೦ | ಭಾಗವತ | ಭಾಮಿನೀ ಷಟ್ಪದಿ
೧೪.೫×೨.೨ | ಚಾಟುವಿಠಲನಾಥ | ಸು. ೧೫೩೦
೨೧೨ ಪತ್ರ | ೧೨ ಪಂಕ್ತಿ | ೧೦೦ ಅಕ್ಷರ

ಆದಿ : ......ಕ್ಷಂತುಮರ್ಹಂತಿ ವಿದ್ವಾಂಸ : ಪಿತಾ ಪುತ್ರಾಪರಾಧವತ್
ಶ್ರೀವರನು ಶಾಶ್ವನಖಿಲ ವೇ
ದಾವಳೀ ಸಂಸ್ತುತ್ಯನಮಿತ ಗು
ಣಾವಲ......ನಾಮೃತ ಮಹೋದತಿ ಪರಮಶಕ್ತಿಲತಾನಿತಾನಾಡ್ಯಾ ॥
ಶ್ರುತಜನಾಯಕೇಷ್ಟಫಲ ಪೂ
ರಿತ ನಿಜಾಂಘ್ರಿಛಾಯ ಗೌರೀ
ಪತಿ ಸುರದ್ರುಮವೀಗೆ ನಮಗಿಷ್ಟಾರ್ಥ ಸಂಪದವ ॥
ಶ್ರೀಕೃಷ್ಣಾಯ ನಮಃ

ಪಲ್ಲ ॥ ಅವನಿ ದುಷ್ಟ ಕ್ಷುತ್ರಕುಲ ಹಾ...
... ಸೈರಿಸಲಱಿಯದಬುಜೋ
ದ್ಭವಗೆ ಬಿನ್ನವಿಸಿದಳು ಬಲಿದುದು ಮೇಲೆ ಸುರಕಾರ್ಯ ॥

ಪದ ॥ ಹೇಳಿದಿರಿ ನೀವೆನಗೆ ದಿ......ತಾ
ಕೇಳಿದೆನಲಾ ಸೋಮ ಸೂರ್ಯರ
ಪೀಳಿಗೆಯ ಪೊಕ್ಕ ಮದಪಾವನ ಚರಿತ್ರವನು
ಹೇಳಬಹುದು ತನಗೆ ಯದುಭೂ
ಪಾಲರನ್ವಯದೊಳಗೆ ಲಕ್ಷ್ಮೀ
ಲೋಲನವತರಿಸಿದ ಕಥೆಯನೆಂದನಾ ಮುನಿಭೂಪಾ ॥ ೧ ॥

ಅಂತ್ಯ : ಬೆಸಸಿದನಾ ಚಕ್ಷುವಿಗೆ ಚಾ
ಕ್ಷುಷನೆನಿಪ ಮನುವಾಮನುವಿಗೆ ನ
ರಸನು ಬಳಿಕುಲ್ಮುಕನು ತತ್ಸುತನಜನೆನಿಪವನು ವಸುಮಂತಿಗೆ ವಿಹವಾದನ
ಜನ ಶಶಿವದನೆ ವೇದಾಖ್ಯನೃಪಸನು
ಬಸುರಲಾಂತು ಸುನೀಥೆ ಪಡದಳು ಪಾಪಚೇಷ್ಟಿತನಾ ॥ ೭ ॥

ವಿಷಯ : ಸೂರ್ಯವಂಶ, ಚಂದ್ರವಂಶದವರ ಕಥೆ.

ವಿಶೇಷ : ಮಲೆಯಾಳಿ ಲಿಪಿ. ತುಳು ಮಿಶ್ರವಾಗಿದೆ. 'ಱ ೞ' ಪ್ರಯೋಗವಿದೆ. ಪತ್ರಸಂಖ್ಯೆ ಕೆಲವೆಡೆ ಕಾಣುವುದಿಲ್ಲ. ಶಿಥಿಲ ಪ್ರತಿ.

—ಬಿಎಸ್ಎಸ್

## 178

| ಕೆ. ೧೬೩೯ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೨೫.೫"×೨.೨" | ಚಾಟುವಿಠಲನಾಥ | ಸು. ೧೫೩೦ |
| ೧-೩೪೬ ಪತ್ರ | ೧೨ ಪಂಕ್ತಿ | ೧೩೦ ಅಕ್ಷರ |

ಆದಿ : ಶ್ರೀಗೋಪಾಲ ಕೃಷ್ಣಾಯಂ ನಮಃ ಶ್ರೀರಾಮಚಂದ್ರಾಯ ನಮಃ
ಭಾಗವತ ಪ್ರಥಮಸ್ಕಂಧ ಬರವದಕ್ಕೆ ಶುಭಮಸ್ತು × × ×
ಸೂತನರುಹಿದನಧಿಕಗುಣವಿ
ಖ್ಯಾತ ಶೌನಕಮುಖ್ಯಮುನಿಗಳಿ
ಗೋತು ಪರಮ ರಹಸ್ಯವಹ ಭಾಗವತ ಸಂಹಿತೆಯ ॥
ಶ್ರೀವರನು ಶಾಶ್ವತನಖಿಳ ವೇ
ದಾವಳೀ ಸಂಸ್ತುತ್ಯನಮಿತಗು
ಣಾವಲಂಬನನಂಬುಜೋದ್ಭವ ಮುಖ್ಯ ಸುರವಂದ್ಯ
ದೇವ ದೇವರ ದೇವನಶೇಷ ಧರಣೀ
ದೇವ......ಜರಕ್ಷಣಾರ್ಥ ಕೃ
ತಾವತಾರನೆ ಮಾಳ್ಕೆ ಯೋಗಕ್ಷೇಮವನು ನಮಗೆ ॥ ೧ ॥

ಅಂತ್ಯ : ನಡೆಯಲಮ್ಮವು ತುರಗತತಿ ಕಂ
ಗೆಡಿಸಿದುದು ಕತ್ತಲೆದುರಂತದ
ಕಡಲಲದ್ದೆನು ಬಿದ್ದೆನೀ ಭಯರಸ ಮಹಾಬ್ಧಿಯಲಿ
ಇಡಲು ಕಂಪಿಸುತಿದೆಯೆನು ತವೆ
ಲ್ಲಡಿಗಳಲಿ ತಲೆವಾಗಿರಲು ಮೈ
ದಡಲುತಂಜದಿರೆನುತ್ತ ನೆನೆದನು ವರಸುದರುಶನವ ॥ ೪೨ ॥

ವಿಷಯ : ಸೂರ್ಯವಂಶ ಚಂದ್ರವಂಶದವರ ಕಥೆ.

ವಿಶೇಷ : ಅಸಮಗ್ರ. ಪ್ರತಿ ಚೆನ್ನಾಗಿದೆ.

—ಜಜಿಎಂ

## 179

| ಕೆ. ೧೬೭೩ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೨೫"×೨.೨" | ಚಾಟುವಿಠಲನಾಥ | ಸು. ೧೫೩೦ |
| ೧-೨೫೩ + ೭-೫೯ ಪತ್ರ | ೧೧ ಪಂಕ್ತಿ | ೭೪ ಅಕ್ಷರ |

ಆದಿ : ಶ್ರೀ ಗುರುವೆಗತಿ ॥ ಶಾಲಿವಾಹನ ಶಕಾಬ್ದಾಃ ೧೭೬೫ನೆ ಶೋಭನಕೃತು ಸಂವತ್ಸರದ ಮಾಘಶುದ್ಧ ೨ ಭಾನುವಾರದಲ್ಲು ಭಾಗವತ ಪ್ರಥಮಸ್ಕಂದ ಬರೆಯುವದಕ್ಕೆ ನಿರ್ವಿಘ್ನಮಸ್ತು ॥ × × ×

ಸೂತನರುಹಿದನಖಿಳಗುಣವಿ
ಖ್ಯಾತ ಶೌನಕ ಮುಖ್ಯಮುನಿಗಳಿ
ಗೋತು ಪರಮ ಪ್ರಶ್ನವಹ ಭಾಗವತಸಂಹಿತೆಯಾ ॥ ೧ ಪಲ್ಲವಿ ॥
ಶ್ರೀವರನು ಶಾಶ್ವಿತನಖಿಳ ನಿಗ
ಮಾವಳೀ ಸಂಸ್ತುತ್ಯನಮಿತ ಗು
ಣಾವಲಂಬನನಂಬುಜೋದ್ಭವ ಮುಖ್ಯ ಸುರವಂದ್ಯಾ ॥
ದೇವ ದೇವನಶೇಷಧರಣೀ
ದೇವಗೋದ್ವಿಜ ರಕ್ಷಣಾರ್ಥ ಕೃ
ತಾವತಾರನು ಮಾಳ್ಕೆ ಯೋಗಕ್ಷೇಮವನು ನಮಗೇ ॥ ೧ ॥

ಅಂತ್ಯ : ಆವನೀ ಭಾಗವತವೋದುವ
ಆವನೀ ಭಾಗವತ ಕಥನವ
ಸೇವಿಸುವ ಕಲಿಯುಲ್ಲಿ ಪೇಳ್ವರಿಗವರ ಸಂನ್ಮತವಾ
ಯಿಾವನವರಿಗೆ ಭಾವಶುದ್ಧಿಯು
ನೀವಗುಣ ಗಣರೂಢ ಸಂತತ
ಕಾವನಾವಗೀರ್ವಾಣಲಿಂಗನು ಸಚ್ಚಿದಾತ್ಮಕನೂಂ ॥ ೫೦ ॥
ಯಿಂತು ಶ್ರೀಮದ್ಭಾಗವತ ಮಹಾಪುರಾಣೆ ದ್ವಾದಶಸ್ಕಂದೆ ದ್ವಾದಶೋ
ಧ್ಯಾಯ ಸಂಪೂರ್ಣಃ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಜಗತ್ಸೃಷ್ಟಿ, ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಸಮಗ್ರ. ೫೩ನೆಯ ಪತ್ರವಾದ ಮೇಲೆ ಬೇರೆಯ ಕ್ರಮಸಂಖ್ಯೆಯಿಂದೆ.
ಮಧ್ಯೆ ಕೆಲವು ಗರಿಗಳು ಲುಪ್ತವಾಗಿವೆ.

—ಜಿಜಿಎಂ

## 180

| ಕ. ೧೭೩೩ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೧೪.೭"×೨" | ಚಾಟುವಿಠಲನಾಥ | ಸು. ೧೫೩೦ |
| ೧-೨೯೬ ಪತ್ರ | ೧೦ ಪಂಕ್ತಿ | ೬೨ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ ॥ ನಿರ್ವಿಘ್ನದಾಯಕಾಯ ನಮಃ ॥ ಶ್ರೀ
ಮದ್ಭಾಗವತ ಪೌರಾಣ ಬರಉದಕ್ಕೆ ಶುಭಮಸ್ತು ॥

ಪಲ್ಲಾ ॥ ಸೂತನರುಹಿದನಖಿಳಗುಣವಿ
ವಿಖ್ಯಾತ ಶೌನಕ ಮುಖ್ಯ ಮುನಿಗಳಿ
ಗೋತು ಪರಮರಹಸ್ಯವಹ ಭಾಗವತ ಸಂಹಿತೆಯಾ ॥

ಪದ ॥ ಶ್ರೀವರನು ಶಾಶ್ವತನಖಿಳ ವೇ
ದಾವಳಿ ಸಂಸ್ತುತ್ಯಾನಮಿತ ಗು
ಣಾವಲಂಬನನಂಬುಜೋದ್ಭವ ಮುಖ್ಯಸುರವಂದ್ಯಾ
ದೇವ ದೇವನ ಶೇಷಧರಣೀ
ದೇವ ಗೋದ್ವಿಜ ರಕ್ಷಣಾರ್ಥ ಕೃ
ತಾವತಾರನೆ ಮಾಳ್ಕೆ ಯೋಗಕ್ಷೇಮುವನು ನಮಗೆ ॥ ೧ ॥

ಅಂತ್ಯ : ನಾಚಿದಳು ಕೈಮುಗಿದು ಮುನಿಪತಿ
ಸೂಚಿಸಿದ ಮಂತ್ರಪ್ರಭಾವ
ವಾಚಿತದರ್ಥವನುಸುರಲಂಮೆನು ನಿಂಮಡಿಯ ಮೇಲೆ
ವೋಚಿಸಿತು ಮನ ಬಿಜಯು ಮಾಡೂ
ದಾಚರಿಸಲರಿದಿಷ್ಟವನು ಸಂ
ಕೋಚಿಸಿತು ಮತಿ ಕ್ಷಮಿಸಬೇಕೆಂ......

ವಿಷಯು : ಜಗತ್ಸೃಷ್ಟಿ, ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಅಸಮಗ್ರ ಪ್ರತಿ. ಪ್ರತಿಯ ಆದಿಯಲ್ಲಿ ವಿಷಯುಸೂಚಿ ಕೊಟ್ಟಿದೆ. ಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ವೈಸಿಬಿ

## 181

| ಕೆ. ೧೭೩೫ | ಭಾಗವತ (೯–೧೦ ನೆಯ ಸ್ಕಂಧ) | ಭಾಮಿನೀ ಷಟ್ಪದಿ |
|---|---|---|
| ೧೭″ × ೨″ | ಚಾಟುವಿಠಲನಾಥ | ಸು. ೧೫೩೦ |
| ೨–೩೧ + ೧-೧೫೦ ಪತ್ರ | ೧೧ ಪಂಕ್ತಿ | ೮೪ ಅಕ್ಷರ |

ಆದಿ : ಛೇದಿಭೂಪತಿ ದಂತವಕ್ತ್ರರು ವಿಪ್ರಶಾಪದಲಿ ॥
ಹಾನಿಯಲ್ಲಾ ಹರಿಪರಾಯಣರಿಗೆ ಮಹಾದೇವಾ ॥
ಆನಿದನು ಹೇಳೆಂತು ನಂಬುವೆ
ನೀ ನಿಖಿಳ ಜನವೆಂತಿದನು ಸನು
ಮಾನಿಸುವರಕಟಕಟ ವಿಸ್ಮಯುವಾಯಿಲಾಯೆಂದಾ ॥ ೨೬ ॥
ಆರು ಕೊಟ್ಟರು ಶಾಪವನು .. ... × × ×
ಶ್ರೀ ಗಣಾಧಿಪತಯೇ ನಮಃ ××× ದಶಮಸ್ಕಂಧಾ ಬರವ ಪ××
ಶ್ರೀ ಶುಕಯೋಗೀಂ ××× ಬಲಿದುದು ಮೇಲೆ ಸುರಕಾರ್ಯ ॥ಪದಾ॥

ಅಂತ್ಯ : ತಾಕಿ ಥಟ್ಟುಗಿದುದುರದ ಕವಚವ
ನೀಗಿ ಹೊಯಿದರಣಾಂಬುರಂಜಿತ

ವಾಗಿ ಬೆಂಗಲಿ ಬೀಳುಕೊಂಡುದು ತೀವ್ರತರಗಳಲಿ ॥
ಭೋಗಿನಿಕರದ...
ಧರೆಗಿಳಿವುತಿರ್ದವು ನಾಗಲೋಕಕ್ಕೆಳಿಯೆದಿರವನೆ ಹರಿಶರವ್ರಾತಾ ॥ ೩೭ ॥
ವಾಸವನು ಬಸವಳಿಯಲೆಚ್ಚನು
ವಾಸುದೇವನನಧಿಕ ಕೋಪಾಟೋಪ
ರೋಷಾವೇಷದಲಿ ಹದಿನಾರು ಬಾಣಗಳ...

ವಿಷಯ : ಜಗತ್ಸೃಷ್ಟಿ. ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಅಸಮಗ್ರ, ಪ್ರತಿ ಶೀರ ತ್ರುಟಿತ.

—ಜಿಜಿಎಂ

## 182

| ಕೆ. ೧೭೩೯ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೨೫.೨"×೨.೨" | ಚಾಟುವಿಠಲನಾಥ | ಸು. ೧೫೩೦ |
| ೧-೩೪೫ ಪತ್ರ | ೧೦ ಪಂಕ್ತಿ | ೭೮ ಅಕ್ಷರ |

ಆದಿ : ಶ್ರೀ ಗೋಪಾಲಕೃಷ್ಣಾಯ ನಮಃ × × × ಭಾಗವತ ಪ್ರಥಮಸ್ಕಂಧ
ಬರವುದಕ್ಕೆ ಶುಭಮಸ್ತು । ಶೋಭನಮಸ್ತು । × × × ಭಾಗವತ
ಪುಸ್ತಕ ಬರಲುದಕ್ಕೆ ನಿರ್ವಿಘ್ನಮಸ್ತು ॥
ಸೂತನರುಹಿದನಧಿಕ ಗುಣ ವಿ
ಖ್ಯಾತ ಶೌನಕಮುಖ್ಯಮುನಿಗಳಿ
ಗೋತು ಪರಮ ರಹಸ್ಯವಹ ಭಾಗವತ ಸಂಹಿತೆಯಾ ॥
ಶ್ರೀವರನು ಶಾಶ್ವತ ನಖಿಳವೇ
ದಾವಳೀ ಸಂಸ್ತುತ್ಯ ನಮಿತಗು
ಣಾವಲಂಬನ ನಂಬುಜೋದ್ಭವ ಮುಖ್ಯ ಸುರವಂದ್ಯಾ
ದೇವ ದೇವರ ದೇವನಶೇಷ ಧರಣೀ
ದೇವ......ರಕ್ಷಣಾರ್ಥಕ್ಕ
ತಾವ ತಾರನೆ ಮಾಳ್ಕೆ ಯೋಗಕ್ಷೇಮವನು ನಮಗೇ ॥ ೧ ॥

ಅಂತ್ಯ : ನಡೆಯಲಮ್ಮವು ತುರಗತತಿ ಕಂ
ಗೆಡಿಸಿದುದು ಕತ್ತಲೆ ದುರಂತದ
ಕಡಲಲ್ಲೈದ್ದೆನು ಬಿದ್ದೆನೀ ಭಯರಸಮಹಾಬ್ಧಿಯಲೀ ॥
ಪೊಡಲುಂ ಕಂಪಿಸುತಿದೆಯೆನುತ ಮೆ
ಲ್ಲಡಿಗಳಲಿ ತಲೆವಾಗಿರಲು ಮೈ
ದಡವು ತಂಜದಿರೆನುತ ನೆನೆದನು ವರದರುಶನವಾ ॥ ೪೨ ॥......

ವಿಷಯ : ಜಗತ್ಸೃಷ್ಟಿ, ಸೂರ್ಯ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಅಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

## 183

ಕೆ. ೧೮೫೦ ಭಾಗವತ (ದಶಮಸ್ಕಂಧ) ಭಾಮಿನೀ ಷಟ್ಪದಿ

೧೪"×೨" ಚಾಟುವಿಠಲನಾಥ ಸು. ೧೫೩೦

೧-೨೬೨ ಪತ್ರ ೭ ಪಂಕ್ತಿ ೭೦ ಅಕ್ಷರ

ಆದಿ : ಶ್ರೀ ಗಣಾಧಿಪತಯೇ ನಮಃ × × × ಶ್ರೀಮದ್ಭಾಗವತ ದಶಮ
ಸ್ಕಂದದ ಪಸ್ತ್ರಿಕ ಬರವುದಕ್ಕೆ ನಿರ್ವಿಘ್ನಮಸ್ತು

ಪಲ್ಲ ॥ ಅವನಿ ದುಷ್ಟಕ್ಷತ್ರ ಕುಲಭಾ
ರವನು ಸೈರಿಯಿರಿಸಲರ್ತಿಯದಬಂಜೋ
ದ್ಭವಗೆ ಬಿನ್ನಯಿಸಿದಳು ಬಲಿದುದು ಮೇಲೆ ಸುರಕಾರ್ಯ

ಪದನೂ ॥ ಹೇಳಿದಿರಿ ನೀವೆನಗೆ ತಾ ಧಿಕ
ಕೇಳಿದೆನಲಾ ಸೋಮ ಸೂರ್ಯರ
ಪೇಳಿಗೆಯ ಭೂಪೋತ್ತಮರ ಪಾವನಚರಿತ್ರವನು
ಹೇಳುವುದು ಬೇಹುದು ನನಗೆ ಯದುಭೂ
ಪಾಲರಂನ್ವಯದೊಳಗೆ ಲಕ್ಷ್ಮೀ
ಲೋಲನವತರಿಸಿದ ಕಥೆಯನವನೆಂದನಾ ಭೂಪ ॥ ೧ ॥

ಅಂತ್ಯ : ಕಳುಹಿ ಮರಳಿದನಂಗಗಸ್ತ
ಚಲಕೆರದಿ ರಾಜೀವನಾಭನ
ಲಲಿತಚರಣಾ ಪರಾಗರಾಗಾನ್ವಿತನು ತಾನೆನಿಸಿ
ಹಲವು ಕಾಲರ್ಘ್ಯಾದಿ ಸತ್ಕ್ರಿಯೆ
ಗಳನು ಮಾಡಿದ ಮುನಿಗಳೆಡೆಯಲಿ
ನಿಲಿಸುವೆನು ಕೃಷ್ಣನನು ತಾನೆಂಬಂತೆ ಮನವೊಲಿದು ೩೧
ಮರಳಿ ಬಂದನು ಮೂರನೆಯ ದಿನ
ಕಿರದೆ ಮುನಿವರರಾಶ್ರಮಕ್ಕೆ ಮುರ
ಹರನುಮಂಗಿಸುತಖಿಳ ದಿಗು ಪಾಲರನು ಬೀಳ್ಕೊಳಿಸಿ......(೬೩ನೆಯ
ಸಂಧಿಯಿಂದ)

ವಿಷಯ : ಶ್ರೀ ಕೃಷ್ಣಮಹಿಮೆ.

ವಿಶೇಷ : ೬೩ನೆಯ ಸಂಧಿ ೩೧ನೆಯ ಪದ್ಯದವರೆಗೆ ಮಾತ್ರ ಗ್ರಂಥವಿದೆ. ೨೫೯ನೆಯ ಪತ್ರವಿಲ್ಲ. ಬರಹ ಚೆನ್ನಾಗಿದೆ.

—ಕೆಆರ್‌ಎಸ್

184

| ಕೆ. ೧೮೬೩ | ಭಾಗವತ | ಭಾಮಿನೀ ಷಟ್ಪದಿ |
|---|---|---|
| ೧೬.೨"×೧.೨" | ಚಾಟುವಿಠಲನಾಥ | ಸು. ೧೫೩೦ |
| ೧-೨೬೧ ಪತ್ರ | ೬ ಪಂಕ್ತಿ | ೬೫ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ ××× ಶುಭಮಸ್ತು ಭಾಗವತಾ ಪ್ರಥಮ ಸ್ಕಂಧಾ ಬರೆಯುವದಕ್ಕೆ ನಿರ್ವಿಘ್ನಮಸ್ತೂ। ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರ್ಷಂಗಳು ೧೭೭೨ನೇ ಸಾಧಾರಣ ಸಂವತ್ಸರದ ಆಷಾಢ ಬಹುಳ ೭ ಬುಧವಾರದಲ್ಲು ಚಿಟ್ಟನ ಹಳ್ಳಿ ರಂಪಮ್ಮಾಭಟ್ಟರ ಪುತ್ರ ವೆಂಕಟಭಟ್ಟನು ಬರದ ಪುಸ್ತುಕ್ಕೆ ನಿರ್ವಿಘ್ನಮಸ್ತೂ.

ಪೀಠಿಕೆ ॥ ಶ್ರೀವರನಂ ಶಾಶ್ವತನಖಿಳ ವೇ
ದಾವಳೀ ಸಂಸ್ತುತ್ಯನಮಿತ ಗು
ಣಾವಲಂಬನ ನಂಬುಜೋದ್ಭವ ಮುಖ್ಯ ಸುರವಂದ್ಯಾ
ದೇವ ದೇವರ ದೇವ ಧರಣೀ
ದೇವ ಗೋದ್ವಿಜ ರಕ್ಷಣಾರ್ಥ ಕೃ
ತಾವತಾರನೆ ಮಾಳ್ಕೆ ಯೋಗಕ್ಷೇಮವನು ನಮಗೇ ॥ ೧ ॥

ಅಂತ್ಯ : ಯಿಂತು ಹರಿ ಚಿಂತೆಯುಲಿ ಕಾಲನ
ಕೊಂತವನು ಕೆಡೆಯೊಡದು ನರಕದ
ತಿಂಥಿಣೆಯ ದುಃಖವನು ಮೇಣೆಹ ಪರದಭವರಿಗೆಯಾ
ಚಿಂತೆಯಿಲ್ಲದೆ ಕಳಿದು ಸರನಿ
ಶ್ಚಿಂತೆಯಾಗಿಹನುಭಯ ಕರ್ಮದ
ಭ್ರಾಂತಿಯನು ನೆರೆ ಬಿಸುಟು ನಿತ್ಯಾತುಮನೆ ತಾನಾಗಿ ೨೭
ಅಂತೂ ಸಂಧಿ ೧೨ಕ್ಕಂ ಪದನು ೫೨೬ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶುಕಯೋಗೀಂದ್ರ ವಿರಚಿತ ಶ್ರೀ ಮಹಾ ಭಾಗವತ ಪುರಾಣ ದೊಳು ಕರ್ನಾಟಕ ಶಬ್ದಾಲಂಕಾರವಾದ ಭಾಮಿನೀ ಷಟ್ಪದ ನಿಕಾಯ ಮಾದ ಆತ್ಮಾರಾಮ ಮಹಾ ಪುರುಷ ವಿರಚಿತವಾದ ಭಾಗವತದೊಳು ಪಂಚಮ ಸ್ಕಂಧ ಸಂಪೂರ್ನ ಮಂಗಳ ಮಹಾ ಶ್ರೀ. ಅಂತು ಸ್ಕಂಧ ೫ಕಂ ಸಂಧಿ ೬೨ಕಂ ಪದನೂ ೨೪೩ಕಂ ಮಂಗಳ ಮಹಾ ಶ್ರೀ.

ವಿಷಯ : ಜಗತ್ಸೃಷ್ಟಿ, ಸೂರ್ಯವಂಶ ಮತ್ತು ಚಂದ್ರವಂಶದ ರಾಜರ ಕಥೆ.

ವಿಶೇಷ : ಇರುವಷ್ಟು ಭಾಗ ಸಮಗ್ರವಾಗಿದೆ. ಬರಹ ಚೆನ್ನಾಗಿದೆ. ಗ್ರಂಥದಾದಿಯಲ್ಲಿಯೇ ಪ್ರತಿಕಾರನ ವಿವರವಿದೆ.

—ಕೆಆರ್‌ಎಸ್

185

ಕೆ. ೧೩೨೨ | ಭಾಗವತ | ಭಾಮಿನೀ ಷಟ್ಪದಿ
೨೨.೧"×೨.೨" | ಚಾಟುವಿಠಲನಾಥ | ಸು. ೧೫೩೦
೫೨-೨೫೭ ಪತ್ರ | ೮ ಪಂಕ್ತಿ | ೯೫ ಅಕ್ಷರ

ಆದಿ : ಕೆಟ್ಟೆವೆಂದರಸಂತ್ತ ಮಿಗೆ ಕಂ
ಗೆಟ್ಟು ಕುರುಗಳು ಹೋದ ಹೆಜ್ಜೆಯ
ಬಟ್ಟೆಗಾಣದ ದೃಷ್ಟತನಗಂ ಹರತೃಣಂಗಳಲಿ
ಭ್ರಷ್ಟತೇಜಿರು ಮರಳಿ ಬಂದರಾ
ವಿಷ್ಟರ ಶ್ರವಗೈದೆ ಬಾಯಂನು
ಬಿಟ್ಟೆರಲೆರಲೆ ದೇವ ರಕ್ಷಿಸು ರಕ್ಷಿಸುವುದೆನುತ್ತಾ ॥ ೩೭ ॥

ಅಂತ್ಯ : ನೂರು ಮಿಂಗಿಲೆಂದೆನಿಸುವಾ ಹದಿ
ನಾರು ಸಾವಿರಸತಿಯರ್ವಿಂಗ್ಯೆ ಕು
ಮಾರರೊಬ್ಬಿಬ್ಬರ್ಲಿಗ್ಯೆದಶ ದೇಕ ಶಂಖೆಯಲಿ ಮೆರೆಯೆ
ವೀರರಷ್ಟಾದಶ.........
.........ವಿಖ್ಯಾತ
ರಾದರು ಬೆರೆ ಬೆರವರ ಹೆಸರನು ಬಣ್ಣಿಸುವೆನೆಂದಾ ॥ ೧೭ ॥

ವಿಷಯ : ಶ್ರೀ ಕೃಷ್ಣನ ಕಥೆ.

ವಿಶೇಷ : ಮೊದಲ ೧೦ ಪತ್ರಗಳು ಲುಪ್ತವಾಗಿವೆ. ಅಸಮಗ್ರ ಪ್ರತಿ.

—ವೈಸಿಬಿ

186

ಕೆ. ೧೪೬೮ | ಭಾಗವತ | ಭಾಮಿನೀ ಷಟ್ಪದಿ
೨೬" × ೨.೧" | ಚಾಟುವಿಠಲನಾಥ | ಸು. ೧೫೩೦
೧೪೧ ಪತ್ರ | ೧೨ ಪಂಕ್ತಿ | ೧೨೬ ಅಕ್ಷರ

ಆದಿ : ಶ್ರೀ ಶಾರದಾ ಗುರುಭ್ಯೋ ನಮಃ ॥ × × × ಪ್ರಥಮಾ... ದ್ವಾದಶ ಸ್ಕಂದ ಬರವದಕ್ಕೆ ಶುಭಮಸ್ತು ॥ × × × ಹರಿಃ
ಶುಕ್ಲಾಂಬರಧರ ವಿಷ್ಣುಂ ಶಶಿವರ್ನಂ ಚತುಭುಜಂ ।
ಪ್ರಸನ್ನ ವದನಂ ಧ್ಯಾಯೇತ್ಸರ್ವ ವಿಘ್ನೋಪ ಶಾಂತಯೇ ॥ ೧ ॥

ಯಿಾಪ್ಸಿತಾರ್ಥ ಸಿಧ್ಯರ್ಥಂ ಪೂಜಿತೋ ಯಃ ಸುರೈರಪಿ ॥
ಸರ್ವವಿಘ್ನಚ್ಛಿದೆ ತಸ್ಮೈ ಶ್ರೀ ಗಣಾಧಿಪತಯೇ ನಮಃ ॥
ವಾಗೀಶಾದ್ಯಾಃ ಸುಮನಸಾಃ ಸರ್ವಾರ್ಥಾನಾಮುಪಕ್ರಮೇ ॥

ಅಂತ್ಯ : ಯಿಂದು ಮುನಿ ಪೇಳಿದ ಕಥೆಯನಾನಂದದಲಿ ಪೇಳಿದನು ಸೂತನು ನಂದ ನಂದನ ಚರಿತವನು ತಚ್ಚರಣರತನಾಗಿ ॥ × × × ಶ್ರೀವಾದಚಿಂತ ವೀರ ನಿತ್ಯಾತ್ಮ ನಾರಾಯಣನ ಪಂಕೇಜ ಮಕರಂದ ಸೇವಿತ ಷಿಪ್ಪ್ಯಕಾರ ನಾದ ಶ್ರೀ ಮಹಾಶುಕ ಯೋಗೀಂದ್ರ ವಿರಚಿತವಾದ ಭಾಗವತದೊಳು ಕರ್ನಾಟಕವ ಶಬ್ದಾಲಂಕಾರವಾದ ಆತ್ಮಾರಾಮ ವಿರಚಿತ ಕಂನಡ ಭಾಗ ವತದೊಳುಯೇಕಾದಶ ಸ್ಕಂದದ ಪ್ರಸಂಗಾ ಸಂಪೂರ್ನ । ಅಧ್ಯಾಯ ಸಂಪೂರ್ನ । ಅಂತೂ ಅಧ್ಯಾಯ ೩೪ಕ್ಕಂ ಪದನು ೧೪೧೬ಕ್ಕಂ ಜಯ ಮಂಗಳ ಮಹಾ ॥

ವಿಷಯ : ಶ್ರೀ ಕೃಷ್ಣನ ಕಥೆ.

ವಿಶೇಷ : ಬರವಣಿಗೆ ಸುಂದರ ಹಾಗು ಸ್ಫುಟ. ಕೆಲವು ಗರಿಗಳು ಮುರಿದಿವೆ.

—ಎಂಪಿಎಂ

## 187

| | | |
|---|---|---|
| ಕ. ೧೬೨೯ | **ಭಾಗವತ (ದಶಮ ಸ್ಕಂಧ)** | ಗದ್ಯ |
| ೧೯.೫" × ೨" | ಮುಮ್ಮಡಿ ಕೃಷ್ಣರಾಜ | ೧೮೫೦ |
| ೧-೩೧೮ ಪತ್ರ | ೬ ಪಂಕ್ತಿ | ೫೭ ಅಕ್ಷರ |

ಆದಿ: ಶ್ರೀ ಭಾಗವತ ದಶಮ ಸ್ಕಂಧ ಪ್ರಾರಂಭ. ಗಣಾದಿಪತಯೇ ನಮಃ॥ × × ಶ್ರೀಕೃಷ್ಣರಾಜವಡೆಯರವರು ಸರ್ವಲೋಕಪ್ರಖ್ಯಾತವಾದ ಶ್ರೀಮದ್ಭಾಗ ವತವೆಂಬ ಮಹಾ ಪುರಾಣಕ್ಕೆ × × × ತಮ್ಮಿಂದ ರಚಿಸಲ್ಪಟ್ಟ ಶ್ರೀಕೃಷ್ಣರಾಜವಾಣಿವಿಲಾಸವೆಂಬ ಕರ್ನಾಟಕ ಭಾಷಾ ಟೀಕಿನಲ್ಲಿ ದಶಮ ಸ್ಕಂದಾರ್ಥಮಂ ವಿವರಿಸುವನದೆಂತೆನೆ ॥ × × × ಯಲ್ಯೆ। ಶುಕಾಚಾರ್ಯನೆ ನೀಂನಿಂದ ಸೂರ್ಯಚಂದ್ರವಂಶ ವಿಸ್ತಾರಉ ಆ ಉಭಯವಂಶಗಳಲ್ಲುದ್ಭ ವಿಸಿದ ಮಹಾತ್ಮರಾದ ಅರಸುಗಳ । ಅತ್ಯಾಶ್ಚಯಕರಗಳಾದ ಚರಿತ್ರೆಗಳು ಸಹಾ ನಿರೂಪಿಸಲ್ಪಟ್ಟವು ॥ ೧ ॥

ಅಂತ್ಯ : ಪುರುಷನು ಭಕ್ತಿಪೂರ್ವಕವಾಗಿ ಪೂಜಾದಿಗಳಂ ಮಾಡಿ ಪ್ರತಿದಿವಸದಲ್ಲಿಯೂ ಅಧಿಕವಾದ ಸೇವೆಯಿಂದ ಶ್ರೀಕೃಷ್ಣನ ಕಥಾಶ್ರವಣ ನಾಮಕೀರ್ತನ ಧ್ಯಾನಾದಿಗಳಿಂದ ಭಕ್ತಜನ ಸಮೂಹಕ್ಕೆ ಮುಕ್ತಿರೂಪವಾದ ದುರ್ಲಭವಾದ

ಆ ಭಗವಂತನ ಸ್ಥಾನವನ್ನೈದುವನು। ಯಿದ್ದಾ ಪರಮಪುರುಷಾರ್ಥ ಕ್ಕ್ಯೋಸ್ಕರಲೇ ಭೂಪತಿಗಳಾದ ಸಾರ್ವಭೌಮರು ಕೂಡ ಐಹಿಕ ಸಾಂಮ್ರಾ ಜ್ಯವಂ ಬಿಟ್ಟು ಪುಣ್ಯಗಣ್ಯಗಳನ್ನೈದಿ ತಪಸ್ಸಂಗೈವರು. ॥ ೫೪ ॥ ಯಂದು ಶ್ರೀ ಶಂಕಾಚಾರ್ಯನು ಪರೀಕ್ಷದ್ರಾಯನಂ ಕುರಿತು ನಿರೂಪಿಸಿದನೆಂದು ಸೂತ ಪಾರಾಣಿಕನು ನೈಮಿಷಾರಣ್ಯವಾಸಿಗಳಾದ ಶೌನಕಾದಿರುಷಿಗಳಂ ಕುರಿತು ಪೇಳಿದನೇಬಲ್ಲಿಗೆ × × × ಮಹಿಶೂರ × × × ಶ್ರೀಕೃಷ್ಣರಾಜ ವಡೆಯರವರು ಬುಧಜನ ಸಂಮತಿಯಿಂದ ತಮಿಂದ ರಚಿಸಲ್ಪಟ್ಟ ಕರ್ನಾಟಕ ಭಾಷಾರೂಪವಾದ ಕೃಷ್ಣರಾಜವಾಣಿವಿಲಾಸವೆಂಬ ಶ್ರೀಮದ್ಭಾಗವತದ ಟೀಕಿನಲ್ಲಿ ದಶಮಸ್ಕಂಧದಲ್ಲು ನವತೀತಮೊಧ್ಯಾಯಃ ॥

ವಿಷಯ : ಶ್ರೀಕೃಷ್ಣ ಮಹಿಮೆ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ.

—ವೈಸಿಬಿ

188

| ಕ್ರ. ೬೭೦ | ಭಾಗವತ | ಗದ್ಯ |
|---|---|---|
| ೨೮" × ೨.೨" | ? | ? |
| ೧-೧೭೯ ಪತ್ರ | ೧೦ ಪಂಕ್ತಿ | ೧೧೫ ಅಕ್ಷರ |

ಆದಿ : × × × ಶ್ರೀ ಮದ್ಭಾಗವತ ಮಹಾಪುರಾಣವನ್ನು ಕರ್ನಾಟಕ ಭಾಷಾ ಪದ್ಧತಿಯಿಂದ ನನ್ನ ಮತಿಗೆ ಗೋಚರವಾದಂತೆ ಅಂತರಾತ್ಮನಾದ ಶ್ರೀ ವಾಸುದೇವಪ್ರೇರಣೆಯಿಂದಾ ವಿಸ್ತಾರವಾಗಿ ಅಭಿವರ್ಣಿಸುತ್ತಂ ಯಿಹೆನೂ ॥

ಅಂತ್ಯ : ಯೆಲೆ ವಿಭುವಾಗಿ ಇದಂಥಾ ಬ್ರಹ್ಮಂತರ್ಗತ ಶ್ರೀಹರಿಯೆ ನೀನು ಆವ ಬ್ರಹ್ಮಾಂಡದೊಳಗಿದ್ದು ಜೀವರ ಪ್ರಾಣೇಂದ್ರಿಯ ಮನಸ್ಸುಗಳಿಗೆ ನಿಯಾ ಮಕನಾಗಿ ಪ್ರೇರಿಸಿದ,

ವಿಷಯ : ಭಾಗವತ ಪುರಾಣ.

ವಿಶೇಷ : ಇದು ಹೊಸಗನ್ನಡ ಗದ್ಯದಲ್ಲಿ ಬರೆಯಲಾಗಿರುವ ವಿಸ್ತಾರಗ್ರಂಥ. ೬೬, ೧೨೫, ಹಾಗೂ ೧೭೭ನೆಯ ಗರಿಗಳ ಎಡ ಅಂಚು ಸ್ವಲ್ಪ ಮುರಿದಿದೆ. ಗ್ರಂಥ ಅಪೂರ್ಣ. ಇದೇ ಗ್ರಂಥದ ಕೊನೆಯಲ್ಲಿ ವಾರರಾಜನಾದ ಸೋಮ ವಾರ ವ್ರತದ ಮಹಿಮೆಯನ್ನು ವಿವರಿಸುವ ೭ ಗರಿಗಳು ಇವೆ. ಆ ವ್ರತದ ಕೊನೆಯಲ್ಲಿ ಯಿಂತೀಯಾದಿ ಪುರಾಣಮಾದ ಸ್ಕಾಂದದಲ್ಲಿ ಅಗಸ್ತ್ಯಸಂಹಿತೆ

ಯಲ್ಲಿ ಶ್ರೀ ಹಾಲಾಸ್ಯಮಹಾತ್ಮೆಯಂ ಕರ್ನಾಟ ಭಾಷೆಯಿಂ ವಿರಚಿಸಲ್ಪಟ್ಟ ಶ್ರೀಮಹಿಶೂರ ಸೇನಾಪತಿ ದೊಡ್ಡರಾಜ ಗರ್ಭಾಬ್ಧಿಚಂದ್ರ ಶ್ರೀ ವೀರರಾಜ ತನೂಭವ ಶ್ರೀ ನಂಜರಾಜ ವಾಣೀವಿಲಾಸವೆಂಬ ಟೀಕಿನಲ್ಲಿ ಸೋಮವಾರ ವ್ರತೋದ್ಯಾಪನವಿಧಿಯಂ ಪೇಳ್ದುದು ವಿಂಸತೋಧ್ಯಾಯಃ ಮಂಗಳ ಮಹಾಶ್ರೀ ಶ್ರೀ ಶ್ರೀ " ಎಂದಿದೆ. ಅದರ ಮುಂದಿನ ಓಲೆಗಳಲ್ಲಿ 'ಪದ್ಮಿನೀ ವಿವಾಹ' ಪ್ರಬಂಧವಿದೆ. ೧-೯ ಗರಿಗಳವರೆಗೆ ವಿಸ್ತಾರವಾಗಿರುವ ಈ ಗದ್ಯ ಕಥೆಯ ಆದಿಭಾಗದ ಓಲೆಯಅಂಚು ಮುರಿದಿದೆ. ಅಂತ್ಯದಲ್ಲಿ ಶ್ರೀ ವೆಂಕಟೇಶ್ವರ ಸತ್ಕರುಣದಿಂದೀ ಚತುರ್ವರ್ಗಿಗಳಂ ವಿಷ್ಣುಸಾಯುಜ್ಯವನ್ನೆ ದುತ್ತಲಿಹರೆಂದು ಸೂತಪುರಾಣಿಕರು ಶೌನಕಾದಿ ಮುನಿಗಳಿಗೆ ನಿರೂಪಿಸಿದ ರೆಂಬಲ್ಲಿಗೆ ಅಧ್ಯಾಯ ಸಂಪೂರ್ಣಂ ಎಂದಿದೆ. ಕೊನೆಯಲ್ಲಿರುವ ಮತ್ತೊಂದು ಪತ್ರಕ್ಕೆ ೧೪೩ನೆಯ ಸಂಖ್ಯೆ ಕೊಟ್ಟಿದ್ದು ಜಡಭರತನ ಕಥೆಯ ಸ್ವಲ್ಪಭಾಗ ಅದರಲ್ಲಿ ಕಾಣಸಿಗುತ್ತದೆ. ಅದೂ ಅಪೂರ್ಣವಾಗಿದೆ.

—ಶ್ರೀನಂತ

## 189

| ಕೆ. ೯೬೦ | ಭಾಗವತ | ಗದ್ಯ |
| --- | --- | --- |
| ೧೮.೫" × ೧.೭" | ? | ? |
| ೩೪೭-೫೩೯ ಪತ್ರ | ೯ ಪಂಕ್ತಿ | ೯೦ ಅಕ್ಷರ |

ಆದಿ : ತೋಳ ವರಹ ಕಾಡೆಂಮೆ ಶಲ್ಯಮೃಗ ಗೋಪುಚ್ಛ ಕಿರುಬಂಲಿಗಳು ಮರ್ಕಟ ಮೊಲ ಹುಲ್ಲೆ ಮೊದಲಾದವು. ಲಕ್ಷ್ಯವಲ್ಲದ ಕಂಡು ನಿರ್ಭಯ ಗಳಾಗಿ ಚರಿಸುತ್ತಿಹವು. ಯಿಂಥಾ ಗಜೇಂದ್ರನು ಬೇಸಗೆಯ ಬಿಸಲಿಂದ ಬಳಲಿ ಮದ ಸುರಿವುತ ಅನೇಕ ಆನೆಗಳ ಕೂಡಿಕೊಂಡು ಮದ ಪರಿಮಳ ಕೆರಗುವ ಭ್ರಮರಕುಲಗಳ ಕೇಳುತ ಶೈತ್ಯಸೌರಭ್ಯ ಮಂದಮಾರುತ ತೀಡಲಾಗಿ

ಅಂತ್ಯ : ಖಳ ಬೆಂನಟಿದನೂ ಪಾತಾಳಲೋಕಗಳು ಭೂಲೋಕದ ವಿವರ ಸುರ ಲೋಕ ಸಿದ್ಧಾದಿಲೋಕಗಳನು ಜಟಾನೀಕ ಜಡಿವುತ್ತಿರಲು ಹೊಕ್ಕನಂ ಶಿವನು ಖಳನಂ ಬೆಂನಟ್ಟಿ ಕೈಯೆತ್ತಿಬರಲು ಕಂಗೆಟ್ಟು ಗಿರಿಜೆರ......

ವಿಷಯ : ಶ್ರೀ ಕೃಷ್ಣನ ಕಥೆ ಹಾಗೂ ಮಹಿಮೆ.

ವಿಶೇಷ : ಅಷ್ಟಮಃಸ್ಕಂಧ ದ್ವಿತೀಯೋಧ್ಯಾಯಂದ ಕಡೆಯ ಭಾಗದಿಂದ ದಶಮಸ್ಕಂಧ ದವರೆಗಿದ್ದು, ದಶಮಸ್ಕಂಧವು ಪೂರ್ತಿಯಾಗಿಲ್ಲ. ೩೫೫-೪೧೭ನೆಯ

ಗರಿಗಳಿಲ್ಲ. ೪೨೧, ೪೨೨ರ ಕ್ರಮಾಂಕಗಳ ಪತ್ರಗಳಿಲ್ಲದಿದ್ದರೂ ಗ್ರಂಥ ಲುಪ್ತವಾಗಿಲ್ಲ. ಅಲ್ಲಲ್ಲಿ ಹುಳು ಹೊಡೆದಿದೆ. ಅಕ್ಷರ ಸುಂದರವಾಗಿದೆ. [ಹ. ಪ್ರ. ವ. ಸೂ. ತೃತೀಯ ಸಂಪುಟ. ಪುಟ ೧೪೨, ಕ್ರಮಾಂಕ 1152 ನೋಡಿ]

—ಕೆಆರ್‌ಎಸ್

## 190

| | | |
|---|---|---|
| ಕೆ. ೮೪೬/೧ | ಭಾಗವತ (ತಾತ್ಪರ್ಯ) | ಗದ್ಯ |
| ೬.೭"×೧.೧" | ? | ? |
| ೨-೭ ಪತ್ರ | ■ ಪಂಕ್ತಿ | ೨೦ ಅಕ್ಷರ |

**ಆದಿ :** ತುಡಿಯುಂಬಾದುಭಯ ಮುಚ್ಚಳದ ಬಾಗಲುಂಟಾ......ನಿಂದ್ರಿಯದಲ್ಲಿ ಶ್ರೀರೂಪಾ। ಯಿಾ ದೇಹದಲ್ಲಿ ಭಕ್ತಚತುರ್ವಿಧಾನ್ನ ಪಚನಾ ಮಾಡುವ ವೈಶ್ವಾನರರೂಪ। ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನ ಮಯ ಆನಂದಮಯೇವೆಂಬ ಪಂಚಕೋಶಗಳಲ್ಲಿ ಅಂಗಾಗಿಭಾವದಲ್ಲಿ ಕ್ರೀಡಿಸುವ ಅಂನಮಾಯಾದಿ ಪಂಚರೂಪ। ಪಂಚಪ್ರಬೇದವಾದ ಸುಷುಮ್ನಾಗತ···

**ಅಂತ್ಯ :** ದ್ವಿತೀಯ ಸ್ಕಂದ ತಾತ್ಪರ್ಯ ॥ ರಾಮಾವತಾರ ಮೊದಲು ವ್ಯಾಸಾವತಾರ ಯಂಬಲ್ಲಿ ಪಕ ॥ ತ್ರಿತೀಯೆ ಪಂಚಮೆ ಚೈವ ಶೋಡಶೆ ಪಂಚವಿಂಶಕೆ। ಅಷ್ಟಾವಿಂಶೆ ಯುಗೆ ಕೃಷ್ಣಂ ಸತ್ಯವತ್ಯುಮಚಾಯಕ ॥

**ವಿಷಯ :** ಭಾಗವತದ ತಾತ್ಪರ್ಯ.

**ವಿಶೇಷ :** ಅಸಮಗ್ರ, ಅತ್ಯಂತ ಶಿಥಿಲಪ್ರತಿ. ಅಶುದ್ಧ. ಇದೇ ಕಟ್ಟಿನಲ್ಲಿ ಛಾಂದೋಗ್ಯ ಭಾಷ್ಯವಿದೆ ಮತ್ತು ಗುರುತಿಸಲಾಗದ ಕೆಲವು ಪತ್ರಗಳಿವೆ.

—ವೈಸಿಬಿ

## 191

| | | |
|---|---|---|
| ಕೆ. ೯೦೫ | ಭಾಗವತ (ದಶಮಸ್ಕಂಧ) | ಗದ್ಯ |
| ೧೫.೧" × ೧.೩" | ? | ? |
| ೧_೧೯೧ ಪತ್ರ | ೬ ಪಂಕ್ತಿ | ೭೬ ಅಕ್ಷರ |

**ಆದಿ :** ದಶಮಸ್ಕಂಧ ಸ್ವಸ್ತ್ಯನಿಖಿಳಸನ್ಮಂಗಳಾನಿ ಸಂಭವಂತ್ತು ಶ್ರೀಪರಮ ಪುರುಷರಹ ಪುರುಷೋತ್ತಮರಹ। ಶ್ರೀಮದಶರಣ್ಯರಹ। ಅಪ್ರಮೇ ಯಂದವಾಗನ್ಮಸಗೋಚರರಹ ಅಶ್ರಿತರತ್ಸಲರಹ ಅದ್ವಂದ್ವರಹ ಶ್ರೀ ಲಕ್ಷ್ಮೀಕುಚಕಲಶಕುಂಕುಮಪಂಕಾಕಿತ ವಕ್ಷಸ್ತಳರಹ ಶ್ರೀಮದ್ವ್ಯಾಸು

ದೇವ ರಚಿತ ಶ್ರೀಪಾದಪದ್ಮಂಗಳಲ್ಲಿ ನಿರತಿಶಯ ಭಕ್ತಿಯುಕ್ತರಾದ ವೇದಾವ್ಯಾಸ ಮಹಾಮುನೀಂದ್ರರಿಂದ ಪ್ರಣೀತವಾದ ಶ್ರೀಮದ್ಭಾಗವತ ಮಹಾಪುರಾಣದಲ್ಲಿ ದಶಮಸ್ಕಂಧಂ ಪ್ರವರ್ತಿಸುತ್ತಯಿರಲು ಶುಕಮಹಾಮುನೀಂದ್ರರಿಗೆ ವಂದಿಸಿ ಪರೀಕ್ಷಿದ್ರಾಜೋತ್ತಮನು ಬಿಂನವಿಸುತ್ತಂಯಿದ್ದಾನು

**ಅಂತ್ಯ :** .. ನಿಮಿಷವನು ಯುಗವಾಗಿ ಕಂಡು ಬೆಂದೆವಲ್ಲೈ ಸ್ವಾಮಿ. ನಿಂನ ಪರಮಯೇಕಾಂತ ಭಕ್ತನಾದ ಉದ್ಭವದೇವನ ಕಳುಹಿಸಿ ನಂಮ ಪ್ರಾಣಗಳನುಳುವಿ ನಿಂನ ಯಿಾ ಮಂಗಳಮೂರ್ತಿಯ ......ದ್ವನ್ಯೆದರಿ......ಡಿದೆ ನಂಮ ರಕ್ಷಿಸು ಸ್ವಾಮಿಯೆಂದು ಯೆಲ್ಲರು ಚರಣಾರವಿಂದಲ್ಲಿ ಹೊರಳಿದರು ಕಂಬನಿಗರವುತ ಬಳಿಕ ವಾಸುದೇವನುಯೆಲ್ಲರನು ತೆಗೆದಪ್ಪಿಕಂಬನಿಯನೊರಸಿ ..

**ವಿಷಯ :** ಶ್ರೀಕೃಷ್ಣನ ಕಥೆ.

**ವಿಶೇಷ :** ಭಾಗವತದಲ್ಲಿನ ದಶಮಸ್ಕಂಧದ ಭಾಗವಿದೆ. ಬರಹವು ಚೆನ್ನಾಗಿದೆ ; ಆದರೆ ಅಲ್ಲಲ್ಲಿ ಹುಳು ಹೊಡೆದಿದ್ದು ಪತ್ರಗಳಲ್ಲಿ ರಂಧ್ರಗಳಾಗಿವೆ. ೭೮ರಿಂದ ೮೭, ೧೪೧, ೧೪೮ನೆಯ ಕ್ರಮಾಂಕದ ಪತ್ರಗಳಿಲ್ಲ. ೧೨೪ನೆಯ ಕ್ರಮಾಂಕದ ಪತ್ರಗಳು ಎರಡಿವೆ.

—ಕೆಆರ್‌ಎಸ್

## 192

| ಕ. ೮೭೪ | ಭಾರತ (ತಾತ್ಪರ್ಯ, ಟೀಕು) | ಗದ್ಯ |
|---|---|---|
| ೧೯.೧ × "೧೨" | ಕಳಲೆ ನಂಜರಾಜ | ಸು. ೧೭೪೦ |
| ೨-೪೬೫ ಪತ್ರ | ೮ ಪಂಕ್ತಿ | ೯೦ ಅಕ್ಷರ |

**ಆದಿ :** ಶ್ರೀ ನಂಜುಂಡೇಶಾಯ ನಮಃ ।
ಶ್ರೀಗೌರೀಕುಚಕುಂಭಕುಂಕುಮರಜಃ ಪಂಕಾಂಕಿತೋರಸ್ಥಳಂ ವಾಗೀಶಾದಿಸು ............................ ದ್ವಯಂ ರಾಗಾತೀತಮುನೀಂದ್ರಮಾನ....... ..........................ದಿಂ । ಕಲಶಾಂಬೋಧಿಯನೊಂದುಗೂಡಿ ಮಥಿಸಲ್ಕಲ್ಪದ್ರುಚಿಂತಾಮಣೀ ವಿಲಸತ್ಕೌಸ್ತುಭ ಕಾಮಧೇನು ಕಮಲಾಪೀಯೂಷ ಸಂದೋಹದಿಂ ಲಲಿತಾಂಗಂ ದ್ವಿಜರಾಜನಲ್ಲುದಿಶಿದಂ ಲೋಕೈಕವೋದಾಸ್ಪದಂ ॥ ಶ್ರೀ ॥ ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕವರ್ಷಂಗಳು ೧೬೬೪ನೇ ಸಂದ ೮ ವರ್ತ್ತಮಾನವಾದ ದುಂದುಂಭಿಸಂವತ್ಸರದಲ್ಲಿ × × × ನಂಜರಾಜ ವಾಣೀವಿಲಾಸವೆಂಬ ಮ...ತ್ಪತ್ತ್ಯ ಟೀಕಂನ್ನು ಮಾಡುವದಕ್ಕೆ ಪ್ರಾರಂಭಿಸ್ತನೂ ॥ ಆದೆಂತೆನೆ ಶ್ರೀ

(೨ನೆಯ ಪತ್ರದಿಂದ) ಕಾರಣಸ್ವರೂಪನಾಗಿ ಅವಾಙ್ಮನಸಗೋಚರನಾಗಿ ಅಪ್ರಮೇಯನಾಗಿರುವ ಪರಬ್ರಂಹ್ಮನಿಂದ ಪರಿಕಲ್ಪಿತವಾದ ಜಗತ್ತಿನಲ್ಲಿ ಪರಮಕಾರಣಿಕನಾಗಿ ಷಡ್ಗುಣೈಶ್ವರ್ಯ್ಯ ಸಂಪಂನನಾಗಿರುವ ಪರಾಶರ ಸುತನಾದ ವೇದವ್ಯಾಸಮಹಾಮುನೀಶ್ವರನು

ಅಂತ್ಯ : ಆತನುಯಿಶಾ ಲೋಕದಲ್ಲಿ ಸಮಸ್ತ ಪಾಪಂಗಳ ದೆಶೆಯಿಂದಾ ಬಿಡಲ್ಪಟ್ಟವನಾಗಿ ಸಕಲೈಶ್ವರ್ಯಗಳಂನ್ನೂ ಅನುಭವಿಶಿ ಪರಲೋಕದಲ್ಲಿ ಸದ್ಗತಿಯಂನ್ನೂ ಪಡೆಯುವನೂ ಯಂದು ವೈಶಂಪಾಯನ ಮುನೀಶ್ವರನು ಜನಮೇಜಯರಾಯನಿಗೆ ಹೇಳಿದ ಅರ್ಥವಂನ್ನೂ ನೈಮಿಶಾರಂಣ್ಯವಾಸಿಗಳಾದ ಶೌನಕಾದಿ ಋಷಿಗಳಿಗೆ ಸೂತಪವುರಾಣಿಕನು ವಿವರಿಸಿದನೂ। ××× ಭರದ್ವಾಜ ಸಗೋತ್ರಾಶ್ವಲಾಯನಸೂತ್ರ ಭುಕ್ತ್ಥಾಖಾಧ್ಯಾಯ ಕವಿ ಬುಧಜನ ವಿಧೇಯ ರಾಜಮಾಂನ್ಯ ರಾಜಶ್ರೀ ಕಳುಲೆನಂಜರಾಜ ವಿರಚಿತವಾಗಿ ಕರ್ಣ್ನಾಟಕ ಭಾಷಾವಿರಚಿತವಾದ ನಂಜರಾಜ ವಾಣೀವಿಲಾಸವೆಂಬ ಮಹಾಭಾರತ ತಾತ್ಪರ್ಯ ಟೀಕಿನಲ್ಲಿ ಆದಿಪರ್ವವು ಸಮಾಪ್ತವು ॥ ಶ್ರೀಕರಕೃತಮಪರಾಧಂ ಕ್ಷಂತ್ತುಮರ್ಹಂತಿ ಸಂತ್ತಃ ಶ್ರೀ.

ವಿಷಯ : ಭಾರತದಲ್ಲಿ ಆದಿಪರ್ವವಾದ ಕಥೆ.

ವಿಶೇಷ : ಆದಿಯಲ್ಲಿ ಪೀಠಿಕಾ ಭಾಗದ ಪತ್ರವೊಂದಿದ್ದು, ಗ್ರಂಥದ ಮೊದಲ ಪತ್ರವಿಲ್ಲದಾಗಿದೆ. ಕೆಲವು ಪತ್ರಗಳಿಗೆ ಹುಳು ಹೊಡೆದಿದೆ.

—ಕೆಆರ್‌ಎಸ್

## 193

| ಕೆ. ೯೪೩ | ಭಾರತ (ತಾತ್ಪರ್ಯ, ಟೀಕು) | ಗದ್ಯ |
|---|---|---|
| ೧೫.೧೦"×೩–೧.೯" | ಕಳಲೆ ನಂಜರಾಜ | ಸು. ೧೭೪೦ |
| ೧–೧೦೮ ಪತ್ರ | ೧೦ ಪಂಕ್ತಿ | ೯೭ ಅಕ್ಷರ |

ಆದಿ : ಸಭಾಪರ್ವ ॥

ಅಗಣಿತಗುಣರತ್ನಾಕರ
ನಿಗಮಾಗಮ ವೇದ್ಯ ಹೃದ್ಯ ನಿರ್ಮ್ಮಲಚರಿತಾ
ಸುಗುಣಾಂತರಂಗ ಭಾಸುರ
ನಗರಾಜಸುತಾ ಹೃದೀಶ ನಂಜುಂಡೇಶಾ ॥

ಅನಂತರದಲ್ಲಿ ಸೂತಪೌರಾಣಿಕನು ನೈಮೀಶಾರಣ್ಯವಾಸಿಗಳಾದ ಶೌನಕಾದಿ ......ಕೇಳಿರೈ ಮಹರ್ಷಿಗಳಿರಾ। ಆ ಬಳಿಕ ಜನಮೇಜಯರಾಯನು ವೈಶಂಪಾಯನ ಮುನೀಶ್ವರನಂನೂ ನೋಡಿಯೆಲೈ ವೈಶಂಪಾಯನ ಮುನೀಶ್ವರನೇ ಜಯಶೀಲನಾದ ಅರ್ಜುನನು ಖಾಂಡವವನದಲ್ಲಿ ಯಜ್ಞೇ

ಶ್ವರನ ದಶೆಯಿಂದಾ ಮಯನನ್ನೂ ತಪ್ಪಿಸಿ ರಕ್ಷಿಸ್ತ ಬಳಿಕಯೇನು ಮಾಡಿದನು ಅದಷ್ಟನ್ನೂ ಸವಿಸ್ತಾರವಾಗಿ ಹೇಳಬೇಕೆನಲು ವೈಶಂಪಾಯನ ಮುನೀಶ್ವರನಿಂತೆಂದನೂ

× × × × × ×

ಇಂತು ಕರ್ನಾಟಭಾಷಾವಿರಚಿತಮಾದ ಶ್ರೀ ಮಹಿಸೂರ ಸೇನಾಧಿಪ ದೊಡ್ಡರಾಜ ಪೌತ್ರ ವೀರರಾಜ ತನೂಜ ದಳಪತಿ ದೇವರಾಜಾನುಜ ಕಳಲೆ ನಂಜರಾಜ ವಿರಚಿತವಾದ ನಂಜರಾಜ ವಾಣೀವಿಲಾಸವೆಂಬ ಮಹಾಭಾರತ ತಾತ್ಪರ್ಯ ಟೀಕಿನಲ್ಲಿ ವ್ಯಾಸಕೃತವಾದ ಲಕ್ಷಗ್ರಂಥ ಸಂಖ್ಯೆಯನುಳ್ಳ ಸಂಹಿತೆಯಲ್ಲಿ ಸಭಾಪರ್ವದಲ್ಲಿ ಸಭಾಕರಣವೆಂಬ ಮೊದಲಿನ ಅಧ್ಯಾಯಾರ್ಥ ಸಮಾಪ್ತಾ ॥

ಅಂತ್ಯ : ಯಿತಿ ಶ್ರೀಮದಮಿತನವಿ:ತಾಂಭೋಜಸಂಭವಜಂಭಾರಿ ಪ್ರಮುಖ ನಿಖಿಲ ಸುರಾಸುರವಂದ್ಯಮಾನ ಗರಳ ಪುರಾಧಿನಾಥ ಚರಣಾರವಿಂದ ಸೇವಾ ಸಮಾಸಾದಿತ ಗೀರ್ವಾಣಾಂಧ್ರ ಕರ್ನಾಟಕಾದಿ ನಾನಾಭಾಷಾ ವಿಶೇಷ ಕಾವ್ಯರಚನಾ ಚಾತುರೀ ಧುರೀಣ ಶ್ರೀಮನ್ಮಹಾರಾಜಾಧಿರಾಜ ರಾಜಪರ ಪರಮೇಶ್ವರ ರಾಜಮಾರ್ತಾಂಡ ಪ್ರತಾಪಾಪ್ರತಿಮ ವೀರನರಪತಿ ಬಿರುದೆಂತೆಂಬರ ಗಂಡ ಬಿರುದಾಂಕಿತ ಶಂಖಚಕ್ರ ಮಕರ ಮತ್ಸ್ಯ ಹನುಮದ್ಗರುಡ ಗಂಡಭೇರುಂಡ ಸಿಂಹ ಶರಭ ಸಾಲ್ವಾದಿ ನಾನಾವಿಧ ಧ್ವಜ ಬಿರುದಾಂಕಿತ ಸಕಲದೇಶಾಧೀಶ ಕಿರೀಟಕೋಟಿ ಮಣಿ ಘೃಣಿ ನೀರಾಜಿತ ಚರಣಯುಗಳ ಯಾದವವಂಶತಿಲಕ ಮಹೀಶೂರ ಕೃಷ್ಣರಾಜ ಸೇನಾಧಿಪ ದೊಡ್ಡರಾಜ ಪೌತ್ರ ವೀರರಾಜ ತನೂಜ ದಳಪತಿ ದೇವರಾಜಾನುಜ ಪರರಾಜ ಮದೇಭ ಪಂಚಾನನಕ್ಷಾತ್ರಾಧೀಶ್ವರ ಹನುಮಧ್ವಜ ಬಿರುದಾಂಕಿತ ಶಿವಪೂಜಾ ದುರಂಧರ ಭಾರಧ್ವಾಜಸ ಗೋತ್ರ ಆಶ್ವಲಾಯನ ಸೂತ್ರ ಋಕ್ಶಾಖಾಧ್ಯಾಯಿಕ ವಿಬುಧಜನವಿಧೇಯ ರಾಜಮಾನ್ಯ ರಾಜಶ್ರೀ ಕಳಲೆನಂಜರಾಜ ವಿರಚಿತಮಾಗಿ ಕರ್ನಾಟಕ ಭಾಷಾ ವಿರಚಿತಮಾದ ನಂಜರಾಜ ವಾಣೀವಿಲಾಸವೆಂಬ ಮಹಾಭಾರತ ತಾತ್ಪರ್ಯ ಟೀಕಿನಲ್ಲಿ ಸಭಾಪರ್ವವು ಸಂಪೂರ್ಣವು

ವಿಷಯ : ಸಂಸ್ಕೃತ ಮಹಾಭಾರತ ಸಭಾಪರ್ವದ ಕನ್ನಡ ಭಾವಾನುವಾದ.

ವಿಶೇಷ: ಪ್ರತಿ ಶುದ್ಧವಾಗಿ ಮೊದಲ ಪತ್ರದ ಅಂಚುಗಳು ಮುರಿದಿದೆ. ೪ನೆಯ ಪತ್ರದ ಅಂಚು ಮುರಿದಿದೆ. ಕೆಲವು ಪತ್ರಗಳಿಗೆ ಅಲ್ಲಲ್ಲಿ ಹುಳು ಹೊಡೆದಿದೆ. ೯೦ನೆಯ ಪತ್ರಕ್ಕೆ ವಿಶೇಷವಾಗಿ ಹುಳು ಹಿಡಿದಿದೆ. [ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ, ತೃತೀಯ ಸಂಪುಟ, ಪುಟ ೧೭೭, ೧೮೦ ನಂ 1189, 1190 ನೋಡಿ]

—ಎನ್‌ಬಿಎ

## 194

ಕೆ. ೯೪೫ | ಭಾರತ (ತಾತ್ಪರ್ಯ, ಟೀಕು) | ಗದ್ಯ
೧೯" x ೧.೬" | ಕಳಲೆ ನಂಜರಾಜ | ಸು. ೧೭೪೦
೨೦೩ ಪತ್ರ | ೭ ಪಂಕ್ತಿ | ೮೦ ಅಕ್ಷರ

ಆದಿ : ವಾಸಿಗಳಾದ ಶೌನಕಾದಿ ಋಷಿಗಳಂ ಕುರಿತುಯಿಂತೆಂದನು । ಯೆಲೈ × × ರಾಯನಂ ಕುರಿತುಯಿಂತೆಂದನೂ ಕೇಳು ಜನಮೇಜಯನೆ ಆಗ ಧೃತ ರಾಷ್ಟ್ರನುಯಿಷ್ಟು ಅಷ್ಟುಯೆಂದು ಹೇಳುವದಕ್ಕೆ ಅಶಕ್ಯವಾಗಿರುವ ಕ್ಲೇಶ ದಿಂದ್ದ ನಿಟ್ಟುಸುರುಗಳಂ ಬಿಡುತ್ತ ಬಾರಿಬಾರಿಗೂ ಕೈಗಳಂ ಕೊಡಹುತ್ತ × × ದಕ್ಕಿಂತಲೂ ದುಃಖ ಉಂಟ್ಟೆಯಿಾ ರೀತಿಯಿಂದ ಮಕ್ಕಳ ದೆಶೆಯಿಂದ ಬಂಧು ಮಕ್ಕಳ ಮಕ್ಕಳ ವಧೆಯಿಂದ್ದ ಕೇಳಿದರೂ ಸಹಸ್ರ ಹೋಳಾಗ ದಿರುವದರಿಂದ ತನ್ನ ಹೃದಯವು ವಜ್ರಮಯವಾಗಿರಬೇಕು.

ಅಂತ್ಯ : ಇಂತು ಕರ್ನಾಟಕ ಭಾಷಾ ವಿರಚಿತವಾದ ಶ್ರೀಮಹಿಶೂರ ಸೇನಾಧಿಪ ದೊಡ್ಡರಾಜ ಪೌತ್ರ ವೀರರಾಜತನೂಜ ದಳಪತಿ ದೇವರಾಜಾನುಜ ಕಳಲೆ ನಂಜರಾಜ ವಿರಚಿತಮಾದ ನಂಜರಾಜವಾಣೀವಿಲಾಸವೆಂಬ ಮಹ ಭಾರತ ತಾತ್ಪರ್ಯ ಟೀಕಿನಲ್ಲಿ ವ್ಯಾಸಕೃತಮಾದ ಲಕ್ಷಗ್ರಂಥ ಸಂಖ್ಯೆ ಉಳ್ಳ ಸಂಹಿತೆಯಲ್ಲಿ ಸೌಪ್ತಿಕಾಪರ್ವದಲ್ಲಿ ಆಯಿಷಿಕದಲ್ಲಿ ಹತ್ತನೆ ಅಧ್ಯಾಯದ ಅರ್ಥನಿರೂಪಣಕ್ಕೆ ಮಂಗಳ ಮಹಾ ಶ್ರೀ ಶ್ರೀ

ವಿಷಯ : ಮಹಾಭಾರತದಲ್ಲಿ ಶಲ್ಯಪರ್ವ ಮತ್ತು ಸೌಪ್ತಿಕಪರ್ವಗಳು.

ವಿಶೇಷ : ಮೊದಲ ೩ ಪತ್ರಗಳ ಸಂಖ್ಯೆ ಗೊತ್ತಾಗುವುದಿಲ್ಲ. ಶಲ್ಯಪರ್ವ ೬-೧೭೦ ಪತ್ರಗಳಿವೆ. ೪೭ನೆಯ ಸಂಖ್ಯೆಯ ೩ ಪತ್ರಗಳಿದ್ದರೂ ವಿಷಯ ಪುನರಾ ವರ್ತನೆಯಾಗಿಲ್ಲ. ಸೌಪ್ತಿಕ ಪರ್ವ ೧-೩೫ ಪತ್ರಗಳಿವೆ. ಅಸಮಗ್ರ. ಬರಹ ಸುಂದರವಾಗಿದೆ.

—ಜಿಜಿಎಂ

## 195

ಕೆ. ೯೪೬ | ಭಾರತ (ತಾತ್ಪರ್ಯ, ಟೀಕು) | ಗದ್ಯ
೨೫" x ೨" | ಕಳಲೆ ನಂಜರಾಜ | ಸು. ೧೭೪೦
೧-೩೦೭ ಪತ್ರ | ೭ ಪಂಕ್ತಿ | ೮೦ ಅಕ್ಷರ

ಆದಿ : ಶ್ರೀಮತೆ ರಾಮಾನುಜಾಯ ನಮಃ ಶ್ರೀ ವೇದವ್ಯಾಸಾಯನಮಃ × × ಅನಂತರದಲ್ಲಿ ಸೂತಪುರಾಣೀಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳಂ ಕುರಿತು ಕೇಳಿರೈ ಋಷಿಗಳಿರಾ ಆ ಬಳಿಕ ವೈಶಂಪಾಯ ಮುನೀಂದ್ರನನ್ನು ನೋಡಿ ಜನಮೇಜಯರಾಯನಿಂತೆಂದನೂಯಲೆ

ವೈಶಂಪಾಯಮುನೀಂದ್ರನೆ × × × ದೇವವ್ರತನು ಶಿಖಂಡಿಯಿಂದಾ ಯುದ್ಧದಲ್ಲಿ ಬಿದ್ದನೂ ಯಂದು ಕೇಳಿ ಧೃತರಾಷ್ಟ್ರನು ಶೋಕವ್ಯಾಕುಲವಾದ ಅಂತಃಕರಣ ಉಳ್ಳವನಾಗಿ ಯಾವ ಪ್ರಕಾರದಿಂದ ವರ್ತಿಸ್ತನೂ

ಅಂತ್ಯ : ಮತ್ತೂ ಮಿಕ್ಕಾದ ಯೋಧರು ಭಯಪಟ್ಟಿರುವ ಶತಾಂಗ ಮಾತಂಗ ತುರಂಗಗಳಂ ಯೇರಿ ಸಾರಥಿಗಳಿಲ್ಲದೆ ಯಿರುವ ರಥಗಳಿಗೆ ಕಟ್ಟಿದ ಕುದುರೆಗಳಂ ಹತ್ತಿಕೊಂಡು ಕವಚಗಳಂ ಬಿಸಾಟು ಕೆದರಿದ ಮಂಡೆಗಳಿಂದಾ ಯಿಂತ್ಥಾ ಅನರ್ಥಉ ಕಂಡು ಕೇಳಿದ್ದಲ್ಲಾ ಯಂದು ದಃಖಿಸುತಾ ವೊಬ್ಬರೊಬ್ಬರಂ ಘಟಿಯಾಗಿ ಕೂಗುತಾ ನಾವು ಬರುತಲಿಧೇವೆ ನಿಲು ನಿಲೋಯಂದು ನುಡಿಯುತಾ ಯಿಬ್ಬರು ವಂದು ದಾರಿಯಲ್ಲಿ ಹೋಗದೆ ವೋಡುತಲಿದ್ದರೂ ಆಗ ಅಶ್ವತ್ಥಾಮನು ಮತ್ತೊಂದು ತಾವಿನಿಂದಾ ಪ್ರವಾಹಕ್ಕೆ ಯದುರಾಗಿ ನಡಿಯುವ ವೊಸಳಿಯೋಪಾದಿಯಲ್ಲಿ ಶಿಖಂಡಿ ವೊದಲಾದ ಪ್ರಭದ್ರಕ ಪಾಂಡವ ..

ವಿಷಯ : ಮಹಾಭಾರತದಲ್ಲಿ ದ್ರೋಣಪರ್ವ.

ವಿಶೇಷ : ೫ನೆಯ ದಿವಸ ದ್ರೋಣವಧೆಯಾಗುವವರೆಗಿದೆ. ಅಸಮಗ್ರ. ಬರಹ ಸ್ಪಷ್ಟ.

—ಜಿ. ಎ.

196

ಕೆ. ೯೪೭ ಭಾರತ (ತಾತ್ಪರ್ಯ, ಟೀಕು) ಗದ್ಯ

೧೯" × ೧.೬" ಕಳಲೆ ನಂಜರಾಜ ಸು. ೧೭೪೦

೧-೩೯ ಪತ್ರ ೭ ಪಂಕ್ತಿ ೮೦ ಅಕ್ಷರ

ಆದಿ : ರಥಉ ನೆರವೇರುವದಕ್ಕೆ ವೊಂದು ಉಪಾಯವಂನ್ನೂ ಹೇಳುತಲಿದ್ದೇನೆ ಈ ಕೃಷ್ಣಸ್ವಾಮಿಗೆ ಸಂಮತವಾದ ಕಾರ್ಯವಂನ್ನು ನೀನು ಮಾಡಿದರೆ ನನಗೆ ಮಾಡಿದ ಹಾಗೆ ಯನಲು ಮಯನು ಕೃಷ್ಣಸ್ವಾಮಿಯನ್ನು ಕುರಿತು ಸ್ವಾಮಿ ನಿಮಗೆ ಅಭೀಷ್ಟವೇನೂಯೆಂದು ಕೇಳಲು ಆ ಕೃಷ್ಣಸ್ವಾಮಿಯು ಯಿವನಿಗೆ ಯೇನು ಕಾರ್ಯವ ಹೇಳುವಾ ಯೆಂದು ಮುಹೂರ್ತ್ರ ಮಾತ್ರಉ ವಿಚಾರಿಶೀ ಮಯನನ್ನು ನೋಡಿ......

ಅಂತ್ಯ : ಬೃಹದ್ರಥನ ಮಗನನ್ನು ಕೋಡುಹಾಕುತಲಿದೇವೆ ಯನಲೂ ಮೂರು ಮಂದಿಯೂ ಕೂಡಿ ಯೇಕಾಂತದಲ್ಲಿ ಕರೆದರೆ ಅಭಿಮಾನಿಶಾಲಿಯಾದ್ದರಿಂದಾ ತಪ್ಪಿಶಿಕೊಳ್ಳದೆ ನಂಮ ಮೂರು ಮಂದಿಯೊಳಗೆ ಯಾರೊಡನೆಯದಿರಾಗಿ ಯುಧಕ್ಕೆ ಬರುತಲಿಧಾನೆ ವಿಶೇಷವಾಗಿ ಸಾಧಕವಂನ್ನೂ ಮಾಡಿಯಿರ

ವಂಥವನಾದ್ದರಿಂದ ಭುಂಜಬಲಶಾಲಿಯಾದ ಭೀಮಸೇನನನ್ನು ಬಯಸು ವನೂ ಯಿದು ನಿಶ್ಚಯ.

ವಿಷಯ : ಮಹಾಭಾರತದಲ್ಲಿ ಸಭಾಪರ್ವ.

ವಿಶೇಷ : ಅಸಮಗ್ರ. 39ನೆಯ ಗರಿಯಲ್ಲಿ ಸಭಾಪರ್ವದ ೩೦ನೆಯ ಅಧ್ಯಾಯದ ಅರ್ಥನಿರೂಪಣೆಯಿದೆ. ಅಲ್ಲದೆ 1, 3, 4, 6–12, 14–16, 27–30, 32, 38ನೆಯ ಗರಿಗಳು ಇಲ್ಲ. ಅಕ್ಷರ ಸುಂದರವಾಗಿದೆ.

—ಜಿಜಿಎಂ

## 197

ಕೆ. ೯೬೫ ಭಾರತ (ತಾತ್ಪರ್ಯ, ಟೀಕು) ಗದ್ಯ

೨೫″ × ೩″ ಕಳಲೆ ನಂಜರಾಜ ಸು. ೧೭೪೦

೨೩೮–೪೧೩ ಪತ್ರ ೯ ಪಂಕ್ತಿ ೧೧೨ ಅಕ್ಷರ

ಆದಿ : ಡನೆ ಕೂಡಿದನೆತ್ತರನ್ನೂ ಕರದನು ಆ ದುರಾತ್ಮಕನ ರಥದಲ್ಲಿ ಸಾವೆರ ಸಂಖ್ಯೆ ಗಳುಳ್ಳ ಕೊಳ್ಳಿಗಳು ಬಿದ್ದಉ ಅವನ ಸಾರಥಿಯು ಹಸ್ತದಿಂದ ಮುಳ್ಳು ಕೋಲು ಜಾರಿಬಿತ್ತು ಯಿಂತ್ಹಾ ಉತ್ಪಾತಗಳು ಹುಟ್ಟಲೂ ಆ ಶಂಬರಾ ಸುರನು ಮರಣ ಕಾಲಉ ಸಮಿಾಪಿಸಿರುವದರಿಂದ ಅವೆಲ್ಲವೂ ಸಡ್ಡೆ ಮಾಡದೆ ಕ್ರಿಷ್ಣಪುತ್ರನಂನ್ನೂ ಸಂಹರಿಸಬೇಕೆಂಬ ಯಿಛೆಯಿಂದಾ ಆಗ್ರಹವ್ಯಗ್ರನಾಗಿ ಯಿರಲೂ

ಅಂತ್ಯ : ಯಾವ ಪತಿವ್ರತಾಸ್ತ್ರೀಯು ಮನೆಯಲ್ಲಿ ದೀಪಾರಾಧನವಂನ್ನೂ ಮಾಡಿ ಪ್ರದಕ್ಷಿಣ ನಮಸ್ಕಾರಗಳಂನ್ನೂ ಮಾಡುವಳೋ ಆವಳು ದೀರ್ಘ ಸೌಮಂಗಲ್ಯವಂನ್ನೂ ಪಡಿಯುವಳು .....ಜಯಂನ್ನೂ ಮಾಡಿದಂತ್ಹಾ ವನು ವಿಷ್ಣುಸಾಯುಜ್ಯವನ್ನೈದುವನು ಕಾರ್ತೀಕಮಾಸದಲ್ಲಿ ದೀಪದಾನ ವಂನ್ನೂ ಮಾಡಿದಂತ್ಹಾವನು ಜ್ಞಾನಶಾಲಿಯಾಗಿ ಆದರಿಂದ ಮೋಕ್ಷವನ್ನು ಪಡಿಯುವನು.

ವಿಷಯ : ಭಾರತದಲ್ಲಿ ಹರಿವಂಶ ಮತ್ತು ಶೇಷಧರ್ಮಗಳು.

ವಿಶೇಷ : ೧ರಿಂದ ೨೩೭ ಪತ್ರಗಳಿಲ್ಲ. ೨೩೮–೪೧೩ ಪತ್ರಗಳವರೆಗೆ ಹರಿವಂಶದ ೧೨೩ನೆ ಅಧ್ಯಾಯದ ಸ್ವಲ್ಪ ಭಾಗದಿಂದ ೩೫೦ ಅಧ್ಯಾಯ ಪೂರ್ತಿ ಇದೆ. ೪೧೪ ನೆಯ ಪತ್ರದಲ್ಲಿ ಶೇಷಧರ್ಮ ೧ನೆಯ ಅಧ್ಯಾಯದಿಂದ ಪ್ರಾರಂಭವಾಗಿ ೫ ನೆಯ ಅಧ್ಯಾಯದವರೆಗಿದೆ. ೪೧೪ನೆಯ ಗರಿ ತ್ರುಟಿತ. ಇದೇ ಕೃತಿಗೆ ಸೇರಿದ ಒಂದು ಜೀರ್ಣಪತ್ರ ಕಡೆಯಲ್ಲಿದೆ. ಒಟ್ಟಿನಲ್ಲಿ ಹರಿವಂಶ ಮತ್ತು ಶೇಷಧರ್ಮ ಎರಡು ಭಾಗವೂ ಅಸಮಗ್ರ. ಅಕ್ಷರ ಸುಂದರವಾಗಿದೆ.

—ಜಿಜಿಎಂ

## 198

ಕೆ. ೯೬೭ — ಭಾರತ (ತಾತ್ಪರ್ಯ, ಟೀಕು) — ಗದ್ಯ

೨೫" × ೨" — ಕಳಲೆ ನಂಜರಾಜ — ಸು. ೧೭೪೦

೧೦೫–೨೩೭ ಪತ್ರ — ೯ ಪಂಕ್ತಿ — ೧೧೨ ಅಕ್ಷರ

**ಆದಿ :** ವಾಗ ಅರ್ಜುನನ ನಿಮಿತ್ತವಾಗಿ ಪಾಂಡವರಿಗೆ ಹಾನಿಯಿಲ್ಲದ ಹಾಗೆ ಮಾಡಿ ನನಿಗೆ ಸೋದರತ್ತೆಯಾದ ಕುಂತೀದೇವಿಗೆ ಅವರಂನ್ನೂ ವೊಪ್ಪಿಸ್ತಲಿಧೇನೆ ಯಲ್ಯೆ ಸುರೇಂದ್ರನೆ ನಿನಿಗೆ ಹಿತಉ ಯಾವದೊ ಅದಂನ್ನೂ ಮಾಡಿ ಭೃತ್ಯನೋಪಾದಿಯಲ್ಲಿ ಆಚರಿಸುತಲಿಧೇನೆ ಯಿಂನ್ನು ಮೇಲೆ ನೀನು ದೇವತೆ ಗಳಿಗೆ ಹಿತವಂನ್ನೂ ಮಾಡುವದಕ್ಕೋಸ್ಕರ ಸ್ವರ್ಗಲೋಕಕ್ಕೆ ಹೋಗೂ ಯನಲು × × ×

**ಅಂತ್ಯ :** ಆ ದಾನವನ ರಥ ಮೇಲೆ ನಿಂತ್ತು ವಿಕಾರಸ್ವರಗಳಿಂದಾ ಕೂಗುವದಕ್ಕೆ ತೊಡಗಿದಲೂ ಸೂರ್ಯನು ರಾಹುನಿಂದಾ ನುಂಗಲಪ್ಪಟ್ಟನು ಆ ಶಂಬ ರಾಸುರನ ಯಡದ ಕಂಣ್ನು ಯಡದ ಭುಜ ಉಭಯುವಂನ್ನೂ ತೋರಿಸುತ ನಡಗಿದಲು ಅವನ ರಥಾಶ್ವಗಳು ಸಮವಾದ ಭೂಮಿಗಳಲ್ಲಿ ಮುಗ್ಗರಿಶಿ ಬಿದ್ದಲು ವೊಂದು ಕಾಗೆಯುಂ ಆ ದಾನವನ ತಲೆ ಮೇಲೆ ಕುಳಿತುಕೊಂಡಿತು ಪರ್ಜನ್ಯನು ಉದಕ ಧಾರೆಗಳೊ…

**ವಿಷಯ :** ಭಾರತದಲ್ಲಿ ಹರಿವಂಶ.

**ವಿಶೇಷ :** ೧–೧೦೫ ಪತ್ರಗಳಿಲ್ಲ. ೧೫೭, ೧೭೪, ೨೧೮ನೆಯ ಕ್ರಮಸಂಖ್ಯೆಯ ಪತ್ರಗಳಿಲ್ಲ. ಇದು ಕೆ. ೯೬೫ನೆಯ ಹಸ್ತಪ್ರತಿಯ ಮೊದಲಭಾಗ.

—ಜಿಜಿಎಂ

## 199

ಕೆ. ೧೩೩೭ — ಭಾರತ (ತಾತ್ಪರ್ಯ, ಟೀಕು) — ಗದ್ಯ

೨೦" × ೨.೩" — ಕಳಲೆ ನಂಜರಾಜ — ಸು. ೧೭೪೦

೧–೧೭೬ ಪತ್ರ — ೧೨ ಪಂಕ್ತಿ — ೧೦೦ ಅಕ್ಷರ

**ಆದಿ :** ಶ್ರೀಮದ್ಗೋಪಾಲಾಯ ನಮಃ । ಶ್ರೀಕೃಷ್ಣಾಯ ಗುರುವೇ ನಮಃ । ಅಶ್ವ ಮೇದಿಕ ಪರ್ವ ಬರೆಯುವುದಕ್ಕೆ ಶುಭಮಸ್ತು । ಶ್ರೀಮದ್ಯಧುಶೈಲವಲ್ಲ-ಭಾಯ ನಮಃ × × × ಅನಂತರದಲ್ಲಿ ಸೂತಪುರಾಣಿಕರು ನೈಮಿ ಸಾರಣ್ಯವಾಸಿಗಳಾದ ಸೌನಕಾದಿ ಋುಷಿಗಳಂನ್ನು ಕುರಿತು ಯಲೆ ಋುಷಿಗಳಿರಾ। ತದನಂತರದಲ್ಲಿ ವೈಶಂಪಾಯನ ಮುನೀಂದ್ರರು ಜನಮೇಜಯ ಮಹೀ ಪಾಲಕರಂ ಕುರಿತು ಯಲೆ ಜನಮೇಜಯನೆ

ಅಂತ್ಯ : ಇಂತು ಕರ್ನಾಟಕಭಾಷಾ ವಿರಚಿತವಾದ ಶ್ರೀ ಮಹಿಶೂರ ಸೇನಾಧಿಪ ದೊಡ್ಡರಾಜ ಪೌತ್ರ ವೀರರಾಜ ತನುಜ ದಳಪತಿ ದೇವರಾಜಾನುಜ ಕಳಲೆ ನಂಜರಾಜ ವಿರಚಿತವಾದ ನಂಜರಾಜವಾಣಿವಿಲಾಸವೆಂಬ ಮಹಾಭಾರತ ತಾತ್ಪರ್ಯ ಟೀಕಿನಲ್ಲಿ ವ್ಯಾಸಕೃತವಾದ ಲಕ್ಷಗ್ರಂಥಸಂಖ್ಯೆಯುಳ್ಳ ಸಂಹಿತೆಯಲ್ಲಿ ಸ್ವರ್ಗಾರೋಹಣ ಪರ್ವದಲ್ಲಿ ಅಯಿದನೆ ಅಧ್ಯಾಯದ ಅರ್ಥ ನಿರೂಪಣಕ್ಕೆ ಮಂಗಳ ಮಹಾ॥ ಶ್ರೀ ॥ × × × ಶ್ರೀ ಮಹಿಶೂರ ಸೇನಾಧಿಪ ದೊಡ್ಡರಾಜ ಪೌತ್ರ × × × ಭಾರದ್ವಾಜಸಗೋತ್ರಂ × × × ಸಂಪೂರ್ಣಮಾದ್ದಕ್ಕೆ ಮಂಗಳ ಮಹಾ ॥

ವಿಷಯ : ಪಾಂಡವರ ಸ್ವರ್ಗಾರೋಹಣದ ಕಥೆ.

ವಿಶೇಷ : ಪ್ರತಿ ಚೆನ್ನಾಗಿದೆ. ಕೃತಿಯ ಅರ್ಧಭಾಗ ಮೋಡಿಯಾದ ಅಕ್ಷರಗಳಿಂದ ಕೂಡಿದೆ. ಕೆಲವು ಭಾಗ ತ್ರುಟಿತವಾಗಿದೆ.

—ಎಂಪಿಎಂ

## 200

| ಕೆ. ೮೨೭ | ಭಾರತ (ಆದಿ, ಸಭಾಪರ್ವ) | ಭಾಮಿನೀ ಷಟ್ಪದಿ |
|---|---|---|
| ೧೫.೨" × ೧.೫" | ಕುಮಾರವ್ಯಾಸ | ಸು. ೧೪೩೦ |
| ೫೮–೨೮೪ ಪತ್ರ | ೬ ಪಂಕ್ತಿ | ೬೦ ಅಕ್ಷರ |

ಆದಿ : ಗೆಲುವ ನಾವನು ದೇವದಾನವ
ರೊಳಗೆ ಭೀಮಾರ್ಜುನರ ಕೈವಶನ
ದಳವನರಿಯಾ ಭಾರವಿದು ನಿನಗೆಂದನಾ ಶಕುನಿ ॥ ೧೯ ॥
ಹಿಂದೆ ನೀನವರುಗಳ ನಾನಾ
ಛಂದದಲಿ ನೋಯಿಸಿದೆ ಮನದಲಿ
ಕಂದು ಕುಂದನು ಕಷ್ಟ ವೃತ್ತಿಯನಾಚರಿಸುತಿಹರೂ ॥
ಯಿಂದು ನೀನಾ ಪಾಂಡುಪುತ್ರರ
ನಂದಗೆಡಿಸದೆ ಬಿಟ್ಟೆಯಾದಡೆ
ಮುಂದೆ ಬೆಟ್ಟಿತು ರಾಜಕಾರಿಯವೆಂದನಾ ಶಕುನಿ ॥ ೨ ॥

ಅಂತ್ಯ : ಮುನಿಪ ಜಪಿಸುತ ನಡದನಗ್ನಿಯ
ವಿನುತ ಸೂಕ್ತವನೆತ್ತುಗೈದುಪಿ
ನನಿಲಜನು ದುಗುಡದಲಿ ಫಲುಗುಣಯಮಳರೊಂದಾಗಿ ॥
ವನಿತೆಯನುನಡುವಿಟ್ಟು ಹೊರವಂ
ಟ್ಟನು ಯುಧಿಷ್ಠರ ನೃಪತಿ ಸಂತತ
ನೆನಲುತಿರ್ದನು ರಾಯ ಗದುಗಿನ ವೀರನಾರಾಯಣಾ ॥ ೮೧೨ ॥

ಅಂತು ಸಂಧಿ ೧೭ಕ್ಕಂ ಪದನೂ ೧೨೭ಕ್ಕಂ ಮಂಗಳ ಮಹಾ ಶ್ರೀ ಶ್ರೀ ವೆಂಕಟನಾಥನೆ ಗತಿ ॥ ಶ್ರೀ ಮದಚಿಂತ್ಯ ಗದುಗಿನ ವೀರನಾರಾಯಣ ಚರಣ ಕಮಲಾರವಿಂದ ಮಕರಂದ ....ಟ್ಪದ ಸಿಕಾಯ......ವ್ಯಾಸ ಯೋಗೀಂದ್ರ ವಿರಚಿತ ಕರ್ನ್ನಾಟಕ ಶ್ರೀ ಮಹಾಭಾರತದೊಳು ಸಭಾ ಪರ್ವಂ ಸಮಾಪ್ತಂ ಮಂಗಳ ಮಹಾಶ್ರೀ.

ವಿಷಯ : ಮಹಾಭಾರತದಲ್ಲಿ ಆದಿ, ಸಭಾಪರ್ವದ ಕಥೆಗಳು.

ವಿಶೇಷ : ಆದಿಪರ್ವದ ೯ನೇ ಸಂಧಿ ೧೯ನೆಯ ಪದ್ಯದ ಉತ್ತರಾರ್ಧದಿಂದ ಲಬ್ಧವಾಗಿದ್ದು ಸಭಾಪರ್ವ ಪೂರ್ತಿ ಭಾಗವಿದೆ. ಶಕಟರೇಫದ ಪ್ರಯೋಗವಿದೆ. ಪತ್ರಗಳಿಗೆ ಅಲ್ಲಲ್ಲಿ ಹುಳು ಹೊಡೆದಿದೆ.

—ಕೆಆರ್‌ಎಸ್

## 201

| ಕೆ. ೮೨೮/೨ | ಭಾರತ | ಭಾಮಿನಿ ಷಟ್ಪದಿ |
|---|---|---|
| ೧೮.೫" × ೧.೬" | ಕುಮಾರವ್ಯಾಸ | ಸು. ೧೯೩೦ |
| ೧–೩೨ ಪತ್ರ | ೧೧ ಪಂಕ್ತಿ | ೧ ೮ ಅಕ್ಷರ |

ಆದಿ : ಶ್ರೀ ಗಣೇಶಾರದಾ ಗುರುಭ್ಯೋ ನಮಃ ॥ ಶಲ್ಯಪರ್ವ ॥

ಪಲ್ಲವಾ ॥ ರಾಯ ಕೇಳೈ ಕದನದಲಿ ರಾ
ಧೇಯನವಸಾನದ ಕಡೆಗೆ ಕುರು
ರಾಯ ದಳಪತಿಯಾಗಿ ಹೊಕ್ಕನು ಶಲ್ಯನಾಹವವಾ ॥

ಪದನೂ ॥ ದ್ಯುಮಣಿಕರ್ನದ್ಯುಮಣಿ ಸಹಿತ
ಸ್ತಮಿಸೆ ಕೌರವನ ಮುಖ
ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ
ಅಮಲಚಕ್ರಾಂಗಕ್ಕೆ ಭೂಪೋ
ತ್ತಮನ ವಿಜಯಾಂಗನೆಯರಗಲಿಕೆ
ಸಮನಿಸಿತು ಕೇಳಯ್ಯ ಜನಮೇಜಯ ಮಹೀಪಾಲಾ ॥ ೧ ॥

ಅಂತ್ಯ : ಹೇಮಖುರ ಶ್ರುಂಗಾರಭರಣದಿ
ಕಾಮಧೇನು ಸಹಸ್ರ ಕಪಿಲೆಯ
ಸೋಮಸೂರ್ಯಗ್ರಹಣದಲಿ ಗಂಗಾದಿ ತೀರದಲಿ
ಶ್ರೀಮುಕುಂದಾರ್ಪಣವೆನಿಸಿ ಶತ
ಭೂಮಿ ದೇವರಿಗಿತ್ತ ಫಲವಹುದೀ
ಮಹಾಭಾರತದೊಳೊಂದಕ್ಷರವ ಕೇಳ್ದರಿಗೆ ॥ ೩೧ ॥

× × ×

ಶ್ರೀಮಂದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ ಮಕರಂದ ಮಧುಪಾನ ಪರೀಕ್ಷಿಪ್ಪಚೋಷಟ್ಪದನಿಕಾಯಂ ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ ಕನಾ···ಮಹಾಭಾರತದ ಕಥಾಮಂಜರಿಯೊಳು ಗದಾಪರ್ವ ಸಮಾಪ್ತಃ ॥ ಅಂತು ಸಂಧಿ ೧೩ಕ್ಕಂ ಪದನು ೬೨೫ಕ್ಕಂ ಮಂಗಳ ಮಂಗಳ ಮಹಾಶ್ರೀ...... ಅಂತು ಪರ್ವ ೧೦ಕ್ಕ ಸಂಧಿ ೧೧೫ಕ್ಕಂ ಪದನು ೬೪೬೯ಕ್ಕಂ ಮಂಗಳ ಮಹಾಶ್ರೀ

ವಿಷಯ : ಮಹಾಭಾರತದಲ್ಲಿ ಶಲ್ಯಪರ್ವದಿಂದ ಗದಾಪರ್ವದವರೆಗಿನ ಕಥೆ.

ವಿಶೇಷ : ಸ್ಫುಟಾಕ್ಷರ. ಇದೇ ಕಟ್ಟಿನಲ್ಲಿ ಭಾಗವತ ಗ್ರಂಥವಿದೆ.

—ವೈಸಿಬಿ

## 202

| ಕೆ. ೮೫೬ | ಭಾರತ (ವಿರಾಟಪರ್ವ) | ಭಾಮಿನೀ ಷಟ್ಪದಿ |
|---|---|---|
| ೧೧.೫"×೧.೨" | ಕುಮಾರವ್ಯಾಸ | ಸು. ೧೪೩೦ |
| ೧-೯೫ ಪತ್ರ | ೬ ಪಂಕ್ತಿ | ೪೮ ಅಕ್ಷರ |

ಆದಿ : ಶ್ರೀಗಣಾಧಿಪತಯೇ ನಮಃ ಶುಭಮಸ್ತು ॥ ಶ್ರೀ ಸಕಲೇಶ್ವರಲಿಂಗನ ಪಾದವೆ ಗತಿ ॥ ಸೂರ್ಯನಾರಾಯಣಶ್ರೀಪಾದವೆ ಗತಿ ॥ ಭಾರತ ಪೀಠಿಕೆಯ ಪದನ ಬರಉದಕ್ಕೆ ಶುಭಮಸ್ತು ॥

ವರ ಮಣಿಗಳಿಂದ್ಯಸವ ಮೌಳಿಯ
ಸರಸಿಜಾರಿಯ ಕಿರಣದೋಳಿಯ
ವಿರಚಿಸಿದ ಸಿಂಧೂರ ಭಾಳದಿ ಕುಣಿವ ಕುಂತಳದಾ
ಕರಿ ನಿಭಾಕೃತಿಯನಿಪ ವದನದ
ಕರದ ಪಾಶದ ಮೋದಕದ ವಿ
ಸ್ತರದ ಗಣಪತಿ ಮಾಡೆಮಗೆ ನಿರ್ವಿಘ್ನದಾಯಕವಾ ॥ ೧ ॥

× × ×

ಶ್ರೀ ಗಣಾಧಿಪತಯೆ ನಮಃ ವಿರಾಟಪರ್‍ವ್ವದ ಪುಸ್ತಕವ ಬರಉದಕ್ಕೆ ಶುಭಮಸ್ತು ॥ ಶ್ರೀ ಸೂರ್‍ಯ್ಯನಾರಾಯಣಸ್ವಾಮಿಯ ಪಾದವೆ ಗತಿಮತಿ ॥

ಕಾಯಿದರು ಸತ್ಯವನು ವನವಾ
ಸಾಯಕವ ನೆರ್ರೆಗೆಲಿದು ಪಾಂಡವ
ರಾಯರೋಲೈಸಿದರು ಬಂದು ವಿರಾಟನಗರಿಯಲಿ ॥ ಪ ॥

ಅಂತ್ಯ : ಆದುದಭಿಮಂನ್ಯುವಿನ ಮದುವೆ ಮ
ಹಾದಯಹಾಂಬುಧಿ ಕೃ...
···ಲ್ಲಿಂಮ್ಮಡಿಸಿತ್ತು ನಂಮ್ಮುದಯಾ

ಮೇದಿನಿಯು ನಾ ವೊತ್ತೆಯಿಟ್ಟೆಲು
ಕಾಯಿದ ·····
·· ಕರುಣಿಸಲಿ ಗದುಗಿನ ವೀರನಾರೆಯಣಾ ॥ ೮೫ ॥
ಅಂತ್ಯ ಸಂಧಿ ೧೧ಕ್ಕಂ ಪದನು···ಶ್ರೀ ಶ್ರೀಗಣಾಧಿಪತಯೆ ನಮಃ ॥
ವಿರಾಟಪರ್ವ······ಯಿ ಪಂದದಿ ಬರೆಯದೆ ತಾಂ···ನೆಂನ್ನದೆ ತಪ್ಪಕ್ಕು
ಶುದ್ಧಮಕ್ಕು । ವಪ್ಪುಳ್ಳರೆ ತಿದ್ದಿಕೊಂಬುದುತ್ತಮ ಪುರುಷಂ ॥ ಶ್ರೀ

ವಿಷಯ : ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸ ಮಾಡಿದ ಕಥೆ.

ವಿಶೇಷ : ಸಮಗ್ರ. ಆದರೆ ಹಲವಾರು ಪತ್ರಗಳು ಮುರಿದು ಒಂದೊಂದು ಭಾಗ ಲುಪ್ತವಾಗಿದೆ. ಪತ್ರಗಳಿಗೆ ಹುಳು ಹೊಡೆದಿದೆ, ಶಕಟರೇಫದ ಬಳಕೆ ಇದೆ. ಬರಹವು ಚೆನ್ನಾಗಿದೆ.
ಕಾಲ ವಿಚಾರಗಳು ತಿಳಿದು ಬರುವುದಿಲ್ಲ.

—ಕೆಆರ್‌ಎಸ್

## 203

| ಕೆ. ೮೬೨ | ಭಾರತ (ಆದಿಪರ್ವ) | ಭಾಮಿನೀ ಷಟ್ಪದಿ |
|---|---|---|
| ೧೩.೩" × ೧.೩" | ಕುಮಾರವ್ಯಾಸ | ಸು. ೧೪೩೦ |
| ೨–೧೦೭ ಪತ್ರ | ೫ ಪಂಕ್ತಿ | ೫೦ ಅಕ್ಷರ |

ಆದಿ : ...................ಘ್ನದಾಯಕವಾ ॥ ೩ ॥
ವಾರಿಜಾಸನೆ ಸಕಲ ಶಾಸ್ತ್ರವಿ
ಚಾರದೋದ್ಭವೆ ವಚನರಚ...
ಧಾರೆ ಶ್ರುತಿ ಪೌರಾಣದಾಗಮ ಸಿಧಿದಾಯಕಿಯೆ
ಶೌರಿ ಸುರಪತ್ತಿ ಸಕಲ ಮುನಿಜನ
ಸೂರಿಗಳಿ......ನುಪಮದ ಯುಕುತಿಯ
ಶಾರಧೆಯನರ್ಚಿಸುಗೆ ನಲಿದೊಲಿದೆಂನ ಜಿಹ್ವೆಯಲಿ ॥ ೪ ॥

× × ×

ಶ್ರೀ ಗುರುಭ್ಯೋಂನಮಃ ॥ ಆದಿಪರ್ವ ॥
ರಾಯ ಜನಮೇಜಯಗೆ ವೈಶಂ
ಪಾಯಮುನಿ ಹೇಳಿದನು ಮುನಿ ದ್ವೈ
ಪಾಯನನು ವಿರಚಿಸಿದ ಭಾರತ ವರಕಥಾಮೃತವಾ

ಅಂತ್ಯ : ತರುಣಿಯರ...ನಿಲಮಣಿಗಳ
ಕುರುಳ ಕಬರಿಯ ಭರದವರ ▪
ತ್ತುರಿಯ ತಿಲಕದ ತಾಳಿಕೆಯ ಘನ ಕಾಂತಿ ಲಹರಿಗಳಾ

ಕೊರಳ ಹಾರದ ಕರ್ನಪೂರದ
ಸರಸಮೌಕ್ತಿಕ ಮಚಿರ ಯಮುನಾ
ಸುರನದಿಯ ಸಂಗಮ:ದೊಳಗೆ ಮುಳುಗಿತು ನ್ರುಪಸ್ತೋಮಾ ॥ ೪೦ ॥
ಪರಿಮಳಕೆ ಮಿಗೆ ಕವಿವ ತುಂಬಿಗೆ
ಕೆರಳುವರು ಹುಬ್ಬಿನಲಿ......

ವಿಷಯ : ಭಾರತದಲ್ಲಿ ಆದಿಪರ್ವದ ಕಥೆ.

ವಿಶೇಷ : ಅಸಮಗ್ರ. ೧೩ನೆಯ ಸಂಧಿಯಲ್ಲಿ ೪೦ನೆಯ ಪದ್ಯದವರೆಗೆ ಮಾತ್ರವಿದೆ. ೮೧ನೆಯ ಪತ್ರದವರೆಗೆ ಕ್ರಮಾಂಕ ಸಂಖ್ಯೆ ಇದೆ. ಅನಂತರ ಇರುವ ೨೭ ಪತ್ರಗಳಿಗೆ ಕ್ರಮಾಂಕವಿಲ್ಲ. ಅಲ್ಲಲ್ಲಿ ಹುಳು ಹೊಡೆದು ರಂಧ್ರಗಳಾಗಿವೆ.

—ಕೆಆರ್‌ಎಸ್

## 204

| ಕೆ. ೮೯೮ | ಭಾರತ (ಆದಿ, ಸಭಾಪರ್ವ) | ಭಾಮಿನೀ ಷಟ್ಪದಿ |
|---|---|---|
| ೧೪.೪"×೧.೪" | ಕುಮಾರವ್ಯಾಸ | ಸು. ೧೪೩೦ |
| ೩೪–೧೫೨ ಪತ್ರ | ೪ ಪಂಕ್ತಿ | ೮೬ ಅಕ್ಷರ |

ಆದಿ : ···ನಿದರುಪ್ಪ···ಜಾಜಿದರು ಪಿಡಿ···ಕ।
······ಹೊಯಿದಾಡಿದರು ಕಲಿಭೀಮ ಕೌರವರೂ ॥ ೩೫ ॥
ಯಲಲೆ ಹಿಡಿ ಹಿಡಿ ಭೀಮನನು
ಕಲ ಕಲಕೆ ದುರ್ಯೋಧನನಿದು···
...ಗಳೆದ ಮಳೆ ಸುರಿದುದು ಶಿವಾಯೆನುತಾ ॥
ಕಳವಳಿಶಿ ಭೀಷ್ಮಾದಿಗಳು ನೃಪ
ತಿಲಕರಿಬ್ಬರ ನಡುವೆ ಹಾಯಿದರು
ಕುಲಗಿರಿಗಳಂದದಲಿ ಕೃಪಗುರುಸುತರು ವಹಿಲದಲಿ ॥ ॥ ೩೬ ॥

ಅಂತ್ಯ : ಮಗನೆ ಲೆಂಕೆಗೆ ಪೋಗು ಮಾನವ
ರಿಗೆ ಮಹೋದಧಿ ಗುಮ್ಯವಲ್ಲತಿ
ವಿಗಡತನ ಬೇಡಲ್ಲಿ ವಿನಯದಲೆಂನ್ನು ಕಾರಿಯವಾ
ಸೊಗಸಿತೇ ಸಾಮ···
···ರಾಳಿಗಳಿವೆ ವಿಘಾತಿಗೆ ದೋಷವಿಲ್ಲೆಂದಾ ॥ ೨೩ ॥
ಯೆನೆ ಹಸಾದವ ಹಾಯಿಕಿ ಭೀಮನ
ತನೆಯ ಕಳುಹಿಶಿಕೊಂಡು ತೆಂಕಲು
ಮನದಿ ಮಂನ್ನವೆ······

ವಿಷಯ : ಕುಮಾರವ್ಯಾಸ ಭಾರತದಲ್ಲಿ ಆದಿ ಮತ್ತು ಸಭಾಪರ್ವದ ಕಥೆ.

ವಿಶೇಷ : ಅಸಮಗ್ರ. ಆದಿಪರ್ವದಲ್ಲಿ ಮೊದಲ ೬ ಸಂಧಿಗಳಿಲ್ಲ. ೭ನೆಯ ಸಂಧಿಯಲ್ಲಿ ೩೫ನೆಯ ಪದ್ಯದಿಂದ ಆರಂಭವಾಗಿ ಸಭಾಪರ್ವದ ೫ನೆಯ ಸಂಧಿ ೨೩ ನೆಯ ಪದ್ಯದವರೆಗೆ ಮಾತ್ರವಿದೆ. ಅಕ್ಷರಗಳು ಉದ್ದುದ್ದವಾಗಿವೆ. ಶಕಟರೇಫವನ್ನು ಪ್ರಯೋಗಿಸಿದೆ. ೩೮, ೪೫, ೫೮, ೬೮, ೭೧, ೮೫, ೮೬. ೯೪, ೯೮, ೧೦೧, ೧೦೭, ೧೨೭, ೧೨೯-೧೩೩, ೧೩೬-೧೪೩, ೧೪೬, ೧೪೮ ನೆಯ ಕ್ರಮಾಂಕಗಳ ಪತ್ರಗಳಿಲ್ಲ. ೫೩ ಮತ್ತು ೧೮೯ನೆಯ ಪತ್ರಗಳ ಅರ್ಧಾರ್ಧ ಭಾಗಗಳು ಮುರಿದು ಲುಪ್ತವಾಗಿವೆ.

—ಕೆಆರ್‌ಎಸ್

## 205

| | | |
|---|---|---|
| ಕೆ. ೮೯ | **ಭಾರತ (ಉದ್ಯೋಗಪರ್ವ)** | ಭಾಮಿನೀ ಷಟ್ಪದಿ |
| ೧೬" × ೧.೩" | ಕುಮಾರವ್ಯಾಸ | ಸು. ೧೪೩೦ |
| ೭೧ ಪತ್ರ | ೮ ಪಂಕ್ತಿ | ೭೪ ಅಕ್ಷರ |

ಆದಿ : ಶಾರದಾಗುರುಭ್ಯೋ ನಮಃ ಆದವಾನಿಯ ಯಲ್ಲಮ್ಮನ ಪಾದವೆ ಗತಿ ಶ್ರೀ ವೆಂಕಟೇಶ್ವರನ ಚರಣಾರವಿಂದವೇ ಗತಿ ಉದ್ಯೋಗಪರ್ವದ ಪುಸ್ತಕಕ್ಕೆ ಶುಭಮಸ್ತು ನಿರ್ವಿಘ್ನಮಸ್ತು ಆಯುರಾರೋಗ್ಯ ನಿತ್ಯ ಅಯಿಶ್ವರ್ಯಮಸ್ತು

ನಂಬಿದವರಿಗೆ ತನ್ನ ತೆತ್ತಿಹನೆಂಬ ಬಿರಿದನು ಮೆರದು ಭಕ್ತ ಕ.........
ಮಾದನೊಲಿದರ್ಜುನಗೆ ಮುರವೈರಿ ॥ ಪದನು ॥
ಕೇಳು ಜನಮೇಜಯ ಧರಿತ್ರಿ
ಪಾಲ ಕುಂತಾತನಯರುನ್ನತ
ದೇಳಿಗೆಯನೇನೆಂಬೆನೈ ಕಾರುಣ್ಯಸಿಂಧುಲಾ
ಶ್ರೀ ಲತಾಂಗಿಯ ರಮಣನೈದವರೊ
ಳಾಳೊಡಯರಾರೆಂಬ ಭೇದವ
ಬೀಳು ಕೊಟ್ಟಿನ ಸುತ್ತಿರ್ದ್ದನು ತನ್ನ ಮೈದುನರಾ ॥ ೧ ॥

ಅಂತ್ಯ : ಗುರುತು ಕಟ್ಟಿದೆಯಿಂದವು
ಕರಿಯ ಬಂಟನ ಕಾಲು
ಬರಿಗಾಲು ಇವು ಬೊಮ್ಮನವೆಂದೂ

ವಿಷಯ : ಭಾಗವತದ ಉದ್ಯೋಗಪರ್ವದ ಕಥೆ.

ವಿಶೇಷ : ಗ್ರಂಥ ಅಪೂರ್ಣ. ಓಲೆ ಎರಡು ಕೊನೆಯ ಭಾಗದಲ್ಲಿ ತ್ರುಟಿತವಾಗಿದೆ. ಕೊನೆಯ ಒಂದು ಪುಟ ಅಮರಕೋಶ ಮತ್ತೊಂದು ವೈದ್ಯ ವಿಷಯ.

—ಎಂಸಿಪಿ

## 206

ಕೆ. ೯೩೧ ಭಾರತ (ದ್ರೋಣಪರ್ವ) ಭಾಮಿನೀ ಷಟ್ಪದಿ

೧೧.೪" × ೧" ಕುಮಾರವ್ಯಾಸ ಸು. ೧೪೩೦

೧–೯೭ ಪತ್ರ ▪ ಪಂಕ್ತಿ ೫೨ ಅಕ್ಷರ

ಆದಿ : ಶ್ರೀ ಗಣಾಧಿಪತಯೆಂ ನಮಃ । ಶುಭಮಸ್ತು । ದ್ರೋಣಪರ್ವಾ ।

ರಾಯ ಕಟಕಾಪಿತಾಮಹನಾತರು
ವಾಯಃಳಭಿಶೇಖವನು ಕವುರವ
ರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನಾ

ಪದನೂ ॥ ಸೋಲಿಶಿತು ಕರ್ನಾಮೃತದ ಮಳೆ
ಗಾಲ ನಿಂನಯ ಕಿವಿಗಳನು ನೆಜಿ³
ಕೇಳಿದ್ಯೆ ಕವುರವನ ಕದನದ ಬಾಲಕೇಳಿಗಳಾ
ಹೇಳುವುದು ತಾನೇನು ಕೆಂಗಜಿ³
ಗೋಲ ಮಂಚದ ಮಹಿಮನಿರವನು
ಮೇಲುವೋಗಿನ ಕಥೆಯನವಧಾನದಲಿ ಕೇಳೆಂದಾ ॥ ೧ ॥

ಅಂತ್ಯ : ವೀರರಿನಿಬರು ನೆರದು ರಿಪುಪರಿ
ವಾರವನು ಹೊಗಲಂಜಿ ಹೊರಗಣ
ಮಾರಿ ಹೊರಹೊರಗೆಂಬವೊಲು......ನನ ನೂಕಿದಿರಿ
ಆರ ನಂಬಲುಬಹುದು ನಿಮ್ಮಃಪಕೆ
ದೂರ ತಾನಗಲಿದಡೆ ತಂನ ಕು
ಮಾರನಿದ್ದೆಡೆ ಹರಿವ ಕಂಡಿರೆ ಹೊಲ್ಲೆಹೇನೆಂದಾ ॥ ೨೬ ॥

ವಿಷಯ : ಭಾರತದ ಕಥೆಯಲ್ಲಿ ದ್ರೋಣಪರ್ವದ ಕಥೆ.

ವಿಶೇಷ : ಅಸಮಗ್ರ. ಎಂಟನೆಯ ಸಂಧಿ ಪೂರ್ಣವಾಗಿದ್ದು ೯ನೆಯ ಸಂಧಿಯು ೨೬ ಪದ್ಯಗಳಿವೆ. ಕೆಲವೆಡೆ ಶಕಟರೇಫ ಬಳಕೆಯಾಗಿದೆ. ೨೧ ಮತ್ತು ೭೨ನೆಯ ಪತ್ರಗಳಿಲ್ಲ. ಕೆಲವು ಪತ್ರಗಳ ಅಂಚು ಮುರಿದಿದೆ. ಇದು ಮದರಾಸಿನಿಂದ ಬಂದುದಾಗಿದ್ದು ಅಲ್ಲಿನ ಡಿ ೭೩ರ ಪ್ರತಿಯಾಗಿದೆ.

—ಬಿಎಸ್‌ಎಸ್

## 207

ಕ. ೯೪೮ ಭಾರತ (ಅರಣ್ಯ, ವಿರಾಟ, ಉದ್ಯೋಗಪರ್ವಗಳು) ಭಾಮಿನೀ ಷಟ್ಪದಿ

೧೮" × ೧.೨" ಕುಮಾರವ್ಯಾಸ ಸು. ೧೪೩೦

೨೦೬–೪೬೮ ಪತ್ರ ೬ ಪಂಕ್ತಿ ೮೦ ಅಕ್ಷರ

ಆದಿ : ಶ್ರೀಕೃಷ್ಣಾಯನಮಃ ॥ ಶುಭಮಸ್ತು ॥
ಸಕಲ ರಾಜ್ಯವನುಳಿದಿವರು ಕಾ
ಮ್ಯಕ ಮಹಾಕಾನನದೊಳಗೆ ಕೀ
ಚಕ ಕುಲಾಂತಕ ಕೆಡಹಿದನು × ಮಾರದಾನವನು ॥
ಪದನು ॥ ಕೇಳು ಜನಮೇಜಯ ಧರಿತ್ರೀ
ಪಾಲ ಗಂಗಾತೀರದ × × ಭೂ
ಪಾಲಕರು ಗುರು ಭೀಷ್ಮ ವಿದುರಾದ್ಯಖಿಳ ಬಾಂಧವರು
ಬೀಳುಕೊಟ್ಟರು ಗಜಪುರದ ಜನ
ಜಾಲವನು ಕಳುಹಿದರು ಗಂಗಾ
ಕೂಲದುತ್ತರಭಾಗದಲಿ ಮಾಡಿದರುವಿಶ್ರಮವಾ ॥

ಅಂತ್ಯ : ಶ್ರೀಕೃಷ್ಣಾರ್ಪಣಮಸ್ತು। ಆದಿಪರ್ವ ೧ಕ್ಕಂ ಸಂಧಿ ೨೦ಕ್ಕಂ ಪದನು ೯೪೫ ಸಭಾಪರ್ವ ೧ಕ್ಕಂ ಸಂಧಿ ೧೭ಕ್ಕಂ ಪದನು ೧೨೫೮ಕ್ಕಂ ಅರಣ್ಯಪರ್ವ ೧ಕ್ಕಂ ಸಂಧಿ ೨೪ಕ್ಕಂ ಪದನು ೧೨೩೫ಕ್ಕಂ ವಿರಾಟಪರ್ವ ೧ಕ್ಕಂ ಸಂಧಿ ೧೧ಕ್ಕಂ ಪದನು ೭೮೯ಕ್ಕಂ ವುದ್ಯೋಗಪರ್ವ ೧ಕ್ಕಂ ಸಂಧಿ ೧೨ಕ್ಕಂ ಪದನು ೭೪೨ಕ್ಕಂ ಅಂತೂ ಪರ್ವ ೫ಕ್ಕಂ ಸಂಧಿ ೮೪ಕ್ಕಂ ಪದನೂ ೪೯೨೯ಕ್ಕಂ ಮಂಗಳ ಮಹ ಶ್ರೀ ಶ್ರೀ ಗದುಗಿನ ವೀರನಾರಾಯಣನೆ ಗತಿ × × × ಕೀಲಕ ಸಂವತ್ಸರದ ಮಾರ್ಗಶಿರ ಶು ೫ಲ್ಲೂ ಬರದಾತ ಮಹಿಶೂರ ನಗರದ ಲಕ್ಷ್ಮೀರಮಣ ಸ್ವಾಮಿಯ ದೇವಸ್ಥಾನದ....ಕೃಷ್ಣಯ್ಯನು ತಾನು ತನಗೆ ಬರದ ಭಾರತದ ಪುಸ್ತಕ ೧ಕ್ಕೆ ಪರ್ವ ▪ ಬರದು ಸಮಾಪ್ತಿಯಾಯಿತೂ × × ×

ವಿಷಯ : ಮಹಾಭಾರತದ ಅರಣ್ಯಪರ್ವ ವಿರಾಟಪರ್ವ ಉದ್ಯೋಗಪರ್ವ.

ವಿಶೇಷ : ಆದಿಪರ್ವ ಮತ್ತು ಸಭಾಪರ್ವದ ಭಾಗವುಳ್ಳ ೧–೨೦೬ ಗರಿ ಈ ಕಟ್ಟಿನಲ್ಲಿ ಇಲ್ಲ. ಶಕಟರೇಫದ ಬಳಕೆಯಿದೆ. ಅಕ್ಷರ ಸುಂದರವಾಗಿದೆ. 206–331 ಪತ್ರಗಳು ಅರಣ್ಯಪರ್ವ, 331–399 ಪತ್ರಗಳು ವಿರಾಟಪರ್ವ, 399–468 ಪತ್ರಗಳು ಉದ್ಯೋಗಪರ್ವ.

—ಜಿಜಿಎಂ

## 208

| | | |
|---|---|---|
| ಕೆ. ೯೬೪ | ಭಾರತ (ಸಭಾ, ಅರಣ್ಯಪರ್ವಗಳು) | ಭಾಮಿನೀ ಷಟ್ಪದಿ |
| ೧೯" × ೧.೩" | ಕುಮಾರವ್ಯಾಸ | ಸು. ೧೪೩೦ |
| ೬೯–೧೯೫ ಪತ್ರ | ೮ ಪಂಕ್ತಿ | ೧೨೫ ಅಕ್ಷರ |

**ಆದಿ :** ........ ಭಿ
ಜಾತಶೌರ್ಯಕೆ ಗರುವಿಕೆಗೆ ಸವಿ
ಮಾತನಾಡಿದೆ ಸಲುಉದಿದು ನಿನಗೆಂದು ಕೊಂಡಾಡಿ
ಯಿಾತನುತ್ತರವೆಶೆಗೆ ಭೀಮನು
ಶಾತಮನ್ಯುವ ದೆಶೆಗೆ ಯೆಮಳರ
ಭೀತವಿದ್ದೆಶೆನೆಂದು ವೇದವ್ಯಾಸ ನೇಮಿಸಿದಾ ॥ ೧೨ ॥

**ಅಂತ್ಯ :** ಯೆನೆ ಕೃತಘ್ನನೆ ನರಕಿ ವಿದ್ಯಾ
ಧನಮದಾಂಧನೆ ಬಾಹಿರನು ಹೊ
× × ತ ಗುರುವರಿಯು
ದನೆ ವಿಮಳಾಂಗನೆಯುರಲಿ ವಿಶ್ವಾಸಪರನೆ
ಜನವರಿಯಲಭಿಹೀನನು ಯಕ್ಷ ಕೇಳೆಂದಾ ॥ ೪೫ ॥

**ವಿಷಯ :** ಮಹಾಭಾರತದ ಸಭಾಪರ್ವ ಅರಣ್ಯಪರ್ವ.

**ವಿಶೇಷ :** 136ನೆಯ ಗರಿ ಇಲ್ಲ. 139ನೆಯ ಪತ್ರದ ಹಿಂಭಾಗ ಮತ್ತು 140ನೆಯ ಪತ್ರದ ಮುಂಭಾಗದಲ್ಲಿ ಬರವಣಿಗೆ ಇಲ್ಲ. ಅಸಮಗ್ರ. ಸುಕಷ್ಟು ತ್ರುಟಿತ. ಅಕ್ಷರ ಸ್ಪಷ್ಟವಾಗಿದೆ.

—ಜಿಜಿಎಂ

## 209

| | | |
|---|---|---|
| ಕೆ. ೧೦೫೨ | ಭಾರತ ' | ಭಾಮಿನೀ ಷಟ್ಪದಿ |
| ೨೮"×೨" | ಕುಮಾರವ್ಯಾಸ | ಸು. ೧೪೩೦ |
| ೧೯೦-೨೨೪ ಪತ್ರ | ೯ ಪಂಕ್ತಿ | ೧೩೫ ಅಕ್ಷರ |

**ಆದಿ :** ಉದ್ಯೋಗ ಪರ್ವವ ಬರೆವುದಕೆ ಶುಭಮಸ್ತು.
ನಂಬಿದವರಿಗೆ ತನ್ನ ತೆತ್ತಿಹ
ನೆಂಬ ಬಿರುದನು ಮೆರೆದು ಶಕ್ತ ಕು
ಟುಂಬಿ ಸಾರಥಿಯಾದನೊಲಿದರ್ಜುನಗೆ ಮುರವೈರಿ
ಕೇಳು ಜನಮೇಜಯ ದರಿತ್ರೀ
ಪಾಲ ಕುಂತೀ ತನುಜ ರುನ್ನತ

ದೇಳಿಗೆಯುನೇನೆಂಬೆವೈ ಕಾರುಣ್ಯಸಿಂಧುವಲಾ
ಶ್ರೀ ಲತಾಂಗಿಯುರಮಣನಿನಿಬರೊ
ಳಾಳೊಡೆಯರಾರೆಂಬ ಬೇದವ
ಬೀಳು ಕೊಟ್ಟೇ ನಡಸುತಿರ್ದನು ತನ್ನ ಮೈದುನನಾ

**ಅಂತ್ಯ :** ಅಕ್ಷರಿಯಾತ್ಮ ವಿಪಕ್ಷದಾನವ
ಶಿಕ್ಷದುಷ್ಕಲಿತ ರುಕ್ಷಪುಮನಪ
ಪಕ್ಷಲೋಕಾದ್ಯಕ್ಷಕೌಸ್ತುಬರಕ್ಷಘನವಕ್ಷಾ
ಪಕ್ಷಿರಥ ಕಮಲಾಕ್ಷ ಕಿನ್ನರ
ಯಕ್ಷ ಸುರಮುನಿರಕ್ಷ ಸುಜನಾ
ಪೇಕ್ಷ ಪಾಲಿಪುದೊಲಿದು ಗದುಗಿನ ವೀರನಾರಯಣ ॥ ೩೪ ॥
ಅಂತು ಸಂಧಿ ೧೩ಕಂ ಪದನೂ ೬೭೦ ಕಂ ಮಂಗಳ ಮಹಾಶ್ರೀ.
ಇತಿ ಶ್ರೀಮದಚಿಂತ್ಯಾ ಗದುಗಿನ ವೀರನಾರಾಯಣನ ಚರಗಾರವಿಂದ ಮಕರಂದ ಮದುಪಾನ ಪರೀಕ್ಷಿತ ಏಕೋಷಟ್ಪದನಿಕಾಯು ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ನಾಟಕ ಭಾರತ ಕಥಾ ಕುಸುಮ ಮಂಜರಿಯೊಳ್ ಗದಾಪರ್ವ ಸಂಪೂರ್ಣಂ. ಇತಿ ಭಾರತ ದಶ ಪರ್ವ ಸಂಪೂರ್ಣಂ.

**ವಿಷಯ :** ಭಾರತದ ಕಥೆ.

**ವಿಶೇಷ :** ಪ್ರತಿ ಉತ್ತಮವಾಗಿದೆ. ಪ್ರತಿಯ ಕೊನೆಯಲ್ಲಿ ಶಕ ೧೭೬೪ರಲ್ಲಿ ಮಹಿಶೂರ ಪುಸ್ತಕದ ನಾರಣಪ್ಪ ಚಾವುಬೀನೆ ಚಿಕ್ಕಣ್ಣನವರಿಗೆ ಪ್ರತಿಮಾಡಿ ಕೊಟ್ಟದ್ದೆಂದು ಹೇಳಿದೆ.

—ಹಕರಾ

## 210

| ಕೆ. ೧೦೫೪ | ಭಾರತ | ಭಾಮಿನೀ ಷಟ್ಪದಿ |
|---|---|---|
| ೨೫" × ೨.೩" | ಕುಮಾರವ್ಯಾಸ | ಸು. ೧೪೩೦ |
| ೧–೧೫೧ ಪತ್ರ | ೯ ಪಂಕ್ತಿ | ೧೦೮ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ಶ್ರೀಗಣಾಧಿಪತಯೆ ನಮಃ ಶ್ರೀಸಾಂಬ ಸದಾಶಿವಾಯನಮಃ ಭಾರತ ಆದಿಪರ್ವ ಬರೆಯುವದಕ್ಕೆ ನಿರ್ವಿಘ್ನಮಸ್ತು.
ಶ್ರೀವನಿತೆಯುರರಸನೆ ವಿಮಲರಾ
ಜೀವಪಿತನೆ ಜನಕ ಜಗಕತಿ
ಪಾವನನೆ ಸನಕಾದಿ ಸಜ್ಜನ ನಿಖಿಲದಾತಾರಾ.

ರಾವಣಾಸುರ ಮಥನ ಶ್ರವಣಸು
ದಾವಿನೂತನ ಕಥನ ಕಾರಣ
ಕಾವುದಾನತ ಜನವಗದುಗಿನ ವೀರನಾರಾಯಣಾ.

ಅಂತ್ಯ : ರತಿಯ ಸೊಬಗಂತಿರಲಿ ಪಾ
ರ್ವತಿಯ ಚಲುವಂತಿರಲಿ ಸುರಪನ
ಸತಿಯ ಮೋಹನವಿರಲಿ ಈ ಬಾಲಕಿಯ ರೂಪಿಂಗೆ
ಪ್ರತಿಯಂ ಕಾಣೆನು ಪಾಂಡವರ ದ್ರೌ
ಪತಿಗೆ ಯಿಮ್ಮಡಿಯಹಾಗಿಯಿಂದೆಯಿೂ
ಸತಿಯಂ ಚಲುವಿಕೆ ನಟ್ಟುದೆನ್ನಯ ಮನವನೆನುತಿರ್ದಾ

ವಿಷಯ : ಮಹಾಭಾರತ.

ವಿಶೇಷ : ಆದಿಪರ್ವದಿಂದ ವಿರಾಟಪರ್ವದವರೆಗಿದೆ. ಹಸ್ತಪ್ರತಿ ಅಪೂರ್ಣವಾಗಿದೆ ಅನೇಕ ಶುದ್ಧಪತ್ರಗಳಿವೆ. ಓಲೆಗಳ ಅಂಚು ಅನೇಕ ಕಡೆ ಮುರಿದಿದೆ

—ಹಕರಾ

211

| ಕೆ. ೧೧೦೦ | ಭಾರತ | ಭಾಮಿನೀ ಷಟ್ಪದಿ |
|---|---|---|
| ೨೬" × ೨" | ಕುಮಾರವ್ಯಾಸ | ಸು. ೧೪೩೦ |
| ೩೧೦ ಪತ್ರ | ೧೦ ಪಂಕ್ತಿ | ೧೫೬ ಅಕ್ಷರ |

ಆದಿ : ... ಕಾ ಉದಾತನ ಜಗವ ಗದುಗಿನ ವೀರನಾರಯಣ ॥ ೧ ॥
ವರಮಣಿಗಳಿಂದೆಸೆವ ಮೌಳಿಯು
ಸರಸಿಜಾರಿಯು ಕಿರುಣಧೂಳಿಯು
ವಿರಿಚಿಸಿದ ಸಿಂಧೂರ ಭಾಳದ ಕುಣಿವ ಕುಂತಳದ
ಕರಿನಿಭಾಕೃತಿಯೆನಿಪ ವದನದ
ಕರದ ನಾಶದ ಮೋದಕದ ವಿ
ಸ್ತರದ ಗಣಪತಿ ಮಾಡೆಮಗೆ ನಿರ್ವಿಘ್ನದಾ × ×

ಅಂತ್ಯ : ಅಜಸುರಾರ್ಚಿತ ಚರಣ ಕಮಲನು
ಭಜಕರರ್ಥಿಯನೀವ ಶರಣನು
ತ್ರಿಜಗವಂದಿತ ನಾಮಧೇಯನನಂತಗುಣನಿಳಯ
ಸುಜನವಂದಿತ ಪಾದಪೀಠನ
ನಜನ ಚಿಂತ್ಯನನಂತರೂಪನು
ನಿಜಸುಖವನೊಲಿದಿತ್ತು ಸಲಹುಗೆ ಕೇಳ್ದವರಾ
ಅಂತೂ ಸಂಧಿ ೨೮ಕ್ಕಂ ಪದನೂ ೧೨೧೬ಕ್ಕಂ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಕುಮಾರವ್ಯಾಸ ಭಾರತದ ದಶಪರ್ವಗಳು ಮತ್ತು ಶಾಂತಿಪರ್ವ.

ವಿಶೇಷ : ಕೀಲಕನಾಮ ಸಂವತ್ಸರದ ಶ್ರಾವಣಶುದ್ಧ ೧೩ ಅಂಗಾರಕ ವಾರ ಸಾಯಂಕಾಲ ವೇಳೆಯಲ್ಲಿ ಭಾರತದ ಪುಸ್ತಕ ಬರದು ಮುಗೀತು ಬರದೋನು ಉತ್ತೊಳಲಲ್ಲಿ ನಿರುದ್ಯೋಗದಲ್ಲಿಯಿದ್ದಾಗ ಭಾರತದ ಪುಸ್ತಕ ಬರದ್ದು ಬನದೋನು ಶೇಷಯ್ಯನ ಬರಹ. ಪ್ರತಿ ಪರ್ವಗಳಿಗೂ ಬೇರೆ ಬೇರೆ ಕ್ರಮ ಸಂಖ್ಯೆಯನ್ನು ಹಾಕಿದೆ. ಆದಿಪರ್ವ ೧–೩೭ ಪತ್ರಗಳು. ಸಭಾಪರ್ವ ೧–೩೭ ಪತ್ರಗಳು, ಅರಣ್ಯಪರ್ವ ೧–೪೨ ಪತ್ರಗಳು, ವಿರಾಟ ಪರ್ವ ೧–೧೯ ಪತ್ರಗಳು, ಉದ್ಯೋಗಪರ್ವ ೧–೨೧ ಪತ್ರಗಳು, ಭೀಷ್ಮ ೧–೧೯ ಪತ್ರಗಳು ದ್ರೋಣ ೧–೩೬ ಪತ್ರ, ಕರ್ಣ ೧–೩೮ ಪತ್ರ, ಶಲ್ಯ ೧–೬ ಪತ್ರ, ಗದಾಪರ್ವ ೧–೨೧ ಪತ್ರ, ಶಾಂತಿಪರ್ವ ೧–೩೫ ಪತ್ರಗಳು.

—ಜಜಎಂ

## 212

| ಕೆ. ೧೨೧೮ | ಭಾರತ | ಭಾಮಿನೀ ಷಟ್ಪದಿ |
|---|---|---|
| ೨೦"×೨.೧" | ಕುಮಾರವ್ಯಾಸ | ಸು. ೧೪೩೦ |
| ೧-೧೧೯+೧-೩೮+೧-೨೩ ಪತ್ರ | ೧೦ ಪಂಕ್ತಿ | ೯೬ ಅಕ್ಷರ |

ಆದಿ : ಕಂನ್ನಡ ಭಾರತಾ ಭಾಮಿನೀಷಟ್ಪದೀ । ಕುಮಾರವ್ಯಾಸಾ ಬರೆಯುವದಕ್ಕೆ ನಿರ್ವಿಘ್ನಮಸ್ತು. ॥ ಪದಾ ॥

ಪದಾ ॥ ಶ್ರೀ ವನಿತೆಯುರಸನೆ ವಿಮಲರಾ
ಜೀವಪೀಠನ ಪಿತನೆ ಜಗಕತಿ
ಪಾವನನೆ ಸನಕಾದಿಸಜ್ಜನನಿಕರದಾತಾರಾ
ರಾವಣಾಸುರಮಥನ ಶ್ರವಣಸು
ಧಾವಿನೂತನ ಕಥನಕಾರಣ
ಕಾವುದಾನತಜನದ ಗದುಗಿನ ವೀರನಾರಾಯಣಾ ॥ ೧ ॥

ಅಂತ್ಯ : ಧರ್ಮವೆಲ್ಲಿಹುದಲ್ಲಿ ಜಯು ಸ
ಧರ್ಮವೆಲ್ಲಿಹುದಲ್ಲಿ ಸಿರಿ ಸ
ಧರ್ಮಸದ್ರಕ್ಷಕರು ಹರಿಧೂರ್ಜ್ಜಟಿ ಪಿತಾಮಹರೂ
ಧರ್ಮದೂರರು ನಿಂನ್ನವರು ಸ
ಧರ್ಮವಿರಹಿತ ನಾವೆ ರಚಿಸಿ ವಿ
ಕರ್ಮ ದೋಷದಲಳಿದ ನಿಂನವರೆಂದನಾ ಮುನಿಪಾ ॥

ಯನಲು ಬಿದ್ದನು ಭೂಪ ಸಿಂಹಾ
ಸನದಿ ನಾ ಮುನಿವಚನಶರರುರು
ಮೊನೆಯು ಕಂಡುದು ಬಹಳ ಮೂರ್ದಾಪಾರವಶ್ಯದಲೀ
ಜನಪನಿರೆ ಗಾಂಧಾರಿ ನೃಪವಹಾ
ನಿನಿಯುರೊರಲಿತು ರಾಜಗ್ರಹ...

ವಿಷಯ : ಭಾರತದಲ್ಲಿ ಆದಿ, ಸಭಾ, ವಿರಾಟ, ಗದಾಪರ್ವಗಳಲ್ಲಿ ಬರುವ ಕಥೆಗಳು.

ವಿಶೇಷ : ಅಸಮಗ್ರ. ೧-೧೯೯ ಪತ್ರಗಳು ಆದಿ, ಸಭಾಪರ್ವಗಳೂ ೧-೩೪೮ ವಿರಾಟ ಪರ್ವವೂ ೧-೨೩ ಗದಾಪರ್ವದಲ್ಲಿ ೧೧ನೆಯ ಸಂಧಿಯಲ್ಲಿ ೭ನೆಯ ಪದ್ಯಗಳೂ ಈ ಕಟ್ಟಿನಲ್ಲಿವೆ.
[ಕ.ಹ.ಪ್ರ.ವ.ಸೂ. ತೃತೀಯ ಸಂಪುಟ ಪುಟ ೧೪೫-೧೭೧, ಕ್ರಮಾಂಕ 1156_1181 ನೋಡಿ]

—ಕೆಆರ್‌ಎಸ್

## 213

| ಕೆ. ೧೨೪೩ | ಭಾರತ | ಭಾಮಿನೀ ಷಟ್ಪದಿ |
|---|---|---|
| ೧೫.೩"×೨.೨" | ಕುಮಾರವ್ಯಾಸ | ಸು. ೧೪೩೦ |
| ೧೭೧ ಪತ್ರ | ೧೩ ಪಂಕ್ತಿ | ೧೦೦ ಅಕ್ಷರ |

ಆದಿ : ಶ್ರೀಶಾರದಾಗುರುಭ್ಯೋನಮಃ × × ಭೀಷ್ಮಪರ್ವ ಬರೆಯುವದಕ್ಕೆ ಶುಭಮಸ್ತು ॥
ವೈರಭಟಕುಲನಿಳಿಯ ರುದ್ರನು
ದಾರ ತೇಜೋಬದ್ಧನಾ ಭಾ
ಗೀರಥಿಯ ಮಗ ದರುಶಿದನು ಕುರುಶೇನೆಯೊಡೆತನವ ॥

ಅಂತ್ಯ : ಯಿವರು ಬೀಷ್ಮನ ಬೀಳುಕೊಂಡು
ತ್ರವದ ಹರುಷದಲೊಂಮೆ ಗಂಗಾ
ಭವಗೆ ತಪ್ಪಿದ ದುಗುಡ ಭಾರದೊಳೊಮ್ಮೆ ಚಿಂತಿಸುತ ॥
ಕವಲುಮನದಲಿ ಕಂಪಿಸುತ ಬೀ
ರವನು ಹೊಕ್ಕುರು ನಿಖಿಳ ಸೇನಾ
ನಿವಹಸಹಿತಲಿ ವೀರನಾರಾಯಣನ ಕರುಣದಲಿ ॥ ೪ ३॥
ಅಂತು ಸಂಧಿ ೭ಲಕ್ಕಂ ಪದನು ೨೭೭ಕ್ಕಂ ಮಂಗಳ ಮಹಾಶ್ರೀ ಶ್ರೀ.
ಕೀಲಕಸಂವತ್ಸರದ ಆಷಾಢ ಬಹುಳ ೧೨ ಗುರುವಾರ ಹಗಲು ಮಧ್ಯಾನ್ಹದ ಸಮಯದಲ್ಲಿ ನಿಡಗಲ್ಲು ತಾಲ್ಲೂಕು ಪೈಕಿ ಮಂಗಳವಾಡದ ಸಂಮತು

ಶ್ಯಾನುಭಾಗ ನರಸಪ್ಪನು ಶೀರ್ಯದ ತಾಲ್ಲೂಕು ಪೈಕಿ ಬರಗೂರು ಸಂಮತು ಕಸಬಾ ಬರಗೂರು ಶ್ಯಾನುಭಾಗ ಸುಬ್ಬಂಣನವರಿಗೆ ಬರದುಕೊಟ್ಟ ಕರ್ಣಪರ್ವ ಪುಸ್ತುಕ ಸಂಪೂರ್ಣವಾಗಿಯಿಧೆ ಮಂಗಳ ಮಹಾಶ್ರೀ ಶ್ರೀ.

ವಿಷಯ : ಕುಮಾರವ್ಯಾಸ ಭಾರತದ ಭೀಷ್ಮಪರ್ವ, ದ್ರೋಣಪರ್ವ, ಕರ್ಣಪರ್ವಗಳು.

ವಿಶೇಷ : ಪ್ರತಿ ಚೆನ್ನಾಗಿದೆ.

—ಜಿಜಿಎಂ

214

| ಕೆ. ೧೨೪೪ | ಭಾರತ | ಭಾಮಿನೀ ಷಟ್ಪದಿ |
|---|---|---|
| ೧೯.೫"×೧.೯" | ಕುಮಾರವ್ಯಾಸ | ಸು. ೧೪೩೦ |
| ೧-೨೪೩ ಪತ್ರ | ೮ ಪಂಕ್ತಿ | ೧೦೦ ಅಕ್ಷರ |

ಆದಿ : .. ಕುಂತಿತನೆಯರುನ್ನತ
ದೇಳಿಗೆಯನೇನೆಂಬೆನೈ ಕಾರುಣ್ಯಸಿಂಧುವಲಾ
ಶ್ರೀಲತಾಂಗಿಯ ರಮಣನಸಿಬರೊ
ಳಾಳೊಡೆಯರಾರೆಂಬ ಭೇದವ
ಬೀಳುಕೊಟ್ಟೇ ನಡುಸುತಿದ್ದನು ತಮ್ಮ ಮೈದುನನ ॥ ೧ ॥

ಅಂತ್ಯ : ದೇವಸಂತತಿ ನಲಿಯೆ ಪಾಂಡ
ವಿಹರಿಯೆಂಬ ಪ್ರತಿಜ್ಞೆಯ
ರಾವು ಸಂದುದು ಧರ್ಮಜನ ಪಟ್ಟಾಭಿಷೇಕದಲಿ
ಕೇಳು ಜನಮೇಜಯ ಧರಿತ್ರೀ
ಪಾಲ ಹಿಮಗಿರಿ ತೊಡಗಿ ಸಾಗರ
ವೇಳು ಪರಿಯಂತಖಿಳ .... ರಾಮಪುರವರ
ಮೇಲುವರ್ನ ಪ್ರಮುಖನಾ ಚಾಂ
ಡಾಲರವದಿ ಸಮಸ್ತ ಭೂಜನಖಿಳ
ಹಸ್ತಿನ ಪುರಕೆ ಬಂದುದು ಕಂಡುದವನಿಪನ ॥ ೧ ॥
ಚ್ಯವನ ಮೌದ್ಗಲ ಕಲ್ಪೋಮುನಿ ಭಾ
ರ್ಗವ ಭರದಾಜಾಂಗೀರಸ ...

ವಿಕ್ರಮ ಸಂ॥ ಮಾರ್ಗಶಿರ ಬ ೫ಲೂ ಡಣಾಯಕನ ಕೋಟೆಯಲಿ ಯಿರುವ ನಂಜ ನಾಯಕನ ಪೊಸ್ತುಗಕೆ ಜಯ ಮಂಗಲಂ × × ಯಿಶ್ವರ ಸಂ ಆಶ್ವೀಜ ಬ ೧೦ಲ್ಲೂ ಡಣಾಯಕನ ಕೋಟೆ ನಂಜನಾಯಕನು ಕ್ರಯಕ್ಕೆ ತೆಗದ್ದು ತಂಮ ಕುಮಾರ ನಂಜೈಯನು ಜನಾರ್ಧನ ಭಕ್ತಿಯಲ್ಲಿ ವೋದುಕೊಂಡು

ಯಿಂರಲ್ಲಿಯಂಬುದಾಗಿ ಮಹಾಭಾರತದ ಪುಸ್ತುಕದಲ್ಲಿ ಯಂದ್ಧ ಪರ್ವ ಉದ್ಯೋಗಪರ್ವ ಸಹ.

ವಿಷಯ : ಭಾರತದಲ್ಲಿ ಉದ್ಯೋಗಪರ್ವ ಮತ್ತು ಯುದ್ಧ ಪಂಚಕ.

ವಿಶೇಷ : ಅಸಮಗ್ರ.

—ಜಿಜಿಎಂ

## 215

| ಕೆ. ೧೩೧೫ | ಭಾರತ | ಭಾಮಿನೀ ಷಟ್ಪದಿ |
|---|---|---|
| ೧೮.೨"×೧.೫" | ಕುಮಾರವ್ಯಾಸ | ಸು. ೧೪೩೦ |
| ೧-೨೦೪ ಪತ್ರ | ೬ ಪಂಕ್ತಿ | ೧೨೪ ಅಕ್ಷರ |

ಆದಿ : ಶ್ರೀ ಗಣಾಧಿಪತಯೆನಮಃ ॥ ಭೀಷ್ಮಪರ್ವಾ ಬರಿಯಂವದಕ್ಕೆ ಶುಭಮಸ್ತು ॥
ವೈರಿಭಟಕುಲವಿಲಯ ರುದ್ರನು
ದಾರ ತೇಜೋಭದ್ರನಾ ಭಾ
ಗೀರಥಿಯ ಸುತ ಧರಿಸಿದನು ಕುರುಸೇನೆಗೊಡೆತನವ ॥ ಪಲ್ಲಾ
ಕೇಳು ಜನಮೇಜಯ ಧರಿತ್ರೀ
ಪಾಲ ಕೌರವರಾಯಂನಲ್ಲಿಗೆ
ಕಾಳಗದ ಕಾತರಿಗರಿವರಟ್ಟಿದರು ದೂತರನು
ಕೇಳಿದನು ಕುರುಭೂಮಿಯಲಿ ರಿಪು
ಜಾಲದೀದಯುವನಂದು ಕುರುಕುಲ
ಮೌಳಿ ಬರಿಸಿದನಾಪ್ತರನು ಪರಿಮಿತಕೆ ಮಂತ್ರಿಗಳ ॥ ೧ ॥

ಅಂತ್ಯ : ಕೆದರುತಟೆ ನಮವರ ಬಲದೊರೆ
ಯಧಲು ನೂಕಿತಾ ರಾಯಂನೊಬ್ಬನ
ಕದನದಲಿ ಕೈದೋರಿ ಖಂಡಿಸಿದನು ಮಹಾರಥರ
ಹೆದರುತಳಿದುದು ಲಗ್ಗೆ ಪರೆವತಾ
ನದಲಿ ಮಗುಳ್ಪವು ಪಾ
ರ್ಥ ದಿವ್ಯಾಸ್ತ್ರದಲಿ ಕೈಮಾಳೆಂದು ನುಡಿದನು ವೀರನಾರಣ ॥ ೭೭
ಅಂತೂ ಸಂಧಿ ೩ಕ್ಕಂ ಪದನೂ ೧೭೬ಕ್ಕಂ ಶಲ್ಯಪರ್ವ ಸಮಾಪ್ತಃ ಮಂಗಳ ಮಹಾ ಶ್ರೀ ಶ್ರೀ

ವಿಷಯ : ಭಾರತದ ಯಂದ್ಧ.

ವಿಶೇಷ : ಕುಮಾರವ್ಯಾಸ ಭಾರತದ ಭೀಷ್ಮಪರ್ವ, ದ್ರೋಣಪರ್ವ, ಕರ್ಣಪರ್ವ ಶಲ್ಯಪರ್ವಗಳು ಈ ಕಟ್ಟಿನಲ್ಲಿವೆ.

—ಜಿಜಿಎಂ

216

| ಕೆ. ೧೩೪೪ | ಭಾರತ (ವಿರಾಟ ಪರ್ವ) | ಭಾಮಿನೀಷಟ್ಪದಿ |
|---|---|---|
| ೧೮.೮" × ೧.೪" | ಕುಮಾರವ್ಯಾಸ | ಸು. ೧೪೩೦ |
| ೧–೩೪೧ ಪತ್ರ | ೯ ಪಂಕ್ತಿ | ೮೬ ಅಕ್ಷರ |

ಆದಿ : ಶ್ರೀ ವೇದಾಂತ ಗುರುವೇ ನಮಃ ॥ ಶ್ರೀ ರಂಗನಾಥಸ್ವಾಮಿ ಪಾದಾರ ವಿಂದವೇ ಗತಿ ॥ × × × ಕಾಯಿದರು ಸತ್ಯವನು ವನವಾಸಾಯತವ ನೆರೆಗೆಲಿದು ಪಾಂಡವರಾಯರೋಲೈಸಿದರು ಬಂದು ವಿರಾಟನಗರಿಯಲೀ ॥
ದೇವ ದೇವರ ದೇವ ಶಂಕರ
ಪಾವಕಾಂಬಕ ಭಕ್ತವತ್ಸಲ
ಭಾವ ಜಾಹರ ಭವವಿನಾಶನ ಭುವನಜನ ರಕ್ಷಾ
ದೇವ ಸುರ ನರ ನಾಗಯುತ ರಾ
ಜೀವ ಪದಯುಗ ಪಾರ್ವತೀಪ್ರಿಯ
ದೇವ ಸಲಹೈ ನಮ್ಮ ಜ್ಯೋತಿರ್ಮಯ ಮಹಾಕಾಯಾ ॥ ೧ ॥

ಅಂತ್ಯ : ತಿಳುಹಿ ..... ಯನ ಹೃದಯಸಂಚಿತ
ಕಲುಷವನು ಖಂಡಿಸಿ ಗತಾಕ್ಷನ
ಬಲಿದ ಚಿತ್ತವ್ಯಥೆಯನಾಜಿಸೀ ನೃಪ ವಧೂಜನವಾ
ಆಳಲನಾಜಿಸಿ ಗಜಪುರದ ನೃಪ
ನಿಳಯವನು ಹೊಗಿಸಿದನು ಯದು
ಕುಲತಿಲಕ ಗದುಗಿನ ವೀರ ನಾರಾಯಣನ ಕರುಣದಲಿ ॥ ೨೫ ॥
ಅಂತು ಸಂಧಿ ೧೦ಕ್ಕಂ ಪದ ೫೭೫ಕ್ಕಂ ಮಂಗಳ ಮಹಾಶ್ರೀ × × ×
ಚ್ಯವನ ಮೌದ್ಗಲ ಕಣ್ವ ವರ ಭಾ
ರ್ಗವ ಭರದ್ವಾಂಜಾಂಗಿರಸ ಗಾ
ಲವ ಪುಲಸ್ತ್ಯ ವಸಿಷ್ಟನತ್ರಿಜ ಯಾಜ್ಞವಲ್ಕ್ಯಮುನಿ
ಧ್ರುವ ವಿಬಾಂಡುತ ಗಾರ್ಗ ಪುಟಸಂ
ಭವ ಮೃಕಂಡುಸುತಾದಿ ಭೂಪು
ಪ್ರವರ ಮುನಿಗಳು ಬಂದು ಕಂಡುದು ಧರ್ಮಜನಂದನನಾ ॥ ೨ ॥

ವಿಷಯ : ಪಾಂಡವರ ಅಜ್ಞಾತವಾಸ ಹಾಗೂ ಅಭಿಮನ್ಯುವಿನ ವಿವಾಹದ ಕಥೆ.

ವಿಶೇಷ : ಪತ್ರ ೬೮, ೬೯, ೭೦—ಅರ್ಧ ಮುರಿದು ಶಿಥಿಲವಾಗಿವೆ. ಶಕಟರೇಫದ ಬಳಕೆಯಿದೆ. ಸ್ಫುಟಾಕ್ಷರ.

—ವೈಸಿಬಿ

217

| | | |
|---|---|---|
| ಕ. ೧೪೬೨ | ಭಾರತ (ದ್ರೋಣಪರ್ವ) | ಭಾಮಿನೀಷಟ್ಪದಿ |
| ೧೨.೮″ × ೧.೪″ | ಕುಮಾರವ್ಯಾಸ | ಸು. ೧೪೩೦ |
| ೧–೨೪೪ ಪತ್ರ | ೭ ಪಂಕ್ತಿ | ೬೪ ಅಕ್ಷರ |

ಆದಿ : ದ್ರೋಣಪರ್ವ ॥
ರಾಯ ಕಟಕಾಚಾರ್ಯ್ಯ ॥ ಶ್ರೀ ಶಾರದಾ ಗುರುಭ್ಯೋನಮಃ ॥
ರಾಯ ಕಟಕಪಿತಾಮಹನ ತರು
ವಾಯಃ ಅಭಿಷೇಕವನು ಕೌರವ
ರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನಾ ॥
ಪದನೂ ॥ ಸೋಲಿಸಿತೆ ಕರ್ನಾಮೃತದ ಮಳೆ
ಗಾಲ ನಿಸ್ನಯ ನೆರೆ ಕಿವಿಗಳನು
ಕೇಳಿದೈ ಕೌರವನ ಕದನದ ಬಾಲಕೇಳಿಗಳಾ
ಹೇಳುವದು ತಾನೇನು ಕೆಂಗರಿ
ಗೋಲ ಮುಂಚದ ಮಹಿಮನಿರವನು
ಮೇಲು ಪೋಗಿನ ಕಥೆಯನವಧಾನದಲಿ ಕೇಳೆಂದಾ ॥ ೧ ॥

ಅಂತ್ಯ : ನುಡಿಯಬಾರದು ಕೃಷ್ಣನಾಜ್ಞೆಗೆ
ಬಿಡು...... ಮದೆ ತನ್ನ ನಿಳಯಕೆ
ನಡದು ಕುಂಬನಿಗರದು ಧರಣಿಗೆ ತನುವಸೀಡಾಡೀ
ವೊಡೆಯನುಟ್ಟಿ ಹಿರಿಯ ನಳಿವಿನ
ಕಡು ನಿರೋಧವ ಕಂಡು ತನಗಿದ
ನುಡಿಯಬಾರ...... ॥ ೩೩ ॥

ವಿಷಯ : ಭಾರತದಲ್ಲಿ ದ್ರೋಣನು ಸೇನಾಧಿಪತಿಯಾಗಿ ಯುದ್ಧಮಾಡಿ ಮಡಿದ ವರೆಗಿನ ಕಥೆ,

ವಿಶೇಷ : ೨೬ನೇ ಸಂಧಿಯುವರೆಗೆ ಪೂರ್ಣವಾಗಿದ್ದು ಮುಂದೆ ೨೭ನೆಯ ಸಂಧಿಯಲ್ಲಿ ೩೩ ಪದ್ಯಗಳು ಮಾತ್ರವಿದೆ. ೧೨೪ನೆಯ ಪತ್ರದಲ್ಲಿ ಬರಹವಿಲ್ಲ. ಅಲ್ಲಿ ಗ್ರಂಥಲೋಪವಾಗಿದೆ. ಅಲ್ಲಲ್ಲಿ ಹುಳು ತಿಂದಿದೆ. ಬರಹ ಸ್ಫುಟವಾಗಿದೆ.

—ಕೆಆರ್‌ಎಸ್

218

| ಕೆ. ೧೬೭೭ | ಭಾರತ (ಭೀಷ್ಮ, ಕರ್ಣಪರ್ವ) | ಭಾಮಿನೀಷಟ್ಪದಿ |
|---|---|---|
| ೧೯" × ೨.೪" | ಕುಮಾರವ್ಯಾಸ | ಸು. ೧೪೩೦ |
| ೧–೧೩೪ ಪತ್ರ | ೧೦ ಪಂಕ್ತಿ | ೧೧೪ ಅಕ್ಷರ |

ಆದಿ : ಶ್ರೀಮಂದ್ರಾಮಾನುಜ ಗುರವೆ ನಮಃ ॥ ಭೀಷ್ಮಪರ್ವ ಪ್ರಾರಂಭ ।
ಸೂಚನೆ ॥

ವೈರಿಭಟಕುಲ ರುದ್ರನಿಲಯನು
ಧಾರ ತೇಜೋಭದ್ರನಾ ಭಾ
ನೀರಥಿಯ ಮಗ ಧರಿಸಿದನು ಕುರುಸೇನೆಯೊಡೆತನವಾ ॥

ಪದನೂ ॥

ಕೇಳು ಜನಮೇಜಯ ಧರಿತ್ರೀ
ಪಾಲ ಕೇಶವರಾಯನಲ್ಲಿಗೆ
ಕಾಳೆಗದ ಕಾತರಿಗರಿವ ನಟ್ಟಿದನು ಭಟ್ಟ......
ಕೇಳಿದನು ......ಲಿರಿಸು
ಜಾಲದುರಯುವನಂದು ಕುರುಕುಲ
ಮೌಳಿ ಕರಸಿದನಾ ಪರಮುಪರಿಮಿತಕ ಮಂತ್ರಿಗಳಾ ॥ ೧ ॥

ಅಂತ್ಯ : ಕುರುಪತಿಯು ಕಡುಂದುಃಖಮಯ ಸಾ
ಗರದೊಳದ್ದನು ಪಾಂಡುಪುತ್ರರ
ಹೊರೆಗೆ ಬಂದನು ಕೃಷ್ಣ ಮಾಯಶೋಕಪಾವಕನಾ
ಅರಿದು ಬ್ರಹ್ಮಗ್ಯಾನದಿಂದೆ
ಚ್ಚರಿಸಿದನು ಧರ್ಮಜ ಯಾದ
ವರರಸ ಗದುಗಿನ ವೀರನಾರಾಯಣನು ಕರುಣದಲೀ ॥ ೪೪ ॥
ಅಂತು ಸಂಧಿ ೨೭ಕ್ಕಂ ಪದನು ೧೭೪೧ಕ್ಕಂ ಜಯಮಂಗಳ ಮಹಾಶ್ರೀ ॥ × × × ಶ್ರೀವೇದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದಮಕರಂದ × × × ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ ಕರ್ನಾಟ ಭಾರತ ಕಥಾಮಂಜರಿಯೊಳ್ ಕರ್ನಪರ್ವ ಸಂಪೂರ್ನ್ನಂ ಮಂಗಳಾ ॥

ವಿಷಯ : ಮಹಾಭಾರತದಲ್ಲಿ ಭೀಷ್ಮಪರ್ವ ಮತ್ತು ಕರ್ಣಪರ್ವಗಳ ಕಥೆ.

ವಿಶೇಷ : ಕೆಲವು ಪತ್ರಗಳ ಅಂಚುಗಳು ತ್ರುಟಿತವಾಗಿವೆ. ಕೃತಿ ಸಮಗ್ರವಾಗಿದೆ. ಬರವಣಿಗೆ ಸುಂದರವಾಗಿದೆ.

—ಎಂಪಿಎಂ

## 219

| | | |
|---|---|---|
| ಕ. ೧೬೩೦ | ಭಾರತ (ಭೀಷ್ಮ, ದ್ರೋಣಪರ್ವ) | ಭಾಮಿನೀಷಟ್ಪದಿ |
| ೧೫" × ೧.೧" | ಕುಮಾರವ್ಯಾಸ | ಸು. ೧೪೩೦ |
| ೧೮–೧೫೫ ಪತ್ರ | ೮ ಪಂಕ್ತಿ | ೬೬ ಅಕ್ಷರ |

ಆದಿ : ವಡಗುದರಿದಲು ಮೋಹ
ರಹಕ್ಕಲಾದುದು ಹರಿದು ಸಬಳಿಗರಿದು ತೋರಿದರೂ ॥ ೪೫ ॥
ಬವಲಿಯಲಿ ಪೈಸರಿಸಿ ಪರಘಂ
ಯುವನಂ ವಂಚಿಸಿ ಭಟರಸಿರಿದೆ
ತ್ತುವರು ಕೈಮಾಡಿದರೆ ಶಿವಿವರ ಕೋಡ ಕೈಯ್ಯುವರಾ
ಕವಿಯು ತಾಕುವ ತಾಕಿದರೆ ತ
ಗ್ಗುವರು ತಗ್ಗಿದರೊಡೆನೊಡನೆ ಜಾ
ರುವರು ಜಿಣಗಿದರೆ ಕೈದೆ ಶಿವಿದಾಡಿದರು ತಮತಮಗೇ ॥ ೪೬ ॥

ಅಂತ್ಯ : ಆವ ಶರದಲಿ ಕೊರತೆ ನೀನವ
ರಾವ ಬಲದಲಿ ಕುಂದು ಭುವನದೊ
ಳಾವನೈ ಸಮಜೋಡಿ ಸಿಂನ್ನರಮನೆಯ ಸುಭಟರಿಗೇ
ಆವನಿಂದೇನಹುದು ಜಗದಧಿ
ದೈವದಲಿ ಸೆಣಸಿದಿರಿ ಪಾಂಡವ
ಜೀವಿಯೆಂದರಿದರಿದು ಗದುಗಿನ ವೀರನಾರಾಯಣನೆ ॥ ೫೬ ॥
ಅಂತು ಅಧ್ಯಾಯ ೨೨ ಕಂ ಪದನೂ ೧೨೦೬ ಕಂ ಮಂಗಳ ಮಹಾಶ್ರೀಶ್ರೀ.

ವಿಷಯ : ಭಾರತದಲ್ಲಿನ ಭೀಷ್ಮ, ದ್ರೋಣಪರ್ವಗಳ ಕಥೆ.

ವಿಶೇಷ : ಅಸಮಗ್ರಪ್ರತಿ. ಪ್ರತಿ ಚೆನ್ನಾಗಿದೆ.

—ವೈಸಿಬಿ

## 220

| | | |
|---|---|---|
| ಕ. ೧೬೩೬ | ಭಾರತ (ಕರ್ಣಪರ್ವ) | ಭಾಮಿನೀಷಟ್ಪದಿ |
| ೧೪.೪" × ೧.೪" | ಕುಮಾರವ್ಯಾಸ | ಸು. ೧೪೩೦ |
| ೧–೫೮ ಪತ್ರ | ೬ ಪಂಕ್ತಿ | ೫೪ ಅಕ್ಷರ |

ಆದಿ : ಭಾರತದಲ್ಲಿ ಕರ್ನಪರ್ವ ಬರೆಯುಂದಕ್ಕೆ × × × ಶುಭಮಸ್ತು ॥
ರಾಯ ಕಟಿಕಾಚಾರಿಯುನಂ ತರು
ವಾಯ ಸೇನಾಪಟ್ಟವನು ರಾ
ದೇಯುನಲಿ ರಚಿಸಿದನು ಮುಂದದಲಿ ಕೌರವರರಾಯಹಾ ॥

ಪದನೂ ॥ ಕೇಳುಂ ಜನಮೇಜಯಂ ಧರಿತ್ರೀ
ಪಾಲ ತೆಗದುದು ಬಲವೆರಡು ನಿಜ
ಪಾಳೆಯಕೆ ಪರಿತೋಷಭೇದಸ್ಮಿಮಿತ ವಿಗ್ರಹರೂ ॥

ಅಂತ್ಯ : ಉಗಿದನುರಗಾಸ್ತ್ರವನು ಹೊಂಮೂ
ಡಿಗೆಯೊಳಗೆ ಹೊದರ್ಕೈಯ ಘಾ
ಳಿಗೆ ಹೊರತೆಯು ಘಾಳಿಗೆ ಕ್ಷಿತಿಯುಹೊದರಿನ ಹೂಳಿ ಹಚ್ಚಿತುಂ ಕೂಡೆ ಕಿಡಿ
ಯೀಡುತಾ
ಗಗನಗಮನದ ನಿಖಿಳ ವಿಹಗಾಳಿ ಸೀದಲು ಗಾಢ
ಗಮನದ ಸೊಗಸಸೋಹಿಗೆ ಕಂಠಳಿಸಿ ತೊರಡೊಡ್ಡು ಕಳವಳೀ ॥ ೪ ॥
ಬೆರಳಲುಬ್ಬನು ತೂಗಲುರಿಪೂ
ತ್ಕರಣೆಯಲಿ ಕಂಠಿಸಿತು ಸಿಡಿಲಿನ
ಧರಧುರದೊಳುನೆ

ವಿಷಯ : ಭಾರತದಲ್ಲಿ ಕರ್ಣಪರ್ವ.

ವಿಶೇಷ : ಅಸಮಗ್ರ. ಪ್ರತಿ ಚೆನ್ನಾಗಿದೆ. ೨೪ನೆಯ ಸಂಧಿ ಪೂರ್ತಿ ಇದೆ.

—ಜಿಜಿಎಂ

## 221

| ಕೆ. ೧೭೪೮ | ಭಾರತ (ವಿರಾಟಪರ್ವ) | ಭಾಮಿನೀಷಟ್ಪದಿ |
|---|---|---|
| ೧೭.೩ × ೧.೩" | ಕುಮಾರವ್ಯಾಸ | ಸು. ೧೪೩೦ |
| ೧–೮೧ ಪತ್ರ | ೫ ಪಂಕ್ತಿ | ೮೨ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ ॥ ಶ್ರೀ ಶಾರದಾಂಬಾಯಂ ನಮಃ ॥ ಭಾರತ
ದಲ್ಲಿ ವಿರಾಟಪರ್ವ ಬರೆಯುಂವದಕ್ಕೆ ಶುಭಮಸ್ತು ॥ ಶೋಭನಮಸ್ತು × ×
ಕಾಳಿಎಯುಕ್ತಿ ಸಂ॥ರದ ಮಾರ್ಗಶಿರ ೫ರಲ್ಲು ಪ್ರಾರಂಬಾ

ಸೂಚನೆ ॥ ಕಾಯಿದರು ಸತ್ಯವನು ವನವಾ
ಸಾಯುಂತವನುರಗ್ಯೆದುಂ ಪಾಂಡವ
ರಾಯರೋಲೈಶಿದರು ಬಂದುಂ ವಿರಾಟನಗರಿಯಲ್ಲ ॥

ಪ ॥ ಕೇಳುಂ ಜನಮೇಜಯಂ ಧರಿತ್ರೀ
ಪಾಲ ಮುನಿಜನ ಪರಿಜನಂಗಳ
ಬೀಳುಕೊಟ್ಟನುಂ ಭೂಮಿಪತಿ ಬಲಬಂದುಂ ಹುತವಹನಾ
ಮೇಲುಂ ಶಕಿನದ ಚಾರು ನಿನದವ
ನಾಲ್ಕುಸುತ ಸೋದರರು ಸಹಿತ ವ
ನಾಲಯಂವ ಹೊರಮಟ್ಟು ಸಾರಿದರೊಂದು ವಟಕುಜವಾ ॥

ಅಂತ್ಯ : ಆದುದಭಿಮನ್ಯುವಿನ ಮಂದುವೆ ಮ
ಹಾದಯಾಂಬುಧಿ ಕೃಷ್ಣರಾಯನ
ಪಾದದರುಶನವಾಗಲುಂ ನುಡಿಶಿತ್ತು ನಂಮುದಯಾ
ಮೇಧಿನಿಯನಾವತ್ತೆಯಿದೈವು
ಕಾದುಕೊಂಡೆವು ಸತ್ಯವನು ಮೋ
ಲಾದುದನು ನೀ ಒಲ್ಲೆಯಂದನು ವರನಾರಾಯಣಾ ॥
ಅಂತು ಸಂಧಿ ೧೨ಕಾಂ ಪದನೂ ೭೩೧ಕಾಂ ಮಂಗಳ ಮಹಾಶ್ರೀ ಕಾಳಾಯುಕ್ತಿ ಸಂ॥ರದ ಪುಷ್ಯ ಶು ೩ಲ್ಲು ಚಿಕ್ಕೀನಹಳ್ಳಿ ಶಿದ್ದರಾಮಪ್ಪನವರು ನೆಲಮಂಗಲ ಅಕ್ಕಸಾಲೆ ಬೂದಿಹಾಳು ನಂಜಪ್ಪನವರ ಮಂಮಗ ಕಾಡೀರನಿಗೆ ಬರದುಕೊಟ್ಟಂತಾ ವಿರಾಟಪರ್ವ ಸಂಪೂರ್ನ ಶ್ರೀ ಶ್ರೀ.

ವಿಷಯ : ಭಾರತದಲ್ಲಿನ ವಿರಾಟಪರ್ವದ ಕಥೆ.

ವಿಶೇಷ : ಸಮಗ್ರ. ಪ್ರತಿ ಸಾಧಾರಣ ಸ್ಥಿತಿಯಲ್ಲಿದೆ.

—ವೈಸಿಬಿ

## 222

ಕೆ. ೧೭೪೯ | ಭಾರತ (ಸಭಾಪರ್ವ) | ಭಾಮಿನೀಷಟ್ಪದಿ
೧೭" × ೧.೩" | ಕುಮಾರವ್ಯಾಸ | ಸು. ೧೪೩೦
೧೯೮ ಪತ್ರ | ೬ ಪಂಕ್ತಿ | ೭೮ ಅಕ್ಷರ

ಆದಿ : ಶ್ರೀ ಶಾರದಾ ಗುರುಗಣೇಶಾಯ ನಮಃ । ಶ್ರೀ ಸೀತಾ ಲಕ್ಷ್ಮಣ ಭರತ ಶತೃಘ್ನ ಹನುಮತ್ಸಮೇತ ಶ್ರೀರಾಮಚಂದ್ರಸ್ವಾಮಿನೆ ನಮಃ ॥ ಶ್ರೀ ವಿದುರಾಶ್ವಥ್ಥ ನಾರಾಯಣಸ್ವಾಮಿನೇ ನಮಃ ॥ × × × ಸಭಾಪರ್ವಕ್ಕೆ ಶುಭಮಸ್ತು × × ×

ಸೂಚನೆ ॥ ಸಭೆಯೊಳೋಲಗದಲಿ ವಿರಿಂಚಿ
ಪ್ರಭುವಿನನುಮತದಿಂದ ಧರಣೀ
ವಿಭು ಮಹಾಕ್ರತು ರಾಜಸೂಯ್ಯವನೊಲಿದು ಕೈಕೊಂಡಾ ॥

ಪದನೂ ॥ ಕೇಳು ಜನಮೇಜಯ ಧರಿತ್ರೀ
ಪಾಲ ಖಾಂಡವನದ ವಂಸ್ಥಿ
ಜ್ವಾಲೆ ತೆಗದುಂದು ಕೂಡೆ ಹೋಗದು ಹೋದರೆ ಹಾಸವಳಿಯಾ
ಮೇಲುಗಾಳಗದುಬ್ಬಿನಲಿ
ಲೋಲಸಹಿತರ್ಜುನನು ವಿಕ್ರಮ
ದೇಳಿಗೆಯ ಪರಿತೋಷದಲಿ ಮರಳಿದರು ಪಟ್ಟಣಕೇ ॥ ೧ ॥

**ಅಂತ್ಯ:** ಮುನಿಪ ನೋಡುತ ಪೋದನಗ್ನಿಯ
ವಿನುತ ದೂತ್ತವನೆತ್ತುಗೈದು
ವಿನನಿಲಜನು ದುಗುಡದಲ್ಲಿ ಫಲುಗುಣಿಯುಮಳರೊಗ್ಗಾಗೀ
ವನಿತೆಯನು ನಡುವಿಟ್ಟು ಹೊರವಂ
ಟನು ಯುಧಿಷ್ಠಿರನೆನೆ ನೃಪತಿ ಸಂತ
ತ ನೆನವುಕಿದ್ರ್ಪನು ರಾಯ ಗದುಗಿನ ವೀರನಾರಾಯಣನಾ ॥ ೮೦ ॥
ಅಂತೂ ಸಂಧಿ ೧೭ಕ್ಕಂ ಪದನೂ ೧೨೫೭ಕ್ಕಂ ಮಂಗಳ ಮಹಾಶ್ರೀಶ್ರೀ. × × × ಇತಿ ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರ ವಿಂದ ಮಕರಂದ ಮಧುಪಾನ ಪರೀಕ್ಷಿತ ವರ್ಚಿ ಷಟ್ಪದನಿಕಾಯ ಶ್ರೀಮತ್ಕು ಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ ಕರ್ನಾಟಕ ಕವಿ ಭಾರತ ಕಥಾ ಮಂಜರಿಯೊಳು ಸಭಾಪರ್ವ ಮಂಗಳ ಮಹಾಶ್ರೀ × × × ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ವರುಷಂಗಳು ೧೭೭೩ನೆ ದುರ್ಮತಿ ಸಂವತ್ಸರದ ಕಾರ್ತೀಕ ಶು ೧ ಭಾನುವಾರದವರಿಗೆ ಮದ್ದಗಿರಿ ತಾಲ್ಕುವಳಿತ ವಾದ ದೊಡ್ಡಮಲ್ಲೂರು ಶಾನುಭಾಗ ಭಾನಪ್ಪನವರ ಕುಮಾರ ಪುಟ್ಟಂಣನು ಯಲಹಂಕದ ಕಸಬೆ ವೆಂಕಂಣನವರ ಕೊಮಾರ ಶೀನಪ್ಪಗೆ ಬರಕೊಟ್ಟ ಸಭಾಪರ್ವಕ್ಕೆ ಶ್ರೀರಸ್ತೂ ॥

**ವಿಷಯ :** ರಾಜಸೂಯಯಾಗದ ಕಥೆ.

**ವಿಶೇಷ :** ಸಮಗ್ರಪ್ರತಿ. ಇದೇ ಕಟ್ಟಿನಲ್ಲಿ ಕಂತಿ ಹಂಪನ ಸಮಸ್ಯೆ ಇರುವ ಒಂದು ಪತ್ರವಿದೆ.

—ವೈಸಿಬಿ

## 223

| ಕೆ. ೧೭೫೫ | ಭಾರತ(ಕರ್ಣಪರ್ವ) | ಭಾಮಿನೀಷಟ್ಪದಿ |
|---|---|---|
| ೧೩" × ೧.೪" | ಕುಮಾರವ್ಯಾಸ | ಸು. ೧೪೩೦ |
| ೧–೧೪೪ ಪತ್ರ | ೬ ಪಂಕ್ತಿ | ೭೦ ಅಕ್ಷರ |

**ಆದಿ :** ಶ್ರೀ ಗಣಾಧಿಪತಾಯ ನಮಃ ॥ × × × ಭಾರತದಲ್ಲಿ ಕರ್ನ್ನಪರ್ವ ಬರೆಯುವದಕ್ಕೆ ಆಯುರಾರೋಗ್ಯ ಐಶ್ವರ್ಯಾಭಿರಸ್ತೂ ॥
ಪಲ್ಲವಾ ॥ ಶ್ರೀರಾಮಾ ॥
ರಾಯ ಕಟಕಾಚಾರ್ಯನಾ ತರು
ವಾಯ ಸೇನಾಪಟ್ಟವನು ರಾ
ಧೇಯನ ವಿರಚಿಸಿದನು ಮುದದಲಿ ಕೌರವರ ರಾಯಾ ॥

ಪದನೂ ॥ ಕೇಳು ಜನಮೇಜಯ ಧರಿತ್ರೀ
ಪಾಲ ತೆಗೆದುದು ಬಲವೆರಡು ನಿಜ
ಪಾಳೆಯಕೆ ಪರಿತೋಷದಲಿ ಖೇದಸ್ಮಿಮಿತ ವಿಗ್ರಹರು
ಕೋಲಗುರುವಿನ ಮರಣ ವಾರ್ತಾ
ಕಾಲಸರ್ಪನ ತಂದು ಸಂಜಯು
ಹೇಳಿಗೆಯನೀಡಾಡಿದನು ಧೃತರಾಷ್ಟ್ರನಿದಿರಿನಲಿ ॥ ೧ ॥

ಅಂತ್ಯ : ಕುರುಪತಿಯ ಕಡುದುಃಖಮಯ ಸಾ
ಗರದೊಳದ್ದಿಸಿ ಪಾಂಡುಪುತ್ರರ
ಹೊರೆಗೆ ಬಂದನು ಕೃಷ್ಣ ಮಾಯಾಪಾಶ ಶೋಕವನು
ಹರಿದು ಬ್ರಹ್ಮಜ್ಞಾನದಿಂದವೆ
ಪಿರಿದು ಸಂತೈಸಿದನು ಯಾದವ
ರರಸ ಗದುಗಿನ ವೀರ ನಾರಾಯಣನು ಕರುಣದಲಿ ॥ ೩೮ ॥
ಅಂತೂ ಅಧ್ಯಾಯ ೨೭ಕ್ಕಂ ಪದನೂ ೧೧೭೪ಕ್ಕಂ ಜಯ ಮಂಗಳ ಮಹಾ ಶ್ರೀ × × × ಕರ್ನ್ನಪರ್ವ ಸಂಪೂರ್ನ್ನ ಮಂಗಳ ಮಹಾ ಶ್ರೀ × × × ಶ್ರೀ ಸರ್ವಜಿತ್ತು ನಾಮ ಸಂವತ್ಸರದ ಮಾಘ ಬ ೫ ಶುಕ್ರವಾರ ಪದ್ಮಮಿತ್ರವುದೆಯವಾದ ಘಳಿಗೆ ೧೫ಲ್ಲು ವುತ್ತರಾನಕ್ಷತ್ರ ಅಭಿಜನ್ನಾಃ ಮುಹೂರ್ತದಲ್ಲು ಕರ್ನ್ನಪರ್ವ ಬರೆದು ಹೆಚ್ಚಿತೂ ಬರೆದಾತನು ಶಿಲಾಪುರಿಯಲ್ಲು ಯಿರುವಂತಾ ವುಪಾಧ್ಯರು ನಂದ್ಯಪ್ಪಯ್ಯನವರ ಶ್ರೀಮತ್ಕುಮಾರನಾದಂತ್ತಾ ತೃತೀಯ ಕುಮಾರ ಸುಬ್ಬರಾಯನು ಬರೆದ ಕರ್ನ್ನಪರ್ವ ಸ ......ಮಹಾಶ್ರೀ.

ವಿಷಯ : ಭಾರತದಲ್ಲಿ ಕರ್ಣಪರ್ವದ ಕಥೆ.

ವಿಶೇಷ : ಸಮಗ್ರ. ಬರಹ ಚೆನ್ನಾಗಿದೆ. ಗ್ರಂಥಾಂತ್ಯದಲ್ಲಿ ಬರೆದಾತನ ವಿವರವಿದೆ. ಪತ್ರಗಳಿಗೆ ಅಲ್ಲಲ್ಲಿ ಹುಳು ಹೊಡೆದಿದೆ.

—ಕೆಆರ್‌ಎಸ್

## 224

ಕೆ. ೧೮೬೦ | ಭಾರತ (ಕರ್ಣ, ಶಲ್ಯ, ಗದಾಪರ್ವ) | ಭಾಮಿನೀಷಟ್ಪದಿ
೧೭.೨" × ೧.೪" | ಕುಮಾರವ್ಯಾಸ | ಸು. ೧೪೩೦
೧–೧೬೧ ಪತ್ರ | ೬ ಪಂಕ್ತಿ | ೯೫ ಅಕ್ಷರ

ಆದಿ : ಶ್ರೀ ಗಣಾಧಿಪತಯೇ ನಮಃ ॥ × × × ಕರ್ನಪರ್ವ ಬರೆಯುವದಕ್ಕೆ ನಿರ್ವಿಘ್ನಮಸ್ತು ।

ಸೂಚನೆ : ರಾಯಃಕಟಕಾಚಾರ್ಯ್ಯ ತರು
ವಾಯಲಭಿಷೇಕವನಃ ರಾ
ಧೇಯನಲಿ ಮಾಡಿಸಿದ ಬಂದದಲಿ ಕೌರವರರಾಯಹಾ ॥
ಪದನೂ ॥ ಕೇಳು ಜನಮೇಜಯ ಧರಿತ್ರೀ
ಪಾಲ × × ×
ಹೇಳಿಗೆಯಸೇಡಾಡಿದನು ದೃತರಾಷ್ಟ್ರನಿದಿರಿನಲಿ ॥ ೧ ॥

ಅಂತ್ಯ : ಯನುತ ಬಿದ್ದಳು ಮೂರ್ಛೆಯಲಿ ವಾ
ನಿನಿಯನೆತ್ತಿದನಸುರರಿಪು ನೃಪ
ವನಿತೆಯರಸಾ ಭಾನುಮತಿ ಮೊದಲಾದ ರಾಣಿಯರೂ
ಜನಪತಿಯ ಮಂಕ್ಕರುಕಿದರು ಸಂ
ಜನಿತ ಶೋಕಾದ್ಭುದಿತ ಹಾ ಹಾ
ಧ್ವನಿಯ ಧಟ್ಟಣೆ ಧಟ್ಟಿಸಿತು ಬ್ರಹ್ಮಾಂಡಮಂಡಲವಾ ॥ ೧೭ ॥
× × × ಹೊರಳಿದಳಿನತನು
ಜಹಾ ಕರ್ನ ಹಾಹಾ

ವಿಷಯ : ಮಹಾಭಾರತದ ಕಥೆ.

ವಿಶೇಷ : ಪ್ರತಿ ಚೆನ್ನಾಗಿದೆ. ಅಸಮಗ್ರ ಕೃತಿ. ೧೧೫ನೆಯ ಪತ್ರಗಳು ಎರಡು ಇವೆ ಇದರಲ್ಲಿ ಕರ್ಣ, ಶಲ್ಯ, ಗದಾಪರ್ವಗಳ ಕಥೆ ಮಾತ್ರ ಇದೆ.

—ಎಂಪಿಎಂ

## 225

| ಕೆ. ೧೭೩೪ | ಭಾರತ (ಕರ್ಣಪರ್ವ) | ಭಾಮಿನೀಷಟ್ಪದಿ |
|---|---|---|
| ೧೩.೫" × ೧.೪" | ಕುಮಾರವ್ಯಾಸ | ಸು. ೧೪೩೦ |
| ೧–೧೨೦ ಪತ್ರ | ೭ ಪಂಕ್ತಿ | ೫೭ ಅಕ್ಷರ |

ಆದಿ : × × × ಭಾರತಲ್ಲಿ ಕರ್ನಪರ್ವ ಬರೆಯಂದಕ್ಕೆ ಆಯುರಾರೋಗ್ಯ
ಐಶ್ವರ್ಯಾಭಿವೃದ್ಧಿರಸ್ತು ॥
ರಾಯ ಕಟಕಾಚಾರಿಯನ ತರು
ಪಾಯ ಸೇನಾಪಟ್ಟವನು ರಾ
ಧೇಯನಲಿ ರಚಿಸಿದನು ಮುಂದದಲಿ ಕೌರವರರಾಯ
ಕೇಳು ಜನಮೇಜಯ ಧರಿತ್ರೀ
ಪಾಲ ತೆಗೆದುದು ಬಲವೆರಡು ನಿಜ
ಪಾಳೆಯಂಕೆ ಪರಿತೋಷಭೇದಸ್ಮಿಮಿತ ವಿಗ್ರಹರೂ ॥

ಕೋಲಗುರುವಿನ ಮರಣವಾರ್ತೆ
ಕಾಲಸರ್ಪನ ತಂದು ಸಂಜಯ
ಹೇಳಿಗೆಯಂನೀಡಾಡಿದನು ಧೃತರಾಷ್ಟ್ರನಿದಿರಿನಲಿ ॥ ೧ ॥

ಅಂತ್ಯ : ಸುರಜಿ ಪದವಿಯಂನೀಉದೀಪದ
ಮರಣಭಯಹರಮಾದುದೀಪದ
ನರಕದೊಳಗಾಳರು ಕೇಳು ಮುಕ್ತಿಗೈಉದೀಪದಾ
ಹರಿಯ ಚರಣದ ಸರೋಜಯುಗಳದ
ಪರಿಮಳಕ್ಕೆರಗಿಹಲು ಷಟ್ಪದ......
...ಮುಸುಖದಲಿ ಕೇಳಿ ಭಕ್ತಿಯಂಪದವನೀವ ಫಲಾ ॥ ೫೯ ॥
ಅಂತು ಅಧ್ಯಾಯ ೨೮ಕ್ಕಂ ಪದನು ೧೨೫೯ಕ್ಕ ಮಂಗಳ ಮಹಾಶ್ರೀ × ×
ವಿಕೃತುನಾಮ ಸಂವತ್ಸರದ ಫಾಲ್ಗುಣ ಬಹುಳ ೧೩ ರವಿ ರ ಪದ್ಮಮಿತ್ರ
ನುದಯವಾದ ಘಳಿಗೆ ೫ರಲ್ಲು ಕರ್ನಪರ್ವ ಬರದು ಶಚ್ಚಿತು ಬರದಾತನು
ಶಿಲಾಪುರಿಯಲ್ಲಿಯಿಹಂತ ಅನ್ನದಾನಯ್ಯನ ಕುಮಾರ ಚನ್ನಪ್ಪಯ್ಯ ಬರೆದ
ಪುಸ್ತಕಕ್ಕೆ ಜಯಮಂಗಳ ಮಹಾಶ್ರೀ.

ವಿಷಯ : ಭಾರತಯುದ್ಧದಲ್ಲಿ ಕರ್ಣನು ಸೇನಾಧಿಪತಿಯಾಗಿ ಯುದ್ಧಮಾಡಿ ಮಡಿದ ಕಥೆ.

ವಿಶೇಷ : ಸಮಗ್ರ. ಅಲ್ಲಲ್ಲಿ ಹುಳು ತಿಂದಿದೆ.

—ವೈಸಿಬಿ

## 226

| ಕೆ. ೧೮೬೮ | ಭಾರತ (ಕರ್ಣ, ಶಲ್ಯ, ಗದಾಪರ್ವ) | ಭಾಮಿನೀಷಟ್ಪದಿ |
|---|---|---|
| ೧೮." × ೧.೪" | ಕುಮಾರವ್ಯಾಸ | ಸಂ. ೧೪೩೦ |
| ೧–೧೪೦ ಪತ್ರ | ೬ ಪಂಕ್ತಿ | ೭೩ ಅಕ್ಷರ |

ಆದಿ : ಶುಭಮಸ್ತು ॥ × × ×

ಪಲ್ಲವಾ ॥ ರಾಯ ಕಟಕಾಚಾರಿಯನ ತರು
ವಾಯ ಸೇನಾಪಟ್ಟವನ ರಾ
ಧೇಯನ ವಿರಚಿಸಿದನು ಮುದದಲಿ ಕೌರವರಾಯಾ

ಪದನು ॥ ಕೇಳು ಜನಮೇಜಯ ಧರಿತ್ರೀ
ಪಾಲ ತೆಗದುದು ಬಲವೆರಡು ನಿಜ
ಪಾಳಯಕೆ ಪರಿತಾಪಭೇದ ಶೀಮಿತ ವಿಗ್ರಹರೂ
ಕೋಲಗುರುವಿನ ಮರಣವಾರ್ತಾ

ಕಾಲಸರ್ಪನ ತಂದು ಸಂಜಯ
ಹೇಳಿಗೆಯನೀಡಾಡಿದನು ಧೃತರಾಷ್ಟ್ರನಿದಿರಿನಲಿ ॥ ೧ ॥

**ಅಂತ್ಯ :** ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ ಮಕರಂದ ಮಧುಪಾನ ಪರೀಕ್ಷಿದ್ವಚೋಷಟ್ಪದನಿಕಾಯು ಕುಮಾರವ್ಯಾಸ ಯೋಗೀಂದ್ರ ವಿರಚಿತವಪ್ಪ ಕರ್ನಾಟಕ ಮಹಾಭಾರತ ಕಥಾಮಂಜರಿಯೊ ... ಪರ್ವ ಸಮಾಪ್ತಃ ॥ × × ×
ಯೀ ಪುಸ್ತಕದಲ್ಲಿ ಬರದಿರುವದು ಕರ್ನಪರ್ವ ಸಂಧಿ ೨೭ಕ್ಕಂ ಪದನು ೧೬೭೦ಕ್ಕಂ ಶಲ್ಯಪರ್ವ ಸಂಧಿ ೩ಕ್ಕಂ ಪದ ಗದಾಪರ್ವ ಸಂಧಿ ೧೩ಕ್ಕಂ ಪದನು ೬೩೪ಕ್ಕಂ ಅಂತು ಪರ್ವ ೯೩ಕ್ಕಂ ಪದನು ೭೭೦ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ಕರ್ಣಪರ್ವದಿಂದ ಗದಾಪರ್ವದವರೆಗೆ ಭಾರತ ಕಥೆ.

**ವಿಶೇಷ :** ಸ್ಫುಟಾಕ್ಷರ. ಕೆಲವು ಗರಿಗಳು ಮುರಿದಿವೆ.

—ವೈಸಿಬಿ

## 227

| ಕೆ. ೧೬೭೬ | ಭಾರತ (ವಿರಾಟಪರ್ವ) | ಭಾಮಿನೀಷಟ್ಪದಿ |
|---|---|---|
| ೧೧.೬″ × ೧.೪″ | ಕುಮಾರವ್ಯಾಸ | ಸು. ೧೪೩೦ |
| ೧–೧೦೪ ಪತ್ರ | ೬ ಪಂಕ್ತಿ | ೪೪ ಅಕ್ಷರ |

**ಆದಿ :** ಶ್ರೀಗಣಾದಿಪತಯೇ ನಮಃ ॥ × × × ಭಾರತಕಥಾ ಪ್ರಸಂಗದಲ್ಲು ವಿರಾಟಪರ್ವ ಬರೆಯುದಕ್ಕೆ ಶುಭಮಸ್ತು ॥

ಸೂಚನೆ ॥ ಕಾಯಿದರು ಸತ್ಯವನು ವನವಾ
ಸಾಯುಸವ ನೆರೆ ಗೆಲಿದು ಪಾಂಡವ
ರಾಯುರೋಲೈಸಿದರು ಬಂದು ವಿರಾಟನಗರಿಯಲೀ ॥

ಪದನು ॥ ಕೇಳು ಜನಮೇಜಯು ಧರಿತ್ರೀ
ಪಾಲ ಮುನಿಜನನ್ರುಪಜನಂಗಳ
ಬೀಳುಂಕೊಟ್ಟನು ಭೂಮಿಪತಿ ಬಲವಂದು ಹುತವಹನಾ
ಮೇಲು ಶಕುನದ ಚಾರುನಿನದವ
ನಾಲಿಸುತ ಸಹೋದರರು ಸಹಿತ ವ
ನಾಲಯವ ಹೊರವಂಟು ಸಾರಿದರೊಂದು ವಟಕುಜವಾ ॥ ೧ ॥

**ಅಂತ್ಯ :** ಆದುದಭಿಮನ್ಯುವಿನ ಮದುವೆ ಮ
ಹಾದಯಾಂಬುಧಿ ಕ್ರಿಷ್ಣರಾಯನ
ಪಾದದರುಶನವಾಗಲ್ಲಿಮ್ಮಡಿಸಿತ್ತು ನಮ್ಮುದೆಯಾ

ಮೇದಿನಿಯು ನಾವುತ್ತ್ಯಾಲೊತ್ಮೆವು
ಕಾದುಕೊಂಡೆವು ಸತ್ಯವನು ಮೇ
ಲಾದುದನು ನೀ ಬಲ್ಲೆಯೆಂದನು ಬೀರನಾರಾಯಣಾ ॥ ೮೫ ॥
ಅಂತು ಸಂಧಿ ೧೧ಕ್ಕಂ ಪದನು ೬೩೬ಕ್ಕಂ ಜಯ ಮಂಗಳ ಮಹಾಶ್ರೀ × × × ಅಂಗೀರಸ ಸಂವತ್ಸರದ ಮಾರ್ಗಿಶರ ಶುದ್ಧ ೧೦ ಯಲೂ ಸೋಮವಾರ ವಿರಾಟಪರ್ವ ಬರೆದು ಹೆಚ್ಚಿತ್ತು ॥ ಶುಭಮತ್ತು . ಶ್ರೀ

ವಿಷಯ : ಪಾಂಡವರ ಅಜ್ಞಾತವಾಸ ಮತ್ತು ಅಭಿಮನ್ಯುವಿನ ವಿವಾಹದ ವೃತ್ತಾಂತ.

ವಿಶೇಷ : ಸಮಗ್ರ. ಬರಹ ಚೆನ್ನಾಗಿದೆ. ಆಯಾ ಸಂಧಿಯಲ್ಲಿ ಬರುವ ವಿಷಯದ ಸೂಚಿಯನ್ನು ಪಕ್ಕದಲ್ಲಿ ಬರೆದಿದೆ. ೪೧ ರಿಂದ ೪೪ ರ ವರೆಗೆ ಕ್ರಮಾಂಕ ಸರಿಯಿಲ್ಲದಿದ್ದರೂ ಗ್ರಂಥಲೋಪವಿಲ್ಲ. ಅಲ್ಲಿಂದ ಮುಂದೆ ೬೯ನೆಯ ಪತ್ರದವರೆಗೆ ಎರಡೆರಡು ಕ್ರಮಾಂಕಗಳು ಕಂಡುಬರುತ್ತಿದ್ದು ಮೇಲಿನ ಅಂಕಿಯೇ ಸರಿಯಾಗಿದೆ. ಪುನಃ ೯೭ನೆಯ ಪತ್ರದಿಂದ ೯೯ನೆಯ ಪತ್ರದ ವರೆಗೆ ಎರಡೆರಡು ಕ್ರಮಾಂಕಗಳಿವೆ.

—ಕೆಆರ್‌ಎಸ್

228

| ಕೆ. ೧೮೧೯ | ಭಾರತ | ಭಾಮಿನೀಷಟ್ಪದಿ |
|---|---|---|
| ೨೫.೩" × ೨" | ಕುಮಾರವ್ಯಾಸ | ಸು. ೧೪೩೦ |
| ೧–೨೪೯ ಪತ್ರ | ೯ ಪಂಕ್ತಿ | ೧೫೦ ಅಕ್ಷರ |

ಆದಿ : ವಿಘ್ನಧ್ವಾಂತ ನಿವಾರಣೈಕ ತರಣೀ × × × ಶುಭಮಸ್ತು ॥
ಶ್ರೀವನಿತೆಯುರಸನೆ ವಿಮಳ ರಾ
ಜೀವಪೀಠನೆ ಜನಕ ಜಗಕಶಿ
ಪಾವನನೆ ಸನಕಾದಿ ಸ ನಿಕರದಾತಾರ
ರಾವಣಾಸುರಮಥನ ಶ್ರವಣಸು
ಧಾ ವಿನೂತನ ಕಥನಕಾರಣ
ಕಾವುದಾನತ ಜನವ ಗದುಗಿನ ವೀರ ನಾರೆಯಣಾ ॥ ೧ ॥

ಅಂತ್ಯ : ಬಳಲಿ ಧರಿ ......ವಾಗಿ ನೀವೆ
......ಗುದುರಡಲಿ ಸುರಪು
..... ರೆಯುರುಗಳನುಪಚರಿಸಿದರು ವಿನಯದಲಿ
ಯಿಳೆಯೊಳಗೆ ನೀವೆಮ್ಮ ಕೀರ್ತಿಯ
ಬೆಳವಿಗೆಯ ಮಾಡಿದಿರಿ ಸಾಕಿ
ನ್ನಿಳಿದ ಮಾರ್ಗದ ಮೇಲೆ ತೆರಳುವದೆಂದು ಕೈ ಮುಗಿದಾ ॥ ೧೦೩ ॥

ಸುಂಡಿಲನು ನೆರೆ ನೆಗಹಿ ಹರಿಪದ
ಪುಂಡರೀ......

ವಿಷಯ : ಮಹಾಭಾರತದಲ್ಲಿ ಆದಿಪರ್ವದಿಂದ ಆರಂಭವಾಗಿ ಗದಾಪರ್ವದವರೆಗೆ.

ವಿಶೇಷ : ಅಸಮಗ್ರ. ಶಿಥಿಲ ಪ್ರತಿ. ಕೆಲವು ಗರಿಗಳು ಮುರಿದುಹೋಗಿವೆ. ಪ್ರತಿಯ ಕೊನೆಯಲ್ಲಿ " ರೌದ್ರಿ ಸಂವತ್ಸರದ ಶ್ರಾವಣ ಶು ೫ಲ್ಲು ಶ್ರೀಮತು ನಮ್ಮ ತಮ್ಮ ನರಸೈಯ್ಯನವರಿಗೆ ಹಿರಿಯಣ್ಣಭಟ್ಟನು ಬರಸಿಕೊಟ್ಟ ವಿಭಾಗ ಪಟ್ಟಿ ಕ್ರಮವೆಂತೆಂದರೆ × × × " ಎಂಬ ಬರಹವಿದೆ.

—ವೈಸಿಬಿ

## 229

ಕ. ೧೮೨೦ | ಭಾರತ | ಭಾಮಿನೀಷಟ್ಪದಿ
೨೫" × ೨" | ಕುಮಾರವ್ಯಾಸ | ಸು. ೧೪೩೦
೧–೨೧೬ ಪತ್ರ | ೯ ಪಂಕ್ತಿ | ೧೫೭ ಅಕ್ಷರ

ಆದಿ : ಶುಭಮಸ್ತು ॥
ಯಿಂದ್ರನೈರಾವತವ ಧರಣಿಗೆ
ತಂದ ನಿಜಮಾತೆಯನು ನೋಗಿಸ
ಲೆಂದು ಫಲುಗುಣ ಕೀರ್ತಿವಡೆದನು ಮೂರು ಲೋಕದಲಿ ॥
ಕೇಳು ಜನಮೇಜಯ ಧರಿತ್ರೀ
ಪಾಲ ಹಸ್ತಿನಪುರಿಗೆ ಮುನಿಗಳ
ಮೌಳಿ ಬಿಜಯಂಗೈದ ವೇದವ್ಯಾಸನೊಂದುದಿನ
ಕೇಳಿದನು ಧೃತರಾಷ್ಟ್ರ ಭೀಷ್ಮಗೆ
ಹೇಳಿಧನು ಋಷಿ ಬರವ ಹರ್ಷದ
ಲೀಲೆಯಲಿ ಯಿದಿಗೊಂಡು ತಂದರು ರಾಜಮಂದಿರಕೆ ॥ ೧ ॥

ಅಂತ್ಯ : ಹೇ ಮುಖುರ ಶೃಂಗಾರಭರಣದಿ
ಕಾಮಧೇನು ಸಹಸ್ರ ಕಪಿಲೆಯ
ಸೋಮಸೂರ್ಯಗ್ರಹಣದಲಿ ಸುರನದಿಯ ತೀರದಲಿ
ಶ್ರೀಮುಕುಂದಾರ್ಪಣವೆನುತ ಶತ
ಭೂಮಿ ದೇವರಿಗಿತ್ತ ಫಲವಹು
ದೀ ಮಹಾಭಾರತದೊಳೊಂದಕ್ಷರವ ಕೇಳ್ದರಿಗೆ ॥ ೨೫ ॥
ಅಂತೂ ಪರ್ವಗಳು ೧೦ಕ್ಕಂ ಸಂಧಿ ೧೫೭ಕ್ಕಂ ಪದನು ೮೭೮೦ಕ್ಕಂ ಶ್ರೀ.

ವಿಷಯ : ಭಾರತ ಕಥೆಯಲ್ಲಿ ಐರಾವತವನ್ನು ಭೂಮಿಗೆ ತಂದುದರಿಂದ ಆರಂಭವಾಗಿ, ಧರ್ಮರಾಯನ ಅಭಿಷೇಕದವರೆಗೆ.

ವಿಶೇಷ : ಸ್ಫುಟಾಕ್ಷರ.

—ವೈ.ಸಿ.ಬಿ

## 230

ಕೆ. ೧೮೪೫ | ಭಾರತ (ವಿರಾಟಪರ್ವ) | ಭಾಮಿನೀಷಟ್ಪದಿ

೧೧.೧″ × ೧.೪″ | ಕುಮಾರವ್ಯಾಸ | ಸು. ೧[illegible]೬೦

೧–೧೨೪ ಪತ್ರ | ೫ ಪಂಕ್ತಿ | ೪೭ ಅಕ್ಷರ

ಆದಿ : ಶ್ರೀ ಗಣಾಧಿಪತಯೇ ನಮಃ । × × × ವಿರಾಟಪರ್ವ ಬರೆಯುದಕ್ಕೆ ಶುಭಮಸ್ತು × × ×

ಸೂಚನೆ ॥ ಕಾಯಿದರು ಸತ್ಯವನು ವನವಾ
ಸಾಯತವ ನೆರೆ ಗೆಲಿದು ಪಾಂಡವ
ರಾಯರೋಲೈಸಿದರು ಬಂದು ವಿರಾಟನಗರಿಯಲಿ ॥
ಕೇಳು ಜನಮೇಜಯ ಧರಿತ್ರೀ
ಪಾಲ ಮುನಿಜನ ಪರಿಜನಂಗಳು
ಬೀಳುಕೊಟ್ಟನು ಭೂಮಿಪತಿ ಬಲಿವಂದು ಹುತವಹನಾ
ಮೇಲು ಶಕುನದ ಚಾರು ನಿನದ ವ
ನಾಲಿಸುತ ಸೋದರರು ಸಹಿತವ
ನಾಲಯವ ಹೊರವಂಟು ಸಾರಿದರೊಂದು ವಟಕುಜವಾ ॥ ೧ ॥

ಅಂತ್ಯ : ಆದುದಭಿಮನ್ಯುವಿನ ಮದುವೆ ಮ
ಹಾ ದಯರಾಂಬುಧಿ ಕೃಷ್ಣರಾಯನ
ಪಾದರುಶನವಾಗಲಿಮ್ಮಡಿಸಿತ್ತು ನಮ್ಮುಧೆಯಾ
ಮೇಧಿನಿಯಾ ನಾಲು ವೊತೆಗಿಚೆಉ
ಕಾದುಕೊಂಡೆಉ ...ತ್ಯವನು ಮೇ
ಲಾದುದನು ಕರುಣಿಸಲಿ ಗದುಗಿ .. ನಾರಾಯಣಾ ॥ ೮೫ ॥
ಅಂತು ಸಂಧಿ ೧೧ಕ್ಕಂ ಪದನು ೬೭೯ಕಂ ಜಯಮಂಗಳ ಮಹಾ × × × ಹೇವಿಳಂಬಿ ಸಂವತ್ಸರದ ಚೈತ್ರ ಶು ೯ ಗುರುವಾರ ದಿವಸ ಸೂರ್ಯ ಉಧೆಯವಾದ ಗಳಿಗೆ ೨೩ರಲು ಶಿಲಾಪುರಿಯಲ್ಲಿ ಯಿರುವಂತಾ ವೀರಪ್ಪೈಯ್ಯನವರ ಪುತ್ರ ಭದ್ರೈಯ್ಯನು ಭರದ ವಿರಾಟಪರ್ವ ಬರೆದು ಮುಗಿಯಿತು.

ವಿಷಯ : ಮಹಾಭಾರತದಲ್ಲಿ ಪಾಂಡವರ ಅಜ್ಞಾತವಾಸದಿಂದ ಅಭಿಮನ್ಯುವಿನ ಮದುವೆಯುವರೆಗಿನ ಕಥೆ.

ವಿಶೇಷ : ಸಮಗ್ರ. ಕೆಲವು ಗರಿಗಳನ್ನು ಹುಳು ಹೊಡೆದಿದೆ.

—ವೈಸಿಬಿ

231

ಕೆ. ಎ. ೫೮೭ | ಭಾರತ | ಭಾಮಿನೀಷಟ್ಪದಿ
೧೩.೫"×೯.೫" | ಕುಮಾರವ್ಯಾಸ–ತಿಮ್ಮಣ್ಣಕವಿ | ಸು. ೧೫೦೦
೭೭೯ ಪತ್ರ | ೧೯ ಪಂಕ್ತಿ | ೪೨ ಅಕ್ಷರ

ಆದಿ : ಶ್ರೀ ಗುರುಭ್ಯೋನಮಃ ಶ್ರೀ ಹರಯೇ ನಮಃ ಶ್ರೀ ವೇದವ್ಯಾಸಾಯ ನಮಃ
ಶುಕ್ಲಾಂಭರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ದ್ಯಾಯೇತ್ಸರ್ವ ವಿಘ್ನೋಪಶಾಂತಯೇ ॥

ಪೀಠಿಕೆ

ಶ್ರೀ ವನಿತೆಯುರರಸನೆ ವಿಮಲ ರಾ
ಜೀವಲೋಚನ ಪಿತನೆ ಜಗಕತಿ
ಪಾವನನೆ ಸನಕಾದಿ ಸಜ್ಜನ ನಿಕರ ಧಾತಾರ
ರಾವಣಾಸುರ ಮಥನ ಶ್ರವಣ ಸು
ಧಾವಿನೂತನ ಕಥನ ಕಾರಣ
ಕಾವುದಾನತ ಜನರ ಗದುಗಿನ ವೀರ ನರಯಣನೆ ॥ ೧ ॥
ಶರಣ ಸಂಗವ್ಯಸನ ಭುಜಗಾ
ಭರಣನಮರ ಕಿರೀಟ ಮಂಡಿತ
ಚರಣ ಚಾರುಚರಿತ್ರ ನಿರುಪಮ ಭಾಳಶಿಖಿನೇತ್ರ
ಕರಣ ನಿರ್ಮಲ ಭಜಕರಘಸಂ
ಹರಣ ದಂತಿಚಮೂರು ಚರ್ಮಾಂ
ಬರನೆ ಸಲಹುಗೆ ಒಕುತಜನರನು ಪಾರ್ವತೀರಮಣ ॥ ೨ ॥

ಅಂತ್ಯ : ಶ್ರೀಯುರಸ ಸರ್ವೇಶ ನಿರ್ಭೀತ
ಮಾಯಾ ಶುಭಕರಕಾಯುಭಕ್ತ
ಪ್ರೀಯು ಕರುಣಾಧೇಯು ಮಹಿಮಾನ್ನಾಯು ಶುಭದಾಯು
ಕಾಯು ಸುಖವನು ಪರದೊಳಗೆ ನೀ
ಶ್ರೇಯುಸವ ಭಕ್ತರಿಗೆ ಕೊಡುವನ
ಜಾಯುತಾಂಬಿಕ ಶ್ರುತಿ ಕುಟುಂಬಕ ದೇವ ರಂಗೇಶ ॥ ೯೫ ॥

......ಶ್ರೀಮತ್ಕರ್ಣಾಟಕ ಕವಿಕುಲಸಾರ್ವಭೌಮ ತಿಮ್ಮಣ್ಣಕವೀಂದ್ರ ವಿರಚಿತಮಪ್ಪ ಕರ್ಣಾಟಕ ಕೃಷ್ಣರಾಯ ಭಾರತ ಕಥಾಮಂಜರಿಯೊಳ್ ಸ್ವಾರ್ಗಾರೋಹಣ ಪರ್ವ ಸಮಾಪ್ತಾಮಾದುದು.

**ವಿಷಯ :** ಭಾರತದ ಕಥೆ.

**ವಿಶೇಷ :** ಕುಮಾರವ್ಯಾಸ ಬರೆದ ಹತ್ತು ಪರ್ವ, ತಿಮ್ಮಣ್ಣಕವಿ ಬರೆದ ಎಂಟು ಪರ್ವಗಳನ್ನು ಒಟ್ಟಿಗೆ ಪ್ರತಿ ಮಾಡಿದೆ. ಶಕ ೧೮೩೯ರಲ್ಲಿ ಕ್ರಿ.ಶ. ೧೯೧೭ರಲ್ಲಿ ಮೇರಡಿ ಮಂತಾಲಿಕ ವೆಂಕಪ್ಪನು ಸ್ವಹಸ್ತಾಕ್ಷರದಿಂದ ಬರೆದುದು. ಪ್ರತಿ ಪರ್ವಕ್ಕೂ ಬೇರೆ ಬೇರೆ ಪತ್ರಸಂಖ್ಯೆಯಿದೆ. ಕೆಲವು ಪತ್ರಗಳ ಒಂದು ಕಡೆ ಮಾತ್ರ ಬರವಣಿಗೆಯಿದೆ.

—ಹಕರಾ

## 232

| | | |
|---|---|---|
| ಕೆ. ೯೬೮ | **ಭಾರತ** | ಗದ್ಯ |
| ೧೭.೨"×೧.೪" | ಚಿಕ್ಕದೇವರಾಜ | ೧೬೭೨–೧೭೦೪ |
| ೧–೨೩೮ ಪತ್ರ | ೭ ಪಂಕ್ತಿ | ೭೮ ಅಕ್ಷರ |

**ಆದಿ :** ಶ್ರೀ ರಾಮಚಂದ್ರಾಯ ನಮಃ ನಿರ್ವಿಘ್ನಮಸ್ತು. ಲಕ್ಷ್ಮಿ ನಾರಾಯಣಾಂ ಪೂರ್ಣಪ್ರಜ್ಞಾ......ತಿ ಸುತಂ ನತ್ವಾ ಕರೋಮಿ ಶಲ್ಯಪರ್ವ್ವಣೋ ವಿವೃತಿಂ ಮುದೇ ॥ ವೈಶಂಪಾಯನರು ಜನಮೇಜಯರಾಯನ ಕುರಿತು ಕರ್ಣಪರ್ವದಲ್ಲಿ ಶ್ರೀ ನಾರಾಯಣಾನುಗ್ರಹೋಪೋದ್ಬಲಿತನಾದ ಧನುರ್ಧರಾಗ್ರಗಣ್ಯನಾದ ಪರಭಟ ಪಟಲ ನಗ ಕುಠಾರನಾದ ಜಯಶೀಲನಾದ ಅರ್ಜುನನಿಂದ ಕರ್ಣನು ಹತನಾದನೆಂದು ನಿರೂಪಿಸಿ ಯೀ ಶಲ್ಯಪರ್ವದಲ್ಲಿ ಮಹಾರಥಿಕನಾದ ಕರ್ಣನ ಪರನಾಸಂತರದಲ್ಲಿ ಯುಧಿಷ್ಠಿರನಿಂದ ಶಲ್ಯನು ಅರ್ಥವು ಹೇಳಲು ಪಡುತದೆ.

**ಅಂತ್ಯ :** ಅಲ್ಲಿಗೆ ನಾನು ಹೋದೆನು ನಾನಿಲ್ಲಿ ಇರವಲ್ಲೆನೆಂದು ಧರ್ಮರಾಯನು ಹೇಳಿದನೆಂದು ವೈಶಂಪಾಯನರು ಜನಮೇಜಯರಾಯಂಗೆ ಹೇಳಿದನು.

......ತಿಯೋಧ್ಯಾಯಃ ॥ ಶ್ರೀ ॥

ಗದ್ಯ ॥ ಯಿದುನಿದು ಸಕಲ ಸುರಾಸುರ ಮೌಳಿ ಮಣಿಘೃಣಿ ಮಂಜರೀ ಪಿಂಜರಿತ ಮಕರಂದ ಪಾದಾರವಿಂದ......ಮಧುಕರಾಯಮಾನ ನಿಜಾಂತರಂಗ ಕರ ಸಮುದಂಚ್ಚಿತ ಸಿಕರ ಕುಸುಮಾವಳಿ ಸಮರ್ಪಣ ಸಮಾಕುಲ ಕಾವೇರಿ ಪೂರ ಪರಿತ ಪಶ್ಚಿಮರಂಗ × × × ಶ್ರೀಮದ್ರಾಜಾಧಿರಾಜರಾಜ ಪರಮೇಶ್ವರಾ ಪ್ರೌಢ ಪ್ರತಾಪ ಅಪ್ರತಿಮ ಶ್ರೀ ವೀರನರಪತಿ ಚಿಕ್ಕದೇವ

ರಾಯ ವಿರಚಿತಮಪ್ಪ ಕರ್ನಾಟಕ ಭಾಷಾ ರಚಿತಮಪ್ಪ ಮಹಾಭಾರತ ಕಥಾ ಟಿಪ್ಪಣದೊಳ್ ಮಹಾಪ್ರಸ್ಥಾನ ಪರ್ವ ಸಮಾಪ್ತ ಶ್ರೀ ಮಂಗಳ ಮಹಾಶ್ರೀ.

ವಿಷಯ : ಶಲ್ಯ ಪರ್ವದಿಂದ ಮುಕ್ತಾಯದವರೆಗಿರುವ ಭಾರತದ ಕಥೆ.

ವಿಶೇಷ : ಶಲ್ಯಪರ್ವದಿಂದ ಕಥೆ ಪ್ರಾರಂಭವಾಗಿದೆ. ಮೊದಲ ಎರಡು ಗರಿಗಳು ತುಂಬಾ ಶಿಥಿಲವಾಗಿವೆ. ೪೭, ೧೫೩, ೧೬೫ನೆಯ ಗರಿಗಳ ಅರ್ಧರ್ಧ ಭಾಗಗಳು ಲುಪ್ತವಾಗಿವೆ. ಶಕಟರೇಫವನ್ನು ಬಳಸಿದೆ. ೫೧. ೫೨, ೮೪-೯೭, ೨೨೫-೨೩೧ನೆಯ ಗರಿಗಳಲ್ಲಿ ಬರಹವು ಸ್ವಲ್ಪ ಸಣ್ಣ ಅಕ್ಷರಗಳಿಂದ ಕೂಡಿದ್ದು ಪ್ರತಿ ಪತ್ರದ ಒಂದು ಕಡೆ ೮ ಪಂಕ್ತಿಗಳೂ ಪ್ರತಿ ಪಂಕ್ತಿಗೆ ೧೦೬ ಅಕ್ಷರಗಳೂ ಇವೆ.

—ಕೆಆರ್ಎಸ್

233

| ಕೆ. ೮೮೫ | ಭಾರತ | ಭಾಮಿನೀ ಷಟ್ಪದಿ |
|---|---|---|
| ೧೩.೬"×೧.೭" | ತಿಮ್ಮಣ್ಣಕವಿ | ಸು. ೧೫೧೦ |
| ೧-೭೬ ಪತ್ರ | ೫ ಪಂಕ್ತಿ | ೫೦ ಅಕ್ಷರ |

ಆದಿ : ಭಾರತದೊಳಗಣ ಸ್ವರ್ಗಾರೋಹಣ ಪಡ್ಡೆಧಾಳಿ ತಿರುಮಲದೇವರು ಬರದ ಪುಸ್ತಕಕ್ಕೆ ಶುಭಮಸ್ತು ॥

ಪಲ್ಲವಿ ॥ ರಾಯತನವನು ಬಿಟ್ಟು ಪಾಂಡವ
ರಾಯರೈವರು ಕಲಿಯುಗವು ಬರೆ
ರಾಯ ಪಟ್ಟವನೊಲಿದು ಕಟ್ಟಿದರಾ ಪರೀಕ್ಷಿತಗೆ ॥

ಪದನೂ ॥ ಕೇಳು ಜನಮೇಜಯ ಧರಿತ್ರೀ
ಪಾಲ ಕೃಷ್ಣನನುಳಿದು ಪಾಂಡುನೃ
ಪಾಲ ತನುಜರು ಸಕಲ ಧರಣಿಯ ವೈಮನಸ್ಯದಲಿ
ಆಳುತಿರ ಧರ್ಮ್ಮದಲಿ ಬಂದುದು
ಮೇಲೆ ಕಲಿಯುಗದವರ ತೊಡಕಿನ
ಕಾಲಮೆಟ್ಟಿಗೆ ತೆರಳಿದಾ.......

ಅಂತ್ಯ : ಶ್ರೀ ಮಹಾಭಾರತದ ಕಥೆಯನು
ಭೂಮಿಯೊಳು ನರರಾದರಿಸಿ ಸು
ಪ್ರೇಮದಿಂ ಕೇಳಿದಡೆ ಸದ್ಗತಿ ಪುಣ್ಯಫಲಗಳನೂ

ಕಾಮಹರ ಕರುಣಿಸುವವರಿಗೆ
ತಾವರಸದಳ ನಯುನನತಿನಿ
ಸ್ಸೀಮು ಸಲಹುದೆಂನ್ನ ಗದುಗಿನ ವೀರನಾರೆಯಣಾ ॥ ೪೦ ॥
ಅಂತು ಸಂಧಿ ೮ ಕೆ ಪದನು ೪೧೦ ಕ್ಕೆ ಪದ ಶ್ರೀ.

ವಿಷಯ : ಭಾರತದಲ್ಲಿ ಸ್ವರ್ಗಾರೋಹಣ ಪರ್ವದ ಕಥೆ.

ವಿಶೇಷ : ಗ್ರಂಥಾಂತ್ಯದಲ್ಲಿರುವ ಹಲವಾರು ಗರಿಗಳಿಗೆ ಹುಳು ಹೊಡೆದು ರಂಧ್ರ ಗಳಾಗಿವೆ.

—ಕೆಆರ್‌ಎಎಸ್

234

ಕ. ೯೩೪ ಭಾರತ ಭಾಮಿನೀ ಷಟ್ಪದಿ
೧೦.೫"×೧.೬" ತಿಮ್ಮಣ್ಣಕವಿ ಸು. ೧೫೧೦
೧–೭೨ ಪತ್ರ ೭ ಪಂಕ್ತಿ ೫೦ ಅಕ್ಷರ

ಆದಿ : ಶ್ರೀ ಗಣಾಧಿಪತಯೇಂ ನಮಃ ॥ ಸ್ವರ್ಗಾರೋಹಣ ಬರವುದಕ್ಕೆ ನಿರ್ವಿಘ್ನ ಮಸ್ತು.
ರಾಯುತನವನು ಬಿಟ್ಟು ಪಾಂಡವ
ರಾಯುನ್ರೈವರು ಕಲಿಯುುಗಂ ಬರೆ
ರಾಯ ಪಟ್ಟವನೊಲಿದು ಕಟ್ಟಿದರಾ ಪರೀಕ್ಷಿತಗೆ ॥
ಕೇಳು ಜನಮೇಜಯುನೆ ಲಕ್ಷ್ಮೀ
ಲೋಲ ತೆರಳಿದ ಬಳಿಕ ಪಾಂಡುನೃ
ಪಾಲ ತನುಜರು ಸಕಲಧರಣಿಯು ವೈಮನಸ್ಯದಲಿ
ಆಳುತಿರಲಾ ತ್ರಿಂಪುರಭ್ಧಿಗ
ನೋಡೆ ಬಂದುದು ಕಲಿಯು ಕಾಲದ
ಕಾಲುಮೆಟ್ಟಿಗೆ ತೆರಳಿತ್ಯೆ ದ್ವಾಪರವು ಬೇಗದಲಿ ॥ ೧ ॥

ಅಂತ್ಯ : ಯಿಾ ಮಹಾಭಾರತದ ಕಥೆಯುನು
ಭೂಮಿಯೊಳಗಾರಾದಡೊಂಮಿಗೆ
ನೇಮದಲಿ ಪೇಳಿದರೆ ಕೇಳ್ದರೆ ಮನದ ನಿಜಮನದಿ
ಕಾಮವಿತ ಕರುಣಿಸುವನವರಿಗೆ
ಪ್ರೇಮದಲಿ ಮೋಕ್ಷವನು ಮನೆ ನಿ
ಸ್ಸೀಮರಹರಿದನರಿದು ಭಜಿಸುವುದು ಪಾಂಡವರ ಕಥೆಯು ॥ ೫೦ ॥
ಅಂತು ಸಂಧಿ ೯ಕ್ಕಂ ಪದ ೪೫೦ ಕಂ ಮಂಗಳ ಮಹಾ ಶ್ರೀ.

**ವಿಷಯ :** ಮಹಾಭಾರತದಲ್ಲಿ ಪಾಂಡವರು ಪರೀಕ್ಷಿತರಾಜನಿಗೆ ಪಟ್ಟವನ್ನು ಕಟ್ಟಿದ್ದು : ಹಾಗೂ ಸ್ವರ್ಗಾರೋಹಣ ಪರ್ವದ ಕಥೆ.

**ವಿಶೇಷ :** ಇರುವಷ್ಟು ಭಾಗ ಸಮಗ್ರವಾಗಿದೆ. ೧೧ನೆಯ ಸಂಖ್ಯೆಗಳ ಪತ್ರಗಳು ಎರಡಿವೆ. ಒಂದೆರಡು ಪತ್ರಗಳಲ್ಲಿ ಒಂದೇ ಪಾರ್ಶ್ವದಲ್ಲಿ ಬರಹವಿದ್ದರೂ ಗ್ರಂಥಲೋಪವಿಲ್ಲ. ೧೨ ರಿಂದ ೧೪ನೆಯ ಪತ್ರಗಳ ಅಂಚುಗಳಲ್ಲಿ ಹುಳು ಹೊಡೆದಿದೆ. ಎರಡು ರೀತಿಯ ಬರಹಗಳು ಈ ಗ್ರಂಥದಲ್ಲಿವೆ.

[ಕ. ಹ. ಪ್ರ. ವ. ಸೂ. ತೃತೀಯ ಸಂಪುಟ. ಪುಟ. ೧೭೧–೧೭೫ ಕ್ರಮಾಂಕ. 1182–1185 ನೋಡಿ]

—ಕೆಆರ್‌ಎಸ್

## 235

| ಕ. ೧೩೭೧ | ಭಾರತ (ಹರದತ್ತಾಚಾರ್ಯರ ಚರಿತ್ರೆ) | ಭಾಮಿನೀ ಷಟ್ಪದಿ |
|---|---|---|
| ೧೩"×೧.೨" | ಕಳಲೆ ನಂಜರಾಜ | ಸು. ೧೭೪೦ |
| ೧-೫೪ | ೯ ಪಂಕ್ತಿ | ೫೨ ಅಕ್ಷರ |

**ಆದಿ :** ಶ್ರೀ ನೀಲಕಂಠ ಭಾಷ್ಯಕಾರ ಮಹಾ ಗುರುವೇ ನಮಃ ॥ ಶುಭಮಸ್ತು ।
ಮಂಗಳವನೆಮಗೀ ಉದಿಂದು ತ
ರಂಗಿಣೀ ಧರವೃಷಭ ತು
ರಂಗ ಜಿತ ಸಾರಂಗ ದಾನವ ಸರ್ವ ಮಂಗಳೆಯಾ
ತುಂಗ ಕುಚ ಕಟ ಕುಂಕುಮಾಂಕಿತ
ಮಂಗಳಾಂಗ ಮಹೀಶ ಪರ ತು
ರಂಗ ವರದಾಭಯಂ ಕರಾಬ್ಜ ಸುಮೇರು ಕೋದಂಡಾ ॥ ೧ ॥

**ಅಂತ್ಯ :** ನೈಮಿಶಾರಣ್ಯಕ್ಷೇತ್ರವಾಶಿಗಳಾದ ಋಷಿಗಳಿಗೆ ಸೂತಪುರಾಣಿಕರು ನಿರೂಪಿಸಿದರು । ಯಿಾ ಹರದತ್ತಾಚಾರ್ಯರ ವ್ಯಾಖ್ಯಾನವನ್ನೂ ಯಾರು ಓದಿ × × × ×
ಯಿಂತು ಚಂದ್ರ ವಂಶೋದ್ಭವರಾದ ಭಾರದ್ವಾಜ ಗೋತ್ರದಾಶ್ವಲಾಯನ ಸೂತ್ರದ ಋಗ್ವೇದಿಗಳಾದ ಮಹಿಶೂರ ದಳವಾಯಿ ದೊಡ್ಡಯ್ಯನವರ ಪೌತ್ರರಾದ ಕಳಲೆ ವೀರರಾಜಯ್ಯನವರ ಪುತ್ರರಾದ ನಂಜರಾಜಯ್ಯನವರು ಭವಿಷೋತ್ತರ ಪುರಾಣೋಕ್ತಮಾದ ಹರದತ್ತಾಚಾರ್ಯ ಚರಿತ್ರಮಂ ಸಕಲರರಿವಂತೆ ಅಚ್ಚ ಕನ್ನಡ ಭಾಷೆಯಿಂ ಟೀಕಿಸಿ ನಂಜರಾಜವಾಣೀ ವಿಲಾಸವೆಂಬ ಪೆಸರಿಟ್ಟು ಪೇಳ್ದ ಕೃತಿ ಸಮಾಪ್ತಂ। ಮಂಗಳ ಮಹಾ ಶ್ರೀ ಶ್ರೀ ॥

**ವಿಷಯ :** ಹರದತ್ತಾಚಾರ್ಯರ ಚರಿತ್ರೆ.

**ವಿಶೇಷ :** ಕೃತಿ ಸಮಗ್ರ. ಸುಂದರ ಬರೆವಣಿಗೆ. ಕೆಲವು ಪತ್ರಗಳ ತುದಿಯಲ್ಲಿ ಮುರಿದಿದೆ.

—ಎಂಬಿಎಂ

## 236

| ಕೆ. ೧೬೯೭ | ಭಾರತ | ಗದ್ಯ |
|---|---|---|
| ೨೦.೬"×೨" | ಮುಮ್ಮಡಿ ಕೃಷ್ಣರಾಜ | ೧೮೫೦ |
| ೧–೩೧೮ ಪತ್ರ | ೮ ಪಂಕ್ತಿ | ೬೭ ಅಕ್ಷರ |

**ಆದಿ :** ಶ್ರೀ ವೀರಭದ್ರಪ್ರಸನ್ನ ॥ ಶ್ರೀ ವೇದವ್ಯಾಸಾಯ ನಮಃ ॥ ಸ್ವಸ್ತಿ ಶ್ರೀವಿಜಯಾಭ್ಯುದಯ ಶಾಲೀವಾಹನ ಶಕವರ್ಷಂಗಳು ೧೭೭೫ನೆ ಶೋಭಕೃತುನಾಮ ಸಂತ್ಸರದ ಪುಷ್ಯ ಶು ೧೫ ಶುಕ್ರವಾರ ಅರಿದ್ರಾ ನಕ್ಷತ್ರದಲ್ಲಿ × × × × ವಿರಚಿಸಿದ ಶ್ರೀಮತ್ಕೃಷ್ಣರಾಜ ವಾಣೀವಿಲಾಸವೆಂಬ ಮಹಾಭಾರತ ತಾತ್ಪರ್ಯ ಟೀಕಿನಲ್ಲಿ ವ್ಯಾಸಕೃತಮಾದ ಲಕ್ಷಗ್ರಂಥ ಸಂಖ್ಯೆವುಳ್ಳ ಸಹಿತೆಯಲಿ ಉದ್ಯೋಗಪರ್ವದ ವಿಸ್ತಾರವಾವುದೆಂದರೆ ॥ ಅನಂತರದಲ್ಲಿ ವೈಶಂಪಾಯನ ಮುನೀಶ್ವರನು ಜನಮೇಜಯರಾಜನಂ ಕುರಿತು ಯಿಂತೆಂದನು ॥ ಯೆಲೈ ಜನಮೇಜಯನೆ ಐಶ್ವರ್ಯದ ಮಹಾನೀಯ್ಯರಾದ ಪಾಂಡವರು ಸಕಲಬಂಧು ಜನಂಗಳು ಸ್ತುತಿಸಲೂ। ಅಭಿಮನ್ಯುವಿನ ವಿವಾಹವನ್ನು ಮಾಡಿ ಸಂತೋಷಪಟ್ಟು ನಾಲ್ಕು ದಿನಂಗಳು ಸುಖವಾಗಿ ಯಿದ್ದು ಐದನೆಯ ದಿವಸದಲ್ಲಿ ದಿವ್ಯ ಗಂಧಮಾಲ್ಯಶೋಭಿತಮಾಗಿ ಸಕಲ ವಸ್ತು ಸಂಪೂರ್ನವಾಗಿ ವಿಚಿತ್ರ ರತ್ನ ಶೋಭಿತವಾಗಿ ಸಕಲ ಜನಂಗಳು ಸ್ತುತಿಸಲೂ ॥

**ಅಂತ್ಯ :** ಎಪ್ಪತ್ತು ಸಾವಿರ ಕುದುರೆಗಳನ್ನು ಐದು ಸಾವಿರ ಮದ್ದಾನೆಗಳನ್ನು ಐದು ಸಾವಿರ ರಥಗಳನ್ನು ಸಾವಿರ ಸಂಖ್ಯವುಳ್ಳ ಕಾಲಾಳು ಕೂಡಿ ಬರುತ್ತಿರಲೂ। ಆ ಬಲಕ್ಕೆ ಪೂರ್ವ ಪಶ್ಚಿಮ ಭಾಗಂಗಳ ಬೆಂನಟ್ಟಿ ಸಕಲವಾದ ಅರಸುಗಳೂ ಯೇಕೀಭವಿಶಿಕೊಂಡು ಬರುತ್ತಿರಲೂ ಯುಧಿಷ್ಠರಾರ್ಜುನರೂ ಬರಲು ಹೀಗೆ ಸಕಲ ಸೈನ್ಯಂಗಳೂ ರಣೋತ್ಸಾಹದಿಂದಾ ವಪ್ಪಿ ಸಿಂಹನಾದಗಳ ಮಾಡುತ ಸುಯೋಧನನಿಗೆ ಅಭಿಮುಖವಾಗಿ ಪಾಟೋಪ ನಡಿಯುವ ಸಮಯದಲ್ಲಿ ಅನೇಕ ಸಹಸ್ರ ಸಂಖ್ಯಾತ ಜನರೂ ಯೇಕಾಗ್ರಚಿತ್ತರಾಗಿ ವಿಜ್ರುಂಭಿಶಿ ಮಹೋತ್ಸಹದಿಂದಾ ಶಂಖಾರವಗಳಂ ಮಾಡಿದರೆಂದು ಸಂಜಯನು ದೃತರಾಷ್ಟ್ರನಿಗೆ ಹೇಳಿದ ಅರ್ಥವನ್ನು ವೈಶಂಪಾಯನ ಮುನೀಂದ್ರನೂ ಜನಮೇಜರಾಯನಿಗೆ ವಿವರಿಸ್ತನೂಯೆಂದು ಸೂತ

ಪೌರಾಣಿಕನ ನೈಮಿಶಾರಣ್ಯವಾಸಿಯರಾದ ಶೌನಕಾದಿ ಮುನಿಗಳಿಗೆ ನಿರೂಪಿಸ್ತನೂ ॥ × × × × ವುದ್ಯೋಗ ಪರ್ವದಲ್ಲಿ ೨೦೦ ನೆ ಅಧ್ಯಾಯದ ಅರ್ಥನಿರೂಪಣಕ್ಕೆ ಜಯ ಮಂಗಳಂ ಮಹಾಶ್ರೀ.

ವಿಷಯ : ಮಹಾಭಾರತದಲ್ಲಿನ ಉದ್ಯೋಗಪರ್ವದ ಕಥೆ.

ವಿಶೇಷ : ಅಕ್ಷರಗಳು ಸ್ಫುಟವಾಗಿದ್ದು, ಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ವೈಸಿಬಿ

237

ಕೆ. ಎ. ೬೦೨ | ಭಾರತ (ಕನ್ನಡ ಟೀಕು) | ಗದ್ಯ

೧೦.೮"×೭.೫" | ಮುಮ್ಮಡಿ ಕೃಷ್ಣರಾಜ | ೧೮೫೦

೧–೨೮೨ ಪುಟ | ೨೦ ಪಂಕ್ತಿ | ೨೮ ಅಕ್ಷರ

ಆದಿ : ಶ್ರೀಕೃಷ್ಣರಾಜ ವಾಣೀವಿಳಾಸವೆಂಬ ಮಹಾಭಾರತದ ಕನ್ನಡ ಟೀಕು, ವಿರಾಟಪರ್ವಾ ೧ನೇ ಅಧ್ಯಾಯಃ ಪಾಂಡವ ಪ್ರವೇಶ ಪರ್ವಾ ಪಾಂಡವರು ಅಜ್ಞಾತವಾಸಕ್ಕಾಗಿ ಯೋಚಿಸಿದ್ದು ಅನಂತರದಲ್ಲಿ ಸೂತಪುರಾಣೀಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳನ್ನು ಕುರಿತು ಇಂತೆಂದನು ॥ ಕೇಳಿರೈ ಋಷಿಗಳಿರಾ ॥ ಆ ಬಳಿಕ ಜನಮೇಜಯರಾಯನು ವೈಶಂಪಾಯನ ಮುನೀಂದ್ರನನ್ನು ಕುರಿತು ಯಲೈ ವೈಶಂಪಾಯಃ ಮುನೀಂದ್ರನೆ ನಮ್ಮ ಪೂರ್ವ ಪಿತಾಮಹರಾದ ಪಾಂಡವರು . .

ಅಂತ್ಯ : ಶ್ರೀ ಮಹೀಶೂರಪುರವರಾಧೀಶ ಶ್ರೀಕೃಷ್ಣರಾಜವೊಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ. ಯವರಿಂದ ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀ ಕೃಷ್ಣರಾಜ ವಾಣೀವಿಳಾಸವೆಂಬ ಮಹಾಭಾರತದ ಕನ್ನಡ ಟೀಕಿನಲ್ಲಿ ವಿರಾಟಪರ್ವದ ೭೭ನೇ ಅಧ್ಯಾಯಾರ್ಥ ನಿರೂಪಣಕ್ಕೆ ಮಂಗಳಮಸ್ತು ॥ ವಿರಾಟಪರ್ವ ಸಮಾಪ್ತಿ ॥

ವಿಷಯ : ಮಹಾಭಾರತದ ವಿರಾಟಪರ್ವ.

ವಿಶೇಷ : ವಿರಾಟಪರ್ವ ಮಾತ್ರ ಇದೆ. ಪ್ರತಿ ದೃಢವಾಗಿ ಅಕ್ಷರಗಳು ಚೆನ್ನಾಗಿವೆ. ೧–೬ ಪುಟಗಳಲ್ಲಿ ವಿಷಯಸೂಚಿ ಇದೆ.

—ಜಿಜಿಎಂ

238

| ಕೆ. ೮೨೪ | ಭಾರತ | ಯಕ್ಷಗಾನ |
|---|---|---|
| ೬.೪"×೧.೯" | ? | ? |
| ೧-೬೮ ಪತ್ರ | ೮ ಪಂಕ್ತಿ | ೨೮ ಅಕ್ಷರ |

**ಆದಿ :** ಭಾರತದೊಳಗಿನ ಯಕ್ಷ... ..ಬರವುದಕ್ಕೆ ಶಂಭಮಸ್ತು ॥ ನಿರ್ವಿಘ್ನ ಮಸ್ತು ॥ ರಾಗಾನಾ......
ಸದಾಶಿವಾಸುತ । ಶರಣು ಸುರಗಣ ಸೇವಿತಾ । ಶರಣು ಸಕಲ......ಕ ।
ಶರಣು ಶ್ರೀ ಗಣನಾಯಕ ॥ ಶರಣು ಶರಣು ॥ ೧ ॥

× × ×

ರಾಗಾ ॥ ತ್ರಿವುಡೆ ॥ ಪ್ರೀಯದಲಿ ವರ್ನಿಸಿದ ವೈಶಂಪಾಯ......ಕಥೆ ಯನು ರಾಯ ಜನಮೇಜಯಗೆ ಚತುರೋಪಾಯದಿಂದಾ ॥ ೧ ॥

**ಅಂತ್ಯ :** ಶೀಮೆಯ ಭೂಪಾಲರೆಲ್ಲಾರೊಂದಾಗಿ
ಕಾಮಾಜನಕನಪ್ಪಣೆಯಿಂ .....
ಪೋದಾ ಮೇಲಿತ್ತ ಪಾಂಡವರು ಹರುಷದಲೀ
ಶ್ರೀಧರಸವಿತಾರಮನಿಗೆ ತೆರಳಿದರೂ ॥
ಮಾಧಾವ .....ಮಾಡಿ ಸಂಸ್ತುತಿಶೀ ಪಾದಕೆರಗಿದಾರು ॥
ರಾಗಾ ॥ ಮಂಗಳಪದಾ ॥ × × ×
ವರವಾವತಾರನಿಗೆ । ದುರಿತಸಂಹಾರನಿಗೆ । ಪರಮ......ಪ ವಿನಾಶಗೆ ॥
ಧರೆಯೊಳಗಧಿಕವಾದ ಕಂಣ್ವಾಪುರದೊಳಗೆ । ಸ್ಥಿರವಾಗಿನೆಲಶಿರ ......
...... ಜಯ ಮಂಗಳಂ ಸದಾ ಶುಭ ಮಂಗಳಂ ॥ ೫೧೨ ॥
ಯಿಂತಿ ವೈಶಂಪಾಯಮುನಿ ಹೇಳಿ... .. ಪೂರ್ಣಂ ॥ ಮಂಗಳ ಮಹಾಶ್ರೀ

**ವಿಷಯ :** ಮಹಾಭಾರತದ ಕಥೆ.

**ವಿಶೇಷ :** ಸಮಗ್ರವಾಗಿದೆ. ಬರಹವು ಚೆನ್ನಾಗಿದೆ. ಪತ್ರಗಳ ಅಂಚುಗಳು ಮುರಿದು ಹಲವಾರು ಕಡೆಗಳಲ್ಲಿ ಲೋಪವಾಗಿವೆ. ೯, ೧೦, ೨೯, ೩೫, ೩೮, ೩೯, ೪೦, ೪೧, ೫೦, ೬೬ನೆಯ ಪತ್ರಗಳಲ್ಲಿ ಒಂದೇ ಪಾರ್ಶ್ವದಲ್ಲಿ ಬರಹವಿದ್ದರೂ ಗ್ರಂಥ ಲೋಪವಿಲ್ಲ.

—ಕೆಆರ್‌ಎಸ್

## 239

| ಕೆ. ೧೧೩೧/೧೨ | ಭಾರತ ನಿಘಂಟು | ಕಂದ |
|---|---|---|
| ೭.೨"×೧.೫" | ? | ? |
| ೧೫೫–೧೬೪ ಪತ್ರ | ೮ ಪಂಕ್ತಿ | ೩೬ ಅಕ್ಷರ |

**ಆದಿ :** ಭಾರತ ನಿಘಂಟು. ಭಾರತ ನಿಘಂಟು.
ಭಾರದೊಳ್ಕವಿರಾಜ ಕು
ಮಾರ ವಶಾಸಂ ನೆಗಚ್ಚಿ ಶಬ್ದಂಗಳ
ನಾರೈದುಸಿರ್ವೆಂ ನಿಜದಿಂ
ದೀರರಿದುಂ ಮೆಚ್ಚಿ ಮನದೆಗೊಳ್ವುದು ಮುದದಿಂ ॥ ೧ ॥
ಭಾರತದೊಳ್ಪಿನ ನುಡಿಯುಂ
ಚಾರು ಸುಧೆಸೀಯ್ಯುವೆಂಬ ಭಾಷಾಂತರಮುಂ
ಸೂರಿಜನ ಮೆಚ್ಚೆ ಪೇಟ್ವೆಂ
ಧಾರುಣಿಯೊಳ್ ಕೋವಿದರ್ಗೆ ಮುದವೆದಗುವಿನಂ ॥ ೨ ॥

**ಅಂತ್ಯ :** ಇದನೋದಿ ಕೇಳಿದಗ್ಗ್ರರಿಂ
ಸದಮಲಮತಿ ಯುಕ್ತಿ ಬುದ್ಧಿಯೇಕಾರ್ಥಿಗಳುಂ
ಮುದದಿಂ ದೊರಕೊಳ್ವುದು ಶ್ರೀ
ಸುದತಿ ವರ ಹರಿ ವಿರಿಂಚಿಗಳ ಕರುಣದೊಳಂ ॥ ೬೮ ॥

ಇತಿ ಭಾರತಿ ನಿಘಂಟು ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ಕುಮಾರವ್ಯಾಸ ಭಾರತದಲ್ಲಿ ಬರುವ ಕೆಲವು ಕ್ಲಿಷ್ಟ ಪದಗಳ ಅರ್ಥ.

**ವಿಶೇಷ :** ಸಮಗ್ರ. ಶಕಟರೇಫ, ಱಗಳ ಪ್ರಯೋಗವಿವೆ. ಇದೇ ಕಟ್ಟಿನಲ್ಲಿ ಹಾಡು, ಗಳು, ಪಂಚವಿಂಶತಿ ಸ್ತೋತ್ರಗಳೇ ಮೊದಲಾಗಿ ಒಟ್ಟು ೧೭ ಕೃತಿಗಳಿವೆ. [ಕ. ಹ. ಪ್ರ. ವ. ಸೂ. ತೃತೀಯ ಸಂಪುಟ ಪುಟ ೧೮೫–೧೮೯ ಕ್ರಮಾಂಕ. 1195–1199 ನೋಡಿ].

—ಕೆಆರ್‌ಎಸ್

## 240

| ಕೆ. ೧೬೨೧/೧ | ಭಾರತ ನಿಘಂಟು | ಕಂದ |
|---|---|---|
| ೮.೧" × ೨" | ? | ? |
| ೧–೬ ಪತ್ರ | ೮ ಪಂಕ್ತಿ | ೩೬ ಅಕ್ಷರ |

**ಆದಿ :** ಶ್ರೀ ವಯಿದ್ವೀರೇಶ್ವರಾಯ ನಮಃ ॥ ಭಾರತ ನಿಘಂಟು

ಕಂದ ॥ ಭಾರತದೊಳ್ಕವಿರಾಜ ಕು
ಮಾರವ್ಯಾಸಂಗೆ ನೆಗಳ್ದ ಶಬ್ದಂಗಳ
ನಾರೈದುಸುರ್ವೆ ನಿಜದಿಂ
ಧೀರರಿದಂ ಮೆಚ್ಚಿ ಮನದೆಗೊಳ್ವುದು ಮುದದಿಂ ॥ ೧ ॥
ಭಾರತದೊಳ್ಪಿನ ನುಡಿಯಂ
ಚಾರುಸುಧಿಸೀಮ್ಯವೆಂಬ ಭಾಷಾಂತರಮಂ
ಸೂರಿಜನ ಮೆಚ್ಚೆ ಪೇಳ್ದಂ
ಧಾರುಣಿಯೊಳ್ ಕೋವಿದರ್ಗೆ ಮುದಮೊದಗುವಿನಂ ॥ ೨ ॥

ಅಂತ್ಯ : ಅರುವತ್ತೇಳುಂ ಕಂದದೊ
ಳುರುವ ಮಹಾಭಾರತ ವರ್ಣಕ ಕೃತಿಯೊ
ಳುರುಗಿಹ ಶಬ್ದಾರ್ಥಕ್ಕೋ
ಸರಮಾಗಿಎ ಪೇಳ್ದೆನಖಿಳ ಶಬ್ದಾಂತರಮಂ ॥ ೬೭ ॥
ಇದನೋದಿ ಕೇಳಿದರ್ಗಂ
ಸದಮಲಮತಿ ಮುಕ್ತಿಬುದ್ಧಿಯೇಕಾರ್ತಿಗಳುಂ
ಮುದದಿಂ ದೊರಕೊಳ್ವುದು ಶ್ರೀ
ಸುದತೀವರ ಹರಿ ವಿರಿಂಚಿಗಳ ಕರುಣದೊಳು ॥ ೬೮ ॥
ಭಾರತ ನಿಗಂಟು ಸಮಾಪ್ತ.

ವಿಷಯ : ಕುಮಾರವ್ಯಾಸ ಭಾರತದ ವಿಶಿಷ್ಟಪದಗಳಿಗೆ ಅರ್ಥ.

ವಿಶೇಷ : ಇದೇ ಕಟ್ಟಿನಲ್ಲಿ ಶಬ್ದ ರತ್ನಾಕರ ಮೊದಲಾದ ೪ ಕೃತಿಗಳಿವೆ.

—ಜಿಜಿಎಂ

## 241

| ಕೆ ೧೬೬೨/೧ | ಭಾರತ ನಿಘಂಟು | ಕಂದ |
|---|---|---|
| ೯.೬"x೧.೫" | ? | ? |
| ೨೧–೨೬ ಪತ್ರ | ೯ ಪಂಕ್ತಿ | ೩೫ ಅಕ್ಷರ |

ಆದಿ : ಶ್ರೀ ದಕ್ಷಿಣಾಮೂರ್ತಿ ಗುರುವೇ ನಮಃ ॥ ಭಾರತದೊಳ್ಕವಿರಾಜ ಕು । ಮಾರವ್ಯಾಸಂ ನೆಗಳ್ದ ಶಬ್ದಂಗಳ । ನಾನಾರ್ಥೈದುಸುರ್ವೆಂ ನಿಜದಿಂ । ಧೀರರಿದಂ ಮೆಚ್ಚಿ ಮನದೆಗೊಳ್ವುದು ಮುದದಿಂ ॥ ೧ ॥
ಭಾರತ ದೊಳ್ಪಿನ ನುಡಿಯಂ
ಚಾರು ಸುದೇಶಿಯ್ಯಮೆಂಬ ಭಾಷಾಂತರಮಂ

ಸೂರಿಜನ ಮೆಚ್ಚೆ ಪೇಳ್ವೆಂ
ಧಾರುಣಿಯೊಳ್ಕೋವಿದರ್ಗೆ ಮುದವೊದಗುವಿನಂ ॥ ೨ ॥

ಅಂತ್ಯ : ಅರವತ್ತೇಳುಂ ಕಂದದೊ
ಳಿಂರುವ ಮಹಾಭಾರತ ವರ್ನಕ ಕೃತಿಯೊ
ಳ್ತುರುಗಿಹ ಶಬ್ದಾರ್ಥಕ್ಕೋ
ಸ್ಕರಮಾಗಿಯೆ ಪೇಳ್ವೆನಖಿಳ ಶಬ್ದಾಂತರವಂ ॥ ೬ ॥ ಶ್ರೀ ಶ್ರೀ
ಯಿತಿ ಭಾರತ ನಿಘಂಟು ಪರಿಸಮಾಪ್ತಂ ॥ ಶ್ರೀ ॥

ವಿಷಯ : ಕುಮಾರವ್ಯಾಸ ಭಾರತದಲ್ಲಿ ಬರುವ ಕ್ಲಿಷ್ಟಪದಗಳ ಅರ್ಥ.

ವಿಶೇಷ : ಇದೇ ಕಟ್ಟಿನಲ್ಲಿ ಕಬ್ಬಿಗರ ಕೈಪಿಡಿ ಎಂಬ ಕೃತಿಯಿದೆ.

—ಶೈಸಿಬಿ

## 242

| ಕೆ. ೮೭೦ | ಭಾರತ ವಚನ | ಗದ್ಯ |
|---|---|---|
| ೧೧.೩" × ೧.೨" | ? | ? |
| ೧–೧೯ ಪತ್ರ | ▪ ಪಂಕ್ತಿ | ೫೬ ಅಕ್ಷರ |

ಆದಿ : ಶ್ರೀ ಹಾಯಗ್ರೀವಾಯ ನಮಃ ॥ ಅವಿಘ್ನಮಸ್ತು ॥ ಶಂತನಂ ಚಕ್ರವರ್ತಿ ಪುತ್ರನಾದ ವಿಚಿತ್ರವೀರ್ಯನ ಪುತ್ರನಾಗಿ ಸ್ವರ್ಗಸ್ಥನಾದ......ರ್ಯನ ಜನನಿಯಾದ ಸತ್ಯವತಿ ಭೀಷ್ಮನ ಕುರುತು ನೀನು ರಾಜ್ಯವನಾಳೂಯೆಂದು ಪೇಳಲಾಗಿ ಭೀಷ್ಮನು ತಾನು ರಾಜ್ಯವನಾಳಲಿಲ್ಲಾ ಯೆಂದು ಪ್ರತಿಜ್ಞೆ ಮಾಡಿ ಇದ್ದೇನೆ.

ಅಂತ್ಯ : ಗಾಂಧಾರಿಯ ತಂಗಿರು ಸತ್ಯವ್ರತಳು। ಸತ್ಯ ಸೇ......। ಸುದೇಷ್ಣೆ। ಅರ್ಥಿಸಂಹಿತೆ ಇಂದ್ರಶ್ರವೆ। ಸುಭದ್ರೆ। ಸಕೃತಿ। ಶಂಭುವರ್ಣೆ। ದಶಾರ್ಣೆ ಯೆಂದು ಪೆಸರುಳ್ಳವರುಂಟು। ಈ ಸತ್ತುಮಂದಿರನಂ ಧೃತರಾಷ್ಟ್ರರಾಯನೆ ಸುಬಲ ಕೊಟ್ಟನು। ಧೃತರಾಷ್ಟ್ರರಾಯನು ಬುದು......ದಲ್ಲಿ......ತ್ತು ಮಂಧಿರಗಳನ್ನು ಪಾಣಗ್ರಹಣವನು

ವಿಷಯ : ಭಾರತದಲ್ಲಿ ಆದಿಪರ್ವದ ಕಥೆ.

ವಿಶೇಷ : ಅಸಮಗ್ರ. ಗರಿಗಳಿಗೆ ಅಲ್ಲಲ್ಲಿ ಹುಳು ಹೊಡೆದಿದೆ. ೫ನೆಯ ಪತ್ರದಲ್ಲಿ ಒಂದು ಕಡೆ ಮಾತ್ರ ಬರಹವಿದೆ.

—ಕೆಆರ್‌ಎಸ್

## 243

ಕೆ. ೯೩೮ | ಭಾರತ ವಚನ | ವಚನ, ಟೀಕು

೧೫.೧"×೧.೩" | ? | ?

೩೬–೧೧೭ ಪತ್ರ | ೫ ಪಂಕ್ತಿ | ೫೮ ಅಕ್ಷರ

**ಆದಿ :** ಸಮಾಪ್ತಿ । ಇತಿ ಶ್ರೀ ಕರ್ಣಾಟಕ ಭಾಷಾ.. ಣ್ಯಪರ್ವ ಟೀಕಾಯಾಂ ಅಷ್ಟಮೋಧ್ಯಾಯಃ ॥ ವೇದವ್ಯಾಸ ದೇವರ ವಾಕ್ಯ ಕೇಳಿ ಧೃತರಾಷ್ಟ್ರ ರಾಯನು ನೀವು ಪೇಳಿದ ಅರ್ಥಯಿತ್ತ ಹಾದು ವಶಗಾದರು ಪುತ್ರ .. ಪಿಂದ ದುರ್ಯೋಧನನ ಬಿಡಲಾರೆನುಯನಲಾಗಿ । ಪುತ್ರಸ್ನೇ ಬಿಡ ಕೂಡದೂ ಯಂಬ ಅರ್ಥದಲ್ಲಿ ಸುರಭಿ ದೇವೇಂದ್ರನ ಸಂವಾದವನು ಪೇಳುತಂ ಇದ್ದಾರೆ ಈ ಧ್ಯಾಯದಲ್ಲಿ ಯತಿ ವೇದವ್ಯಾಸಮುನಿ ಮಕಳು ನಾನು ಜೂಜಂದೇದ ಪಾಂಡವ ಹೊರಡ ಕುಟ್ಟಿದ್ದು.

**ಅಂತ್ಯ :** ಅಶ್ವಮೇಧ ರಾಜಸೂಯ ಪೌಂಡರಿಕ ಗೋನಿವವೆಂದು ಪೆಸರುಳ್ಳ ಯಾಗ ಗಳಾಚರಿಸಿದೆ. ಮತ್ತು ಪೂರ್ಣ ದಕ್ಷಿಣೆವುಳ್ಳ ಬಹಳ ಯಜ್ಞಗಳ ಮಾಡಿದೆ ಇಂಥಾ ಧರ್ಮರಶಿವುಳ್ಳ ನೀನು ಆಗ್ರಹಾ ಬುದ್ಧಿಯಿಂದ ಜೂಜಿನಲ್ಲಿ ಮಿತ್ರರು ಸಕಲ ದ್ರವ್ಯಗಳನು ಯಂನ್ನನು ಪಣಕ್ಕಿನಿಕ್ಕಿ ಸೋತೆ ಋಜು ಬುದ್ಧಿವುಳ್ಳವನಾಗಿ ಹತ್ಯಿಕನಾಗಿದ್ದಾಶಿ...

**ವಿಷಯ :** ಮಹಾಭಾರತದಲ್ಲಿ ಅರಣ್ಯಪರ್ವದ ಕಥೆ.

**ವಿಶೇಷ :** ಪ್ರತಿಯ ಸ್ಥಿತಿ ಅಷ್ಟು ಉತ್ತಮವಾಗಿಲ್ಲ. ಇದರಲ್ಲಿ ತ್ರುಟಿತವಾದ ಹಾಗೂ ಹುಳು ಹೊಡೆದಿರುವ ಗರಿಗಳೂ ಇವೆ. ೩೭–೪೪ ನೆಯ ಗರಿಗಳ ಅಂಚು ಗಳು ಮುರಿದಿವೆ. ೪೫ನೆಯ ಗರಿ ಕಾಲುಭಾಗವಿದೆ. ೭೧ನೆಯ ಗರಿಯ ಅರ್ಧಭಾಗ ನಷ್ಟವಾಗಿದೆ. ೫೪, ೧೦೫, ೧೦೭–೧೧೧ ನೆಯ ಗರಿಗಳು ಲುಪ್ತ. ೬೬ ನೆಯ ಗರಿಯಲ್ಲಿ ಒಂದು ಕಡೆ ಮಾತ್ರ ಬರಹವಿದೆ. ಮತ್ತೊಂದು ಕಡೆಯು ಸ್ವಲ್ಪ ಭಾಗದ ಗ್ರಂಥ ಲೋಪವಾಗಿದೆ. ಬರಹವನ್ನು ಓದಲು ಸ್ವಲ್ಪ ಶ್ರಮವಾಗುತ್ತದೆ. ೯ನೆಯ ಅಧ್ಯಾಯದಿಂದ ೩೦ನೆಯ ಅಧ್ಯಾಯದ ಆರಂಭದಲ್ಲಿ ಕೆಲವು ಭಾಗವಿದೆ. ಮಧ್ಯದಲ್ಲಿ ಅಂದರೆ ೨೭ರಿಂದ ೨೯ನೆಯ ಅಧ್ಯಾಯದ ಕೆಲವು ಭಾಗದವರೆಗೆ ಲುಪ್ತವಾಗಿದೆ.

—ಕೆಆರ್‌ಎಸ್

## 244

ಕೆ ೮೮೨/೧ | ಭಾವಚಿಂತಾರತ್ನ | ವಾರ್ಧಕ ಷಟ್ಪದಿ

೧೨"×೨" | ಗುಬ್ಬಿಯ ಮಲ್ಲಣಾರ್ಯ | ೧೫೧೩

೧–೩೧ ಪತ್ರ | ೧೧ ಪಂಕ್ತಿ | ೭೬ ಅಕ್ಷರ

ಆದಿ : ಸತ್ಯೇಂದ್ರ ಚೋಳನ ಕಾವ್ಯ ॥ ಭಾವಚಿಂತಾರತ್ನ ॥ ವಾರ್ದಿಕ ಷಟ್ಪದ ॥
ರಾಗ ನಾಟಿ ॥

ಪಲ್ಲ ॥ ಶ್ರೀ ವಿಮಲ ಗುಹನಮರಗುಂಡ ಮಲ್ಲೇಶ್ವರನ
ಸೇವಾನಿಮಿತ್ಯದಿಂದಿಳೆಯೊಳಗೆದಾ ಪ್ರಣವ
ಜೀವ ಪಂಚಾಕ್ಷರಿಯ ಬಿತ್ತರಿಸಿದಂ ಕುಲಚ್ಚೆರೆಯಗಾನಂದದಿಂದಾ ॥

ಪದ ॥ ಶ್ರೀ ಗುರು ಸದಾನಂದ ವಾಗೀಶವರದ ತುಹಿ
ನಾಗಜಾದ್ಧಾರ್ಂಗ ಮಹಿಮಾಗರಿಮ ಚರಣ ಸಕ
ಲಾಗಮ ಸ್ತುತ್ಯಭಾಗ ಭೂಷಿತವ ಮಕುಟ ಯೋಗಿಜನ ಹೃನ್ನಿವಾಸಾ
ರಾಗಾದಿ ರಹಿತ ಸುಖಸಾಗರನಲಾ ನೀನು
ಭೋಗಮಲ್ಲೇಶ ಬಿಡದೀಗಮೆಂನಯ ಕೃತಿಯ
ಭೂಗಗನ ದಿಗ್ಭರಿತವಾಗಿ ಪಸರಿಸುವಿನಂ ಸಾಗಿಸಂವುದಳ್ಕರಿಂದೆ ॥ ೧ ॥

ಅಂತ್ಯ : ಬಾಣಗುಣವಾರ್ಧಿ ವಿಧು ಸಂದ ಶಕ ವರುಷದಿಂ
ಮೇಣು ಸಂವತ್ಸರಂ ಶ್ರೀಮುಖಂ ಕಾರ್ತಿಕ ದು
ರೀಣವಹ ಶುದ್ಧ ಸಪ್ತಮಿ ಶುಕ್ರವಾರವಾ ಶ್ರವಣ ನಕ್ಷತ್ರದಲ್ಲಿ
ಜಾಣೆಸಿಂ ನಾಗಲಿಂಗಯ್ಯಗಳ ಸುತ ಶಿವ
ಪ್ರಾಣಿ ಲಿಂಗಪ್ಪನಣುಗಂ ಚೇರಮಾಂಕಗ
ಕ್ಷೀಣವೆನೆ ಮಲ್ಯಣಾರ್ಯಂ ನಿರೂಪಿಸಿದನೀ ಭಾವಚಿಂತಾರತ್ನಮಂ ॥ ೫೮ ॥

× × ×

ಇದು ಸಕಲ ಭಕ್ತ ಪದ ಪಂಕಜ ರೇಣು ಮ
ಸ್ತದ ಮಲ್ಯಣಾರ್ಯ್ಯನಾ ಚೇರಮಾಂಕಂಗೆ ಪೇ
ಳಿದ ಭಕ್ತ ಸತ್ಯೇಂದ್ರ ಚೋಳ ಕೃತಿ ಭಾವಚಿಂತಾರತ್ನವಮಳ ಕರ್ನಾ
ಹೃದಯ ಮಸ್ತಕ ವದನ ಸರ್ವಾಂಗ ಸೌಖ್ಯಕಾ
ಸ್ಪದವಖಿಳ ಸಜ್ಜನರ್ಗೆ ಪಂಚಾಕ್ಷರಿಯ ಮಹ
ತ್ವದ ಬೋಧೆಯಂದಡೋದಿದ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದೂ
॥ ೬೩ ॥

ಅಂತು ಸಂಧಿ ೯ಕಂ ಪದನು ೩[illegible]೧ಕ್ಕಂ ಭಾವಚಿಂತಾರತ್ನ ಸಮಾಪ್ತ
ಮಂಗಳ ಮಹಾ ಶ್ರೀ.

ವಿಷಯ : ಸತ್ಯೇಂದ್ರಚೋಳರಾಜನ ಕಥೆ.

ವಿಶೇಷ : ಸಮಗ್ರವಾಗಿದೆ. ಶಕಟರೇಫವನ್ನು ಬಳಸಿದ್ದರೂ ಕೆಲವು ಸರಿಯಾಗಿಲ್ಲ. ೩೧ನೆಯ ಪತ್ರದಲ್ಲಿ ಮುಗಿದ ಕೂಡಲೆ ' ಪ್ರಣಮ ಸಂಬಂಧ ' ಎಂಬ ವಿವರಣಾತ್ಮಕ ಗ್ರಂಥವಿದ್ದು ಅದೇ ಗರಿಯಲ್ಲಿ ಅಂತ್ಯಗೊಳ್ಳುತ್ತದೆ. ಇದಾದ ಅನಂತರ ಪ್ರತ್ಯೇಕ ಕ್ರಮಾಂಕದಿಂದ ಆರಂಭಿಸಿದ ಬಸವೇಶ್ವರನ ಪಂಚ ಸ್ತೋತ್ರ ಗ್ರಂಥವೊಂದಿದೆ.
[ಕ. ಹ. ಪ್ರ. ವ. ಸೂ. ತೃತೀಯ ಸಂಪುಟ ಪುಟ ೧೪೯–೧೯೩ ಕ್ರಮಾಂಕ 1200–1204 ನೋಡಿ.]

—ಕೆಆರ್‌ಎಸ್

245

ಕೆ. ೯೮೮/೩ ಭಾವಚಿಂತಾರತ್ನ ವಾರ್ಧಕ ಷಟ್ಪದಿ
೮.೨"×೨.೩" ಗುಬ್ಬಿಯ ಮಲ್ಲಣಾರ್ಯ ೧೫೧೩
೧೦೭-೧೩೯ ಪತ್ರ ೧೩ ಪಂಕ್ತಿ ೬೬ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಗುಬ್ಬೆ ಮಲ್ಯಣಾರ್ಯ ನಿರೂಪಿಸಿದ ಸತ್ಯೇಂದ್ರ ಚೋಳರಾಯನ ಕಾವ್ಯವ ಬರವುದಕ್ಕೆ ಶುಭಮಸ್ತು ॥ ಪಲ್ಲವ ॥
ಶ್ರೀವಿಮಲ ಗುಹನಮರಗುಂಡ ಮಲ್ಲೇಶ್ವರನ
ಸೇವಾನಿತ್ಯದಿಂದಿಳೆಯೊಳೊಗೆದಾ ಪ್ರಣವ
ಜೀವ ಪಂಚಾಕ್ಷರಿಯ ಬಿತ್ತರಿಸಿದಂಕುಲಶ್ಚಟೆಯಗಾನಂದದಿಂದಾ ॥
ಪದನು ॥ ಶ್ರೀಗುರು ಸದಾನಂದ ವಾಗೀಶವರದ ತಂಹಿ
ನಾಗಜಾರ್ದಾಂಗ ಮಹಿಮಾಗರಿಮ ಚರಣ ಸಕ
ಲಾಗಮ ಸ್ತುತ್ಯ ಶಶಿಭಾಗಭೂಷಿತ ಮಕುಟಯೋಗಿಜನ ಹೃಂನಿವಾಸಾ
ರಾಗಾದಿ ರಹಿತ ಸುಖಸೋಗರವಲಾ ನೀನು
ಭೋಗ ಮಲ್ಲೇಶ ಬಿಡದೀಗಮೆನ್ನಯ ಕೃತಿಯ
ಭೂಗಗನದಿಗ್ಪರಿತವಾಗಿ ಪಸರಿರುವಿನಂ ಸಾಗಿಸುವುದಳ್ಕಟಿಂದೆ ॥ ೧ ॥

ಅಂತ್ಯ : ಬಾಣಗುಣವಾರ್ಧಿವಿದು ಸಂದ ಸಕವರುಷದಿಂ
ಮೇಣಮಲ ವತ್ಸರಂ ಶ್ರೀಮುಖಂ ಕಾರ್ತ್ತಿಕ ದು
ರೀಣವಹ ಶುದ್ಧ ಸಪ್ತಮೀ ಶುಕ್ರವಾರವಾ ಶ್ರವಣ ನಕ್ಷತ್ರದಲ್ಲಿ
ಜಾಣನಾ ನಾಗಲಿಂಗಾಹ್ವಯನಸುತ ಶಿವ
ಪ್ರಾಣಲಿಂಗಪ್ಪನಾತ್ಮಜ ಚೇರಮಂಗೆಯ
ಕ್ಷೀಣವೆನೆ ಮಲ್ಯಣಾರ್ಯ್ಯಂ ನಿರೂಪಿಸಿದನೀ ಭಾವಚಿಂತಾರತ್ನಮಂ ॥೫೮॥

× × ×

ಯಿದಂ ಸಕಲ ಭಕ್ತಪದಪಂಕೇಜರೇಣು ಮ
ಸ್ತದ ಮಲ್ಲಿಣಾರ್ಯ್ಯನಾ ಚೇರಮಾಂಕಂಗೆ ಪೇ
ಳಿದ ಭಕ್ತ ಸತ್ಯೇಂದ್ರ ಚೋಳ ಕೃತಿ ಭಾವಚಿಂತಾರತ್ನವಮಳ ಕರ್ನ್ನ
ಹೃದಯ ಮಸ್ತಕ ವದನ ಸರ್ವ್ವಾಂಗ ಸೌಖ್ಯಕಾ
ಸ್ಪದವಖಿಳ ಸಜ್ಜನರ್ಗ್ಗೆ ಪಂಚಾಕ್ಷರಿಯ ಮಹ
ತ್ವದ ಬೋಧೆಯೆಂದೋದಿದ ಕೇಳಿದರಿಗಿಷ್ಟಸಿದ್ಧಿ ಸರ್ವರಿಗಪ್ಪುದೂ ॥೬೨॥
ಅಂತು ಸಂಧಿ ೯ಕ್ಕಂ ಪದನು ೩೭೧ಕ್ಕಂ ಮಂಗಳ ಮಹಾ ಶ್ರೀ. ರುಧಿರೋ
ದ್ಗಾರಿ ಸಂವತ್ಸರದ ಆಶ್ವೀಜಮಾಸ ಶುದ್ಧ ಪಾಡ್ಯ ಮಂಗಳವಾರದಲ್ಲು
ಭಾವಚಿಂತಾರತ್ನವ ಬರದು ಸಮಾಪ್ತಿಯಾಯಿತ್ತು ಸಂಪೂರ್ನ್ನ ಮಂಗಳ
ಮಹಾ ಶ್ರೀ.

ವಿಷಯ : ಸತ್ಯೇಂದ್ರ ಚೋಳರಾಜನ ಕಥೆ.

ವಿಶೇಷ : ಕೃತಿ ಸಮಗ್ರವಾಗಿದ್ದು ಶಕಟರೇಫವನ್ನು ಬಳಸಲಾಗಿದೆ. ಗ್ರಂಥಾಂತ್ಯ
ದಲ್ಲಿ ಕಾಲವಿಚಾರವಿದೆ. ಇದೇ ಕಟ್ಟಿನಲ್ಲಿ ಪ್ರಭುಲಿಂಗಲೀಲೆ, ಭೈರವೇಶ್ವರ
ಕಾವ್ಯ, ಗಣಾಡಂಬರ ಚಾರಿತ್ರ, ಭಿಕ್ಷಾಟನ ಚರಿತ್ರೆ ಎಂಬೀ ಗ್ರಂಥಗಳೂ
ಇವೆ.
[ಕ. ಹ. ಪ್ರ. ವ. ಸೂ. ತೃತೀಯ ಸಂಪುಟ ೧೮೯-೧೯೩ ಕ್ರಮಾಂಕ
1200-1204 ನೋಡಿ]

—ಕೆಆರ್‌ಎಸ

## 246

ಕ್ರ. ೧೧೫೯/೧೧ | ಭಾವಚಿಂತಾರತ್ನ | ವಾರ್ಧಕಷಟ್ಪದಿ

೨೦.೫"×೨" | ಗುಬ್ಬಿಯ ಮಲ್ಲಣಾರ್ಯ | ೧೫೧೩

೫೧-೧೦೩ ಪತ್ರ | ೧೨ ಪಂಕ್ತಿ | ೫೪ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ಸತ್ಯೇಂದ್ರ ಚೋಳರಾಯನ ಕಾವ್ಯ
ಭಾವಚಿಂತಾರತ್ನವೆಂಬ ದ್ವಯನಾಮವು. ಈ ಕಾವ್ಯಕ್ಕೆ ವಾರ್ಧಕ ಷಟ್ಪದಿ
ರಾಗ ನಾಟಿ ಪಲ್ಲವ :
ಶ್ರೀವಿಲಗುಹನಮರಗುಂಡ ಮಲ್ಲೇಶ್ವರನ
ಸೇವಾ ನಿಮಿತ್ಯದಿಂದಿಳೆಯೊಳೊಗೆದಾ ಪ್ರಣವ
ಜೀವ ಪಂಚಾಕ್ಷರಿಯ ಬಿತ್ತರಿಸಿದಂ ಕುಲಶ್ಚರೆಯಗಾನಂದದಿಂದಾ

ಪದ ॥ ಶ್ರೀಗುರು ಪದಾನಂದವಾಗೀಶ ವರದ ತುಹಿ
ನಾಗಜಾರ್ದಾಂಗ ಮಹಿಮಾ ಗರಿಯ ಚರಣಸಖ
ಲಾಗಮಸ್ತುತ್ಯ ಶಶಿ ಭಾಗಭೂಷಿತ ಮಕುಟಯೋಗೀಜನ ಹೃಂನಿವಾಸಾ

ರಾಗಾದಿ ರಹಿತ ಸುಖಸಾಗರನಲಾ ನೀನು
ಭೋಗ ಮಲ್ಲೇಶ ಬಿಡದೀಗಳೆನ್ನಯು ಕೃತಿಯು
ಭೂಗಗನ ದಿಗ್ಭರಿತವಾಗಿ ಪಸರಿಸುವಿನಂ ಸಾಗಿಸುವುದಳ್ಕರಿಂದೆ ॥ ೧ ॥

ಅಂತ್ಯ : ಇದು ಸಕಲ ಭಕ್ತಪದ ಪಂಕೇಜರೇಣು ಮ
ಸ್ತದ ಮಲ್ಲಣಾರ್ಯರಾ ಚೇರವಶಾಂಕಂಗೆ ಪೇ
ಳಿದ ಭಕ್ತ ಸತ್ಯೇಂದ್ರ ಚೋಳ ಕೃತಿ ಭಾವಚಿಂತಾರತ್ನವಮಳಕರ್ಣ
ಹೃದಯ ಮಸ್ತಕ ವದನ ಸರ್ವಾಂಗ ಸೌಖ್ಯಕಾ
ಸ್ಪದವಖಿಳ ಸಜ್ಜನಗೋ ಪಂಚಾಕ್ಷರಿಯ ಮಹ
ತ್ವದ ಭೋದೆಯೆಂದೊಡಿದ ಕೇಳಿದರ್ಗಿಷ್ಟಾರ್ಥಸಿದ್ಧಿ ಸರ್ವರಿಗಪ್ಪುದು ॥ ೬೩ ॥

ವಿಕೃತಿ ಸಂವತ್ಸರದ ಶ್ರಾವಣ ಬ ೧೦ ಗುರುವಾರ ಸತ್ಯೇಂದ್ರ ಚೋಳ ರಾಯನ ಪುಸ್ತಕ ಸಮಾಪ್ತ ಶ್ರೀಶ್ರೀಶ್ರೀ.

ವಿಷಯ : ಸತ್ಯೇಂದ್ರ ಚೋಳರಾಜನ ಕಥೆ.

ವಿಶೇಷ : ಪ್ರತಿ ಉತ್ತಮವಾಗಿದೆ. ಇದರೊಡನೆ ಸಾಸಲ ಭೈರವೇಶ್ವರ ಕಾವ್ಯ ಮೊದಲಾದ ಇತರ ಕೃತಿಗಳಿವೆ.

—ಹಕರಾ

247

| ಕೆ. ೧೧೬೮/೩ | ಭಾವಚಿಂತಾರತ್ನ | ವಾರ್ಧಕ ಷಟ್ಪದಿ |
|---|---|---|
| ೧೧.೫"×೨" | ಗುಬ್ಬಿಯ ಮಲ್ಲಣಾರ್ಯ | ೧೫೧೩ |
| ೭೦–೧೦೧ ಪತ್ರ | ೧೧ ಪಂಕ್ತಿ | ೫೨ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಶುಭಮಸ್ತು ॥ ನಿರ್ವಿಘ್ನಮಸ್ತು ॥ ಕಲ್ಯಾಣಮಸ್ತು ॥ ಗುಬ್ಬಿಯ ಮಲ್ಲಣಾರ್ಯರು ನಿರೂಪಿಸಿದ ಸತ್ಯೇಂದ್ರ ಚೋಳರಾಯನ ಕಾವ್ಯವ ಬರವುದಕ್ಕೆ ಶುಭಮಸ್ತು ॥

ವಾರ್ಧಕ ಷಟ್ಪದಿ ॥ ಪಲ್ಲವಿ ॥ ಶ್ರೀ ವಿಮಲ ಗುಹನಮರಗುಂಡ ಮಲ್ಲೇಶ್ವರನ
ಸೇವಾನಿಮಿತ್ತದಿಂದಿಳೆಯೊಳಗೆದಾ ಪ್ರಣವ
ಜೀವ ಪಂಚಾಕ್ಷರಿಯ ಬಿತ್ತರಿಸಿದಂ ಕುಲಚ್ಚರೆಯುಗಾನಂದ–ದಿಂದಾ

ಪದ ॥ ಶ್ರೀ ಗುರು ಸದಾನಂದ ವಾಗೀಶ ವರದ ತುಹಿ
ನಾಗಜಾರ್ಧಂಗ ಮಹಿಮಾ ಗರಿಮ ಚರಣ ಸಖ
ಲಾಗಮಸ್ತುತ್ಯ ಶಶಿಭಾಗ ಭೂಷಿತ ಮಕುಟ ಯೋಗಿಜನಹೃನ್ನಿವಾಸಾ

ರಾಗಾದಿ ರಹಿತ ಸುಖಸಾಗರನಲಾ ನೀನು
ಭೋಗ ಮಲ್ಲೇಶ ಬಿಡದೀಗಳೆಂನಯು ಕೃತಿಯು
ಭೂಗ ಘನ ದಿಗ್ಬರಿತಮಾಗಿ ಪಸರಿಸುವಿನಂ ಸಾಗಿಸುವುದಳ್ಕರಿಂದೆ ॥ ೧ ॥

**ಅಂತ್ಯ :** ಬಾಣ ಗುಣ ವಾರ್ಧಿ ವಿದ್ದು ಸಂದ ಶಕ ವರುಷದಿಂ
ಮೇಣು ಸಂವತ್ಸರಂ ಶ್ರೀಮುಖಂ ಕಾರ್ತೀಕ ದು
ರೀಣವಹ ಶುದ್ಧ ಸಪ್ತಮಿ ಶುಕ್ರವಾರವಾ ಶ್ರವಣ ನಕ್ಷತ್ರದಲ್ಲಿ
ಜಾಣೆನಿಂ ನಾಗಲಿಂಗಯ್ಯಗಳ ಸುತ ಶಿವ
ಪ್ರಾಣಿ ನಿಂಗಪ್ಪನಣುಗಂ ಚೇರಮಾಂಕಗ
ಕ್ಷೀಣವೆನೆ ಮಲ್ಯಣಾರ್ಯಂ ನಿರೂಪಿಸಿದನೀ ಭಾವಚಿಂತಾರತ್ನಮಂ ॥ ೫೮ ॥

× × × ×

ಇದು ಸಕಲ ಭಕ್ತಪದಪಂಕೇಜರೇಣುಮ
ಸ್ತದ ಮಲ್ಲಣಾರ್ಯನಾ ಚೇರಮಾಂಕಂಗೆ
ಪೇಳಿದ ಭಕ್ತ ಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನಮುವಳಕರ್ಣಾ
ಹೃದಯ ಮಸ್ತಕ ವದನ ಸರ್ವಾಂಗ ಸೌಖ್ಯಕಾ
ಸ್ಪದವಖಿಳ ಸಜ್ಜನರ್ಗೆ ಪಂಚಾಕ್ಷರಿಯ ಮಹ
ತ್ವದ ಬೋದೆಯುಂದಡೋದಿದ ಕೇಳಿದರ್ಗಿಷ್ಟಸಿದ್ಧಿ ಸರ್ವರಿಗಪ್ಪುದೂ
॥ ೬೩ ॥

ಅಂತು ಸಂಧಿ ೯ಕ್ಕಂ ಪದನು ೩೭೧ಕ್ಕಂ ಮಂಗಳ ಮಹಾಶ್ರೀ.

**ವಿಷಯ :** ಸತ್ಯೇಂದ್ರಚೋಳರಾಜನ ಕಥೆ.

**ವಿಶೇಷ :** ಸ್ಫುಟಾಕ್ಷರ. ಇದೇ ಕಟ್ಟಿನಲ್ಲಿ ಭಿಕ್ಷಾಟನಚರಿತೆ, ಭೈರವೇಶ್ವರಕಾವ್ಯ ಮತ್ತು ರಾಜೇಂದ್ರವಿಜಯ ಎಂಬ ಗ್ರಂಥಗಳಿವೆ.

—ವೈಸಿಬಿ

## 248

| ಕ. ೧೨೭೨/೧೪ | ಭಾವಚಿಂತಾರತ್ನ (ಟೀಕು) | ಟೀಕು |
|---|---|---|
| ೧೧"×೧.೯" | ಗುಬ್ಬಿಯ ಮಲ್ಲಣಾರ್ಯ | ೧೫೧೩ |
| ೪೪–೫೦ ಪತ್ರ | ೧೦ ಪಂಕ್ತಿ | ೪೮ ಅಕ್ಷರ |

**ಆದಿ :** ಶ್ರೀ ಗುರುಬಸವಲಿಂಗಾಯ, ನಮಃ ॥ ಭಾವಚಿಂತಾರತ್ನದೊಳಗೆ ಶ್ರೀ ವಿಮಲಗುಹಯೆಂಬ ಪಲ್ಲವಕ್ಕೆ । ತ್ರಿವಿಧಾರ್ಥಮುಂಟು ॥ ಶ್ರೀ । ಜ್ಞಾನ ದಾನೈಶ್ವರ್ಯವನುಳ್ಳಂಥ ॥ ವಿಮಲ । ಅನಿಂದಿತನಾದಂಥ । ಗುಹಂ।

ಷಣ್ಮುಖನು । ಅಮರ ಗುಂಡ ಮಲ್ಲೇಶ್ವರನ। ಅಮರಗುಂಡದ ಮಲ್ಲಿಕಾರ್ಜುನನ । ಸೇವಾನಿಮಿತ್ಯದಿಂದೆ । ಸೇವಾ ಕಾರಣದಿಂದೆ ॥ ಯಿಳೆಯುಳ್ । ಪೃಥ್ವಿಯಲ್ಲಿ । ವಗೆದು । ಹುಟ್ಟಿ । ಆ ಪ್ರಣವ ಜೀವ ಪಂಚಾಕ್ಷರಿಯು । ಆ ॥ ಹಿಂದೆ ಹೇಳಿದ ಪ್ರಣವ ಜೀವ । ಪ್ರಣವವೆ ಪ್ರಾಣಕಳೆಯಾಗುಳ್ಳ । ಪಂಚಾಕ್ಷರಿಯು । ಪಂಚಾಕ್ಷರಿಯ ಮಂತ್ರವನು ಕುಲಚ್ಚಜಿಯಾಗಿ । ಕುಲಚಜಿ ಯೆಂಬ ಶಿವಶರಣನಿಗೆ । ಆನಂದದಿಂದೆ । ಸಂತೋಷದಿಂದೆ । ಬಿತ್ತರಿಸಿದಂ । ಹೇಳಿದನೂ ॥ ೧ ॥

**ಅಂತ್ಯ :** ಅಭಿಜನ । ವಿದ್ವಜ್ಜನರುಗಳಿಗೆ । ಪುಂಡರೀಕ । ಕಲ್ಪವೃಕ್ಷವಾದಂಥಾ । ವಾಮದ್ದೋಹದೂದ್ಭುತ । ವಾಮ । ಚಿಚ್ಛಕ್ತಿಯಾದ । ಪಾರ್ವತಿಯು । ಅರ್ದ್ಧ । ಅರ್ಧಾಂಗದಲ್ಲುಳ್ಳಂಥಾ । ವೂಹ । ಸದಸದ್ವಸ್ತು ವಿಚಾರವನು । ದ । ಕಾಡುತ್ತಿರ್ದ್ದಂಥಾ । ವುದ್ಭೂತ । ಹುಟ್ಟಲ್ಪಟ್ಟ ಮಹನೀಯ । ಅಧಿಕ ವಾದ । ಮಾನ । ಪೂಜ್ಯವಾದ । ಸ್ಥಿರ । ನಿತ್ಯವಾದ ಘನಭಾರ । ಮೇಘ ಗ್ನಿಯು । ಶತಕೋಟಿ । ವಜ್ರವು । ಕೋಟಿ । ಅನೇಕರುಗಳ ಹಾಂಗೆ ತೇಜಃ ಬೆಳಗುತ್ತಿರ್ದ್ದ । ವಿರೋಚನ । ಪ್ರಕಾಶವನುಳಂಥಾ । ಭೂರನಂತ ನ್ನನ್ನಯು । ಸುವಿಶ್ವಕ್ಕುಂಡ । ಭೂಃ ॥ ಭೂಮಿಯಲ್ಲಿಯ । ಅನಂತ । ಬಹಳವಾದ । ಸತ್ । ಸತ್ಪುರುಷರುಗಳೆಂಬ । ನಯನಯವಾದ। ಸು । ಲೇಸಾದ । ವಿಶ್ವತ್ಕುಂಡ । ಉದಕದಲ್ಲಿ । ಜನಿತೋಸ್ರಮಾಲಯೆನಿಪ । ಜನಿತ । ಹುಟ್ಟಲ್ಪಟ್ಟ ಕಮಲಗಳಿಗೆ । ವುಸ್ರಮಾಲಿಯೆನಿಪ । ಸೂರ್ಯ ನೆನಿಸುವಂಥ । ಅಮರಗುಂಡದ ಮಲ್ಲಿನಾಥ । ಯೆಲೆ ಅಮರಗುಂಡದ ಮಲ್ಲೇಶ್ವರನೆ । ಯಮ್ಮನು । ನಮ್ಮನು । ರಕ್ಷಿಪುದು । ಪಾಲಿಪುದೂ ॥

**ವಿಷಯ :** ಸತ್ಯೇಂದ್ರ ಚೋಳರಾಜನ ಕಥೆ.

**ವಿಶೇಷ :** ಇದೇ ಕಟ್ಟಿನಲ್ಲಿ ವೈರಾಗ್ಯ ಷಟ್ಪದಿ, ಗಣಸಹಸ್ರನಾಮ, ಚೆನ್ನಬಸವೇಶ್ವರ ಪುರಾಣದ ನಾಂದ್ಯ, ದೇವೀ ನಾಂದ್ಯ, ಭಿಕ್ಷಾಟನಚರಿತೆ, ಶಿವಲಿಂಗ ಷಟ್ಪದಿ ಮೊದಲಾದ ೧೭ ಕೃತಿಗಳಿವೆ.

—ವೈಸಿಬಿ

## 249

| ಕೆ. ೧೩೯೯/೩ | **ಭಾವಚಿಂತಾರತ್ನ** | ವಾರ್ಧಕ ಷಟ್ಪದಿ |
|---|---|---|
| ೧೦.೩"×೨" | ಗುಬ್ಬಿಯ ಮಲ್ಲಣಾರ್ಯ | ೧೫೧೩ |
| ೪೧–೬೯ ಪತ್ರ | ೧೨ ಪಂಕ್ತಿ | ೬೦ ಅಕ್ಷರ |

**ಆದಿ :** ಶ್ರೀಗುರು ಚೆನ್ನಬಸವಲಿಂಗಾಯ ನಮಃ ॥ ಶ್ರೀಮದ್ರಾಜಾಧಿರಾಜ ಬಸವ ದಂಡಾಧೀಶಾಯ ನಮಃ × × ಭಾವಚಿಂತಾರತ್ನಾ ॥ ರಾಗ ನಾಟಿ ॥ ಪಲ್ಲವ॥

ಶ್ರೀ ವಿಮಲಗುಹನಮರಗುಂಡ ಮಲ್ಲೇಶ್ವರಂ
ಸೇವಾನಿಮಿತ್ಯದಿಂದಿಳೆಯೊಳೊಗೆದಾ ಪ್ರಣವ
ಜೀವಪಂಚಾಕ್ಷರಿಯ ಬಿತ್ತರಿಸಿದಂ ಕುಲಚ್ಛರೆಯಗಾನಂದದಿಂದೆ ॥ ಪದನೂ ॥
ಶ್ರೀಗುರು ಸದಾನಂದ ವಾಗೀಶವರದ ತುಹಿ
ನಾಗಜಾರ್ಧಾಂಗ ಮಹಿಮಾಗರಿಮಚರಣ ಸಕ
ಲಾಗಮಸ್ತುತ್ಯ ಶಶಿಭೋಗ ಭೂಷಿತ ಮಕುಟ ಯೋಗಿಜನ ಹೃನ್ನಿವಾಸ
ರಾಗಾದಿ ರಹಿತ ಸುಖಸಾಗರನಲಾ ನೀನು
ಭೋಗಮಲ್ಲೇಶ ಬಿಡದೀಗವೆಂಸಯ ಕೃತಿಯ
ಭೂಗಗನ ದಿಗ್ಭರಿತವಾಗಿ ಪಸರಿಸುವಿನಂ ಸಾಗಿಸುಉದಳ್ಕರಿಂದೆ ॥ ೧ ॥

**ಅಂತ್ಯ :** ಯಿದು ಸಕಲಭಕ್ತಪದಪಂಕೇಜರೇಣು ಮ
ಸ್ತದ ಮಲ್ಯಣಾರ್ಯನಾ ಚೇರಮಾಂಕಂಗೆ ಬೆಸ
ಸಿದ ಭಕ್ತ ಸತ್ಯೇಂದ್ರಚೋಳಕೃತಿ ಭಾವಿಚಿಂತಾರತ್ನವಮಳ ಕರ್ನಾ
ಹೃದಯ ಮಸ್ತಕ ವದನ ಸರ್ವಾಂಗ ಸೌಖ್ಯಕಾ
ಸ್ಪದವಖಿಳ ಸಜ್ಜನರ್ಪಂಚಾಕ್ಷರಿಯ ಮಹ
ತ್ವದ ಬೋಧೆಯೆಂದಿದಂ ವೋದಿ ಕೇಳ್ದವರಿಷ್ಟಸಿದ್ಧಿ ಸರ್ವರಿಗಪ್ಪುದು
ಅಂತು ಸಂಧಿ ೯ಕ್ಕಂ ಪದನು ೩೭೭ಕ್ಕಂ ಮಂಗಳ ಮಹಾಶ್ರೀಶ್ರೀ.
ಪರಾಭವಸಂವತ್ಸರದ ಸ್ರಾವಣ ಶುದ್ಧ ಶಶಿವಾರದಲ್ಲಂ ಬೋಳಮಲ್ಲಿ
ಕಾರ್ಜುನದೇವರು ಸಕಳ ವೀರಮಾಹೇಶ್ವರರ ಶ್ರೀಪಾದಕೃಪೆಯಿಂದ ಬರದ
ಭಾವಚಿಂತಾರತ್ನ ಸಂಪೂರ್ನ ಸಮಾಪ್ತ ಮಂಗಳ ಮಹಾಶ್ರೀಶ್ರೀ.

**ವಿಷಯ :** ಸತ್ಯೇಂದ್ರಚೋಳರಾಜನ ಕಥೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಭಿಕ್ಷಾಟನಚರಿತೆ ಮೊದಲಾದ ೬ ಕಾವ್ಯಗಳಿವೆ.

—ಜಜಿಎಂ

## 250

| ಕೆ. ೧೮೨೬/೪ | **ಭಾವಚಿಂತಾರತ್ನ** | ವಾರ್ಧಕ ಷಟ್ಪದಿ |
|---|---|---|
| ೮.೨"×೧.೬" | ಗುಬ್ಬಿಯ ಮಲ್ಲಣಾರ್ಯ | ೧೫೧೩ |
| ೧-೨೨ ಪತ್ರ | ೯ ಪತ್ರ | ೪೨ ಅಕ್ಷರ |

**ಆದಿ :** ಶ್ರೀಗಿರಿಮಲ್ಲಿಕಾರ್ಜುನಸ್ವಾಮಿಯವರ ದಿವ್ಯಚರಣಾರವಿಂದಂಗಳೆ ಗತಿ ॥ ಶ್ರೀ ಗುರುಸ್ವಾಮಿಗಳ ಪಾದಪದ್ಮಂಗಳೆ ಗತಿ ॥ ಅರಸಿ ನಿಂಗಾಂಬಿಕೆ ಗ್ನಾನದಿಂದೊಗೆದ ಚನಿವೀರಸ್ವಾಮಿಗಳ ಶಿಷ್ಯ ಸೋಲೂರ ಬಸಪ್ಪಶೆಟ್ರು ಅರಸಿ

ಗುರುಸಿದ್ದಂಮ್ಮನ ಬಾಲಕ ಮಲ್ಲಸೆಟ್ಟಿ ಸತ್ಯೇಂದ್ರ ಚೋಳರಾಯನ ಕಾವ್ಯ
ಭಾವಚಿಂತಾರತ್ನ ಬರವುದಕ್ಕೆ ಶುಭಮಸ್ತು × × × ಶ್ರೀರಸ್ತೂ
ವಾರ್ಧಿಕಷಟ್ಪದಾ
ಶ್ರೀ ವಿಮಲಗುಣನಮರಗುಂಡ ಮಲ್ಲೇಶ್ವರನು
ಸೇವಾನಿಮಿತ್ತದಿಂದಿಳೆಯೊಳಗೆವಾ ಪ್ರಣವ
ಜೀವ ಪಂಚಾಕ್ಷರಿಯ ಬಿತ್ತರಿಸಿದಂ ಕುಲಶ್ಚೆರೆಯುಗಾನದಿಂದಾ ॥ ಪದ
ಶ್ರೀ ಗುರುಸದಾನಂದ ವಾಗೀಶವರದ ತುಹಿ
ನಾಗಜಾರ್ಧಾಂಗ ಮಹಿಮಾಗರೆಮಚರಣಸಕ
ಲಾಗಮಸ್ತುತ್ಯ ಶಶಿಭಾಗಭೂಷಿತ ಮಕುಟಯೋಗಿಜನಹೃನ್ನಿವಾಸಾ
ರಾಗವಿರಹಿತ ಪುಕಸಾಗರನಲಾನಿನು
ಭೋಗಮಲ್ಲೇಶ ಬಿಡದೀಗಮೆಂನ್ನಯ ಕೃತಿಯು
ಭೂಗಗನ ದಿಗ್ವರಿತಮಾಗಿ ಪಸರಿಸುವಿನಂ ಸಾಗಿಸುವುದಳ್ಕರಿಂದೆ ॥ ೧ ॥

**ಅಂತ್ಯ :** ವೈರಿಭೂಮಿಪರ ವಕ್ಷವನೊದೆವ ತೆರದೆ ಚರ
ಣಾರವಿಂದಮನಾಡಿಪಂ ತನಗೆ ಮುಂದೆ
ಮಾರಾರಿಪ್ರಸನ್ನ ಕಾಲದೊಳಾಗಸದೆ ಬರ್ಪ ಮಣಿಕಚಿತ ಪುಷ್ಪಕವನೂ
ಆರೈವ ತೆರದೆ ಲಂಭಣ ರತ್ನ ಕಂತುಕವ
ಹಾರಾಗಮಂ ನೋಳ್ಪನಂಗಲೋಹಿಗಳಂ ಕು
ಮಾರನಪಹಾಸ್ಯಮಂ ಮಾಳ್ಪಂತೆ ನಸುನಗುವನ್ನೆ ಬಾಲಲೀಲೆಯಲ್ಲಿ ॥ ೬ ॥

**ವಿಷಯ :** ಸತ್ಯೇಂದ್ರಚೋಳನ ಕಥೆ.

**ವಿಶೇಷ :** ಅಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಭಕ್ತರ ನಡೆ ಮುಂತಾದ ೪ ಕೃತಿಗಳಿವೆ.

—ಜಜಿಎಂ

## 251

ಕೆ. ಎ. ೬೪೩/೨ — **ಭಾವಚಿಂತಾರತ್ನ (ಸಟೀಕು)** — ವಾರ್ಧಕಷಟ್ಪದಿ. ಟೀಕು
೧೦.೪"×೯.೪" — ಗುಬ್ಬಿಯ ಮಲ್ಲಣಾರ್ಯ — ೧೫೧೩
೫೭–೬೧ ಪುಟ — ೨೦ ಪಂಕ್ತಿ — ೨೧ ಅಕ್ಷರ

**ಆದಿ :** ಭಾವಚಿಂತಾರತ್ನ.

ಎಂಟುಲಕ್ಷ ಅರುವತ್ತುನಾಲ್ಕುಸಾವಿರ ವರುಷ ಎರಡು ಪಾದವ ಧರಿಸಿಲ್ಲಿ ಸದ್ಧರ್ಮದ ವಿತರಣವ ಲೋಕಕ್ಕೆ ಕಾಣಿಸಿ ಮೆರೆದ ಶೋಭಿಸಿದ ಪುರುಷನ ಅರ್ಥಂಗಳೊಳು ಆತ್ಮನಿಗೆ ಬೇಕಾದ ನಾಲ್ಕು ಫಲಂಗಳೊಳು.

× × ×

ಪದ್ಯ ॥ ಗೌತವಃಂ ಕ್ಷಾಮದೊಳು ಪಾರ್ವರಂ ಸಲಹೆ ಬಳಿ
ಕಾತಂಗೆ ಗೋವಧೆಯನವರು ಶಪಿಸಿ ತಾ ಪಡೆದ
ಜಾತನಾಗಂಗೆಯಂ ಮುನಿಯು ಶಪಿಸಲು ನೀಚದ ಋಷಿವನವನೆಯ್ದೆ
ಖಳರಂ ।
ಸ್ತೋತ್ರ ಕ್ರಿಯಾಜ್ಞಾನ ಆತ್ಮಪಾದಂಗಭವ
ಸೋತು ನಿರವಿಸಿ ಸಂದಿಯೆ ಸುಖಾವಹಮೂರ್ತಿ
ನೂತನಾಚಾರ್ಯಂಗೆ ನಯನತ್ರಯಂ ಬೋಧೆಯಿಂದ ರಕ್ಷಿಸಿದನವರಂ ॥

ಟೀಕು ॥ ಗೌತಮಂ, ಗೌತಮ ಋಷಿಯು, ಕ್ಷಾಮದೊಳು, ಬರಗಾಲದಲ್ಲಿ.

**ಅಂತ್ಯ:** ಪದ್ಯ॥ ಎಲೆ ಚೋಳ ಪಂಚವಿಂಶತಿಲೀಲೆಗಳ ಕಥೆಯ
ನೊರೆದು ಕೇಳ್ದವರಪ್ಪ ಮದವನುರೆ ಕೆಡೆ ಮೆಟ್ಟಲಂ
ಡಲೆದು ಸಪ್ತವ್ಯಸನದೆಳೆಯಂ ಸ್ವೈರಿಪುಡುವರ್ಗಮಃಂ ಕಿತ್ತು ಬಿಸುಟು
ಬಂದೊಳಂತಃಕರಣ ಚಾತುಷ್ಟಯಂಗಳ
ಗ್ಗಳಿಕೆಯಂ ತೀರ್ಚಿ ಪಡೆವರು ಭೋಗ ಮೋಕ್ಷಗಳ
ಅಲಘುಪದವಿಯನೆಂದು ಪೇಳೆ ನಾಚಿದನಾಚಾರ್ಯ ಅಘತಿಮಿರಸೂರ್ಯ ॥

ಟೀಕು ॥ ಎಲೆ ಚೋಳ–ಭೋ ಚೋಳರಾಯ × × × ವೈರಿ ಷಡುವರ್ಗಮಂ –ಶತ್ರುವಾದ ಆರು ವರ್ಗವನು ಕಿತ್ತು ಕೀಳು–ಉತ್ಪಾಟನೆ ಎಂದು ವಿನರ್ವ ನಾಚ ಎಂದು ಬಿಸುಟು ಬಿಸಾಟು, ಕರ.

**ವಿಷಯ :** ಸತ್ಯೇಂದ್ರಚೋಳರಾಜನ ಕಥೆ.

**ವಿಶೇಷ :** ಅಸಮಗ್ರ ಪ್ರತಿ. ಇದನ್ನು ಮದರಾಸು ಪ್ರಾಚ್ಯಕೋಶಾಗಾರದಲ್ಲಿ 13–8–25 ರಲ್ಲಿ 19–1–21ನೇ ಓಲೆ ಪ್ರತಿಯಿಂದ ನಕಲುಮಾಡಿದ್ದಾರೆ. ಇದರ ಜೊತೆಯಲ್ಲಿ 'ಚೆನ್ನಬಸವರಾಜದೇವರು ಉಳಿವಿಗೆ ಚಿತ್ತೈಸಿದ ಪ್ರಸ್ತಾವದ ವಚನ' ಎಂಬ ಗ್ರಂಥವೂ ಇದೆ.

—ಬಿಎಸ್ಎಸ್

## 252

| ಕೆ. ೧೫೪೩/೯ | ಭಾವಚಿಂತಾರತ್ನದ ನಾಂದ್ಯ | ವಾರ್ಧಕ ಷಟ್ಪದಿ |
|---|---|---|
| ೧೭.೨"×೭.೯" | ಗುಬ್ಬಿಯ ಮಲ್ಲಣಾರ್ಯ | ೧೫೧೩ |
| ೨೯–೩೭ ಪತ್ರ | ೯ ಪಂಕ್ತಿ | ೫೬ ಅಕ್ಷರ |

**ಆದಿ :** ಶಿವಪೂಜೆದೇವರು ನಿರೂಪಿಸಿದ ನಾಂದ್ಯ. ವಾರ್ದ್ಧಿಕ ಪದ ॥
ಶ್ರೀಗುರು ಸದಾನಂದ ವಾಗೀಶ ವರದ ತುಹಿ
ನಾಗಜಾರ್ದ್ಧಂದಂಗ ಮಹಿಮಾಗರಿಮ ಚರಣ ಸಖ

ಲಾಗಮ ಸ್ತುತ್ಯ ಶಶಿಭಾಗಭೂಷಿತ ಮಗುಟ ಯೋಗಿಜನ ಹೃನ್ನಿವಾಸಾ
ರಾಗಾದಿರಹಿತ ಸುಖಸಾಗರನಲಾ ನೀನು
ಭೋಗಮಲ್ಲೇಶ ಬಿಡದೀಗಳೆಂನಯ ಕೃತಿಯ
ಭೋಗ ಗಗನ ದಿಗ್ಭರಿತಮಾಗಿ ಪಸರಿಸುವಿನಂ ಸಾಗಿಸುವುದಳ್ಕರಿಂದೆ ॥ ೧ ॥

ಅಂತ್ಯ : ಜಯ ಜಯ ಗಿರಿಶ ಜಯಜಯ ಕೃಷ್ಣಗಳತೆ
ಜಯ ಜಯಂ ರುದ್ರದೋರ್ದ್ದಂಡ ಜಯ ಸುಚಿದ್ಘನಪಿಂಡ
ಜಯ ಜಯ ಜಗದ್ಗುರುವೆ ಜಯ ಜಯ ಪರಾತ್ಪರವೆ ಜಯ ಸರ್ವಭವನೆ ಶಿವನೆ
ಜಯಂ ಮೃಡ ಮಹಾರಕ್ಷು ಜಯ ಹರಲಲಾಪಾಕ್ಷ
ಜಯಂ ಶಕ್ತಿ ನಿಜರುಪ ಜಯಶಿ ಕಾಳಾಪ
ಜಯ ಪಂಚಕೃತ್ಯ ಸಂಸ್ತುತ್ಯಯುಂದಂ ಚೋಳರಾಯಂನೈರ್ಮಲ್ಯ ಕಾಯಶಾ ॥ ೨೭ ॥
ಭಾವಚಿಂತಾರತ್ನದ ನಾಂದ್ಯ ಸಮಾಪ್ತ ಮಂಗಳ ಮಹಾಶ್ರೀ.

ವಿಷಯ : ಈ ಕಾವ್ಯದ ಆದಿಯಲ್ಲಿರುವ ಸ್ತುತಿ ಪದ್ಯಗಳು.

ವಿಶೇಷ : ಇದರಲ್ಲಿ ೨೭ ಪದ್ಯಗಳಿವೆ. ಶಕಟರೇಫವಿದೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಮರುಳ ಸಿದ್ಧಸ್ವಾಮಿಗಳು ನಿರೂಪಿಸಿದ ನಾಂದ್ಯ ಇತ್ಯಾದಿ ೩೧ ಕೃತಿಗಳಿವೆ.

—ಕೆಆರ್‌ಎಸ್

## 253

ಕೆ. ೭೯೯ | ಭಾವಚಿಂತಾರತ್ನದೊಳಗಣ ಘಟ್ಟಿ ಘಟ್ಟಿ ಪದಗಳ ಅರ್ಥ | ಗದ್ಯ
೧೫"×೨.೩" | ? | ?
೧-೧೩ ಪತ್ರ | ೧೨ ಪಂಕ್ತಿ | ೭೫ ಅಕ್ಷರ

ಆದಿ : ಶ್ರೀ ಗುರುಸಿದ್ಧಲಿಂಗಾಯ ನಮಃ । ಭಾವಚಿಂತಾರತ್ನದೊಳಗಣ ಘಟ್ಟಿ ಘಟ್ಟಿ ಪದದರ್ಥವ ಬರೆವೆಂ ॥ ಮೊದಲಾ ಪಲ್ಲ ॥ ಇದಕ್ಕೆ ತ್ರಿವಿದಾರ್ಥ ವುಂಟು । ಶ್ರೀ ಜ್ಞಾನದಾನೈಶ್ವರ್ಯವನುಳ್ಳಂಥಾ । ವಿಮಲ । ಅನಿಂದಿತ ನಾಥಂಥ । ಗುಹಂ । ಷಣ್ಮುಖನು ಅಮರಗುಂಡ ಮಲ್ಲೇಶ್ವರನ । ಅಮರಗುಂಡದ ಮಲ್ಲಿಕಾರ್ಜುನನ । ಸೇವಾನಿಮಿತ್ತದಿಂದೆ । ಭವೆ । ಕಾರಣದಿಂದ । ಇಳೆಯೊಳ್ । ಪೃಥ್ವಿಯಲ್ಲಿ ವಗೆದು । ಹುಟ್ಟಿ । ಆ ಹಿಂದೆ ಹೇಳಿದ ಪ್ರಣಯ ಜೀವ । ಪ್ರಣಮವೇ ಪ್ರಾಣಕಳೆಯಾಗುಳ್ಳ । ಪಂಚಾಕ್ಷರಿ । ಪಂಚಾಕ್ಷರಿ ಮಂತ್ರವನು । ಕುಲಚರಿಯುಗೆ । ಕುಲಚರಿಯ

ನೆಂಬ ಶಿವಶರಣನಿಗೆ। ಆನಂದದಿಂದೆ। ಸಂತೋಷದಿಂದೆ। ಬಿತ್ತರಿಸಿದಂ। ಹೇಳಿದನು ॥ ೧ ॥

ಅಂತ್ಯ : ಶ್ರೀ ಮೂರನೆಯ ಪ್ರಕರಣದ ತುಣುಕು ನುಡಿ ನಾದಬಿಂದುಗಳಗ್ರ ಗುರು × × × ಕೀಲಕಾದಿಗಳ ಪದಹತಿಯಿಂದೆನುರ್ಗೆ ಕೀಲಕಾದಿಗಳ ಪರ್ವತ ಮೊದಲಾದವನ್ನೂ। ಪದಹತಿಯಿಂದ। ಚರಣಹೊಡೆತದಿಂದ। ನುರ್ಗೆ। ಚೂರ್ಣೀಕೃತ ಮಾಡಲು ॥ ೨ ॥

ವಿಷಯ : ಭಾವಚಿಂತಾರತ್ನದಲ್ಲಿ ಬಂದಿರುವ ಕ್ಲಿಷ್ಟಪದಗಳ ಅರ್ಥ.

ವಿಶೇಷ : ಅಕ್ಷರಗಳು ಸ್ಫುಟವಾಗಿವೆ. ೧೨, ೧೩ನೆಯ ಪತ್ರಗಳಲ್ಲಿ ಮಧ್ಯೆ ಮಧ್ಯೆ ಸ್ಥಳ ಬಿಟ್ಟು ಪ್ರತಿ ಮಾಡಿರುತ್ತಾನೆ.

—ಎಸ್‌ಬಿ

## 254

| ಕೆ. ೧೧೯೩/೬ | ಭಾವಪೂಜೆ | ವಾರ್ಧಕ ಷಟ್ಪದಿ |
|---|---|---|
| ೧೩.೪ × ೧.೬″ | ? | ? |
| ೮೨-೮೩ ಪತ್ರ | ೭ ಪಂಕ್ತಿ | ೫೨ ಅಕ್ಷರ |

ಆದಿ : ಪ್ಲ ॥ ವುದೆಯರಾಗ ॥

ತಿಳಿದು ಮಾಡುವದು ತದ್ಭಕ್ತಿ ಭಾವಾರ್ಚನೆಯ
ಸ್ಥಳ ಕುಳ ಉ ಷಟ್ಕಮು ಸ್ವರ ವರ್ನ ಮಾತೃಕೆಯ
...ನಿಜ ಬೀಜ ಮಂತ್ರ ಪ್ರಣವಾಕ್ಷರಿಯ ತಳೆದು ತವೆ
ತತ್ವಮಸಿಯಾ ॥

ಅಂತ್ಯ : ಅಥ ಮೂರ್ಧ್ನಿ ಮಂಟಪದಿ ಯೋಗ ಮಹಾಶಕ್ತಿಯೊಳು
ಮಥನದಷ್ಟಾದಶಾನಿಲರು ನಿಲೆ ಮಾತ್ರೆಗಳೂ
ಮಿತಿಪನ್ನ ಸಾಸಿರದಳಾಬ್ಜ ಶಶಿ ಮಾಡಲುಂನತ ಕಿರುಣವಿಷ್ಟದೊಳೂ
ಶ್ರುತವಿಶ್ವತ ಶ್ರೋತ್ರಮುಖ ವಿಶಾತಾಕ್ಷಿಗಳು
ದ್ರುತವಿಶ್ವತೋಬಾಹು ವಿಶ್ವತತ್ವಕನಚಳ
ಪ್ರತಿರಹಿತ ಸೋಹಂಪ್ರಕಾಶ ಶ್ರೀಗುರು ವಿಶ್ವಪತಿ ಪೂಜೆ ಭಾವನೆ
ಯೊಳು ॥ ೭ ॥

ಭಾವಪೂಜೆಯ ಪದ ಪರಿಪೂರ್ನ ಮಂಗಳ ಮಹಾಶ್ರೀ

ವಿಷಯ : ಭಾವಪೂಜಾ ವಿಧಾನ ನಿರೂಪಣೆ.

ವಿಶೇಷ : ಇದೇ ಕಟ್ಟಿನಲ್ಲಿ, ಮುಕ್ತಿನಕಂತೆ ವಚನ, ದೀಕ್ಷಾಬೋಧೆ ಇತ್ಯಾದಿ ಕೃತಿಗಳಿವೆ.

—ವೈಸಿಬಿ

ಬೇಱಿಲ್ಲವೆಂದು ಧರಿತ್ರಿಗೆ
ಸಾಱಿದನಾ ಕೇಶಿರಾಜ ದಂಡಾಧೀಶಂ ॥ ೧೧೦ ॥
ಮಂತ್ರದ ಮಾಹತ್ವದ ಕಂದ ಸಮಾಪ್ತ ಮಂಗಳ ಮಹಾ ಶ್ರೀ

ವಿಷಯ : 'ಓಂ ನಮಃ ಶಿವಾಯ' ಎಂಬ ಮಂತ್ರದ ಮಹಿಮೆ.

ವಿಶೇಷ : ಶಕಟರೇಫದ ಪ್ರಯೋಗವಿದೆ. ಇದೇ ಕಟ್ಟಿನಲ್ಲಿ ಮರುಳದೇವರ ಕಂದ, ಅಕ್ಷರಮಾಲಿಕಾಗದ್ಯ, ಶಿವಾಧವಶತಕ, ಪುಷ್ಪಾಷ್ಟಕ ಇವೇ ಮೊದಲಾದ ಒಟ್ಟು ೨೮ ಕೃತಿಗಳಿವೆ.

—ವೈಸಿಜಿ

## 59

| ಕ. ೯೮೪ | ಮಂತ್ರ ಯಂತ್ರ | ಗದ್ಯ |
|---|---|---|
| ೧೧.೬"×೧.೨" | ? | ? |
| ೧-೪೪ ಪತ್ರ | ೫ ಪಂಕ್ತಿ | ೬೨ ಅಕ್ಷರ |

ಆದಿ : ಕ್ರೋಧನನಾಮ ಸಂವತ್ಸರದ ಭಾದ್ರಪದ ಶು ೩ಯಲ್ಲು ಮಾದಾಹಳ್ಳಿ ಮಠದ ಸೋಮಾರಾಧ್ಯನು ಮಾದಾಹಳ್ಳಿಯಲ್ಲಿರುವ ತಮ್ಮಡಿ ರಾಮೈಯ್ಯ ನಿಗೆ ಮೋದಿಕೊಳ್ಳುವುದಕ್ಕೆ ಬರದು ಆಶೀರ್ವಾದ ಮಾಡಿಕೊಟ್ಟ ಮಂತ್ರ ಯಂತ್ರದ ಪುಸ್ತಕಕ್ಕೆ ಶುಭಮಸ್ತು. ಸೂಚೀಪತ್ರ ಕ್ರಮ ೧ನೆ ಹನುಮಂತ ಮಂತ್ರ ೨ನೆ ಯಂತ್ರಾ ಕರೆಯುವ ಮಂತ್ರ ೩ನೆ ಸಕಲ ಯಂತ್ರಕ್ಕು ಪ್ರಾಣ ಪ್ರತಿಷ್ಠೆಯ ಮಂತ್ರ ೪ನೆ ನಾರಸಿಂಹ ಮಂತ್ರ ೫ನೆ ವೀರಭದ್ರ ಮಂತ್ರ
× × ×

ಅಂತ್ಯ : ಕಂಭ ತಲೆ ಇರಿಕ್ಕ ಕಾಳಿಯ ಕಟ್ಟು ಮಳೆಯಾಳ ಪಿಳ್ಳೆಯ ಕಟ್ಟು ಕೊಟ್ಟೀ ಪಿಳ್ಳೆಯ ಕಟ್ಟು ಪರತಿಯಸ್ಮಂತ್ರತ ಕಟ್ಟು ಯಂತ್ರತ ಕಟ್ಟು ಅವಗಟ್ಟಿನ ಕಟ್ಟು ಮುರಿತುಯುಂಗಟ್ಟು ವೇಣುಂಗುಟಾ ಕಟ್ಟು ಯುರಿಯುರಿ ಮುರಿಮುಂ ಪೊರಿವಿಶುವಿಶು ಆವೇಶ ಆವೇಶಯ ಹ್ರೀಂ ಓಂ ಹುಂಪಟ ಸ್ವಾಹಾನ್ ಇತಿ ಮಂತ್ರ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

ವಿಷಯ : ಯಂತ್ರ ಮಂತ್ರಗಳು.

ವಿಶೇಷ : ಪ್ರತಿ ತುಂಬ ಶಿಥಿಲ. ಗ್ರಂಥದಲ್ಲಿ ಒಟ್ಟು ೧೩ ಪತ್ರಗಳ ಲೋಪವಿದೆ. ಹೋಗಿರುವ ಪತ್ರಗಳನ್ನು ಗುರುತಿಸಲು ಸಂಖ್ಯಾಭಾಗ ತಿಳಿಯುವುದಿಲ್ಲ.

—ಜಿಜಿಎಂ

## 360

| ಕೆ. ಬಿ. ೬೦೯/೧ | ಮಂತ್ರಸಾಮ್ರಾಜ್ಯ | ಮಂತ್ರ, ಯಂತ್ರ |
|---|---|---|
| ೭.೫"×೯.೫" | ? | ? |
| ೨೩ ಪತ್ರ | ೨೫ ಪಂಕ್ತಿ | ೨೬ ಅಕ್ಷರ |

**ಆದಿ :** ಶ್ರೀ ಗಣಾಧಿಪಾತಾಯೇ ನಮಃ । ಶಾರದಾ ಗುರುಭ್ಯೋ ನಮಃ ॥ ಸಿದ್ಧ ರಾಮಾ ಪ್ರಸಂನಾಯು ನಮಃ । ಪರಿದಾವಿ ಸಂವತ್ಸರದ ಆಶ್ವಿಜ ಶುದ್ಧ ೨ಲ್ಲೂ ಸಿದ್ಧರಾಮಪ್ಪನವರಿಂಗೆ ಬರದ್ದು ಮಂತ್ರ ಚಕ್ರಾಕ್ಕೆ ಶುಭುಮಸ್ತು ॥ ಆಯರ್ಉ ಆರೋಗ್ಯ ಐಶ್ವರ್ಯಾಸಿದ್ಧಿರಸ್ತು ದನ ಕನಕ ವಹಾನ ಶಿದ್ಧಿರಸ್ತು । ಪುತ್ರಸವಾ ಜ್ಯ ಶಿದ್ಧಿರಸ್ತು ॥ ಮಾನುನಿ ಮಾತಾನಾಡೆ ಆನುಮಾನಿಸಬ್ಯಾಡೆ । ಮಾನುನಿ ಮಾತನಾಡೆ ॥ ನಿಂನ್ನಾಗ್ನಾನದಿ ಮನಸಂನ್ನೂ ಸೂರೆಗೊಂಡೆ । ಯಂನ್ನನೂ ಕಂಣೆತ್ತಿ ನೋಡೆ । ಅನುಮಾನಿಸಬ್ಯಾಡೇ ॥ ಪ ॥ × × × ಧರೆಯೊಳೂ ಮೈಸೂರು ಕೃಷ್ಣರಾಜೇಂದ್ರ । ಸರಸಿಜಮುಖಿಯುಂನ್ನವಿರ... ಕಂ. ... ಸೇ ॥ ೩ ॥ ಕರತಂದ್ದು ತೋರೆನೀರೆ ಕಾಂತನ ಮುಖ ಬೇಗಾ ॥

| ಶೂರಿನಿಧ ಗ್ರಂಥಃ | ಕವಿಗೈರಿಸ್ಮಪಣ ರುದ್ರ ದೇವತೆ ಸ್ವಾ ಹ್ರಿಂ ಚಲಿ ಚರಿಳಿ | ದುರ್ಗಪರಮೇಶ್ವರಿ ಮಮ ಉದ್ಯೋಗ ಕರಿಸಿದ್ದಿ ಕರಿ । ಹಾಲು ಕಾದರೂಣೀ ನಗರ ಪುರಪಟಣೀ ॥ |
|---|---|---|

| | | | | | | | | | | |
|---|---|---|---|---|---|---|---|---|---|---|
| ನಂ | ಹಂ | ಳಂ | ಕ್ಷಂ | ಖ | ಡ್ಗ | ಸ | ಹ | ೧೦ | ನ | ರು |
| ಸ್ತ್ರೀ | ಶ್ರೀ | ರ | ಮು | ರು | ಗ | ದಂ | ಹಂ | ೨೩ | ರುಂ | ಲಂ |
| ಗ | ಹ | ಲಂ | ಣಿ | ಪಾ | ಡಲಿ | ರು | ರಿ | | ಮ | ದಂ |
| ನಾ | ದ | ಮು | ಡ | ಲಿ | ಯ | ಮು | ನಾ | ೪೮ | ನಾ | ಶಂ |
| ವಂ | ಯಿಂ | ಲಿ | ಡ | ಮ | ರ | ಹ | ಸ್ತ್ರಿ | ಓ | ೧೨೮ | ಹಂ |
| ಹ | | ಸಂ | ಸಂ | ಐ | ಜ | ಸೊ | ಡ್ಗ | ಖ | ರಾ | ಕ್ಷಂ |
| ಡಾ | ಟ | ಟ | ಠಿ | ಠಿ | ಸೊ | ರಾ | ರಾ | ಮ | [illegible] | ಹಂ |
| ಮಾ | ಕ್ಷಂ | ದೂಂ | | ಠಿ | ಕ್ಷಂ | ಸಂ | ಕ್ರೋ | ಹಂ | ಮ | ಳಂ |
| ಗ | ಹಂ | ೫ | ೭ | ೩ | ಮ | ರಾ | ದೊ | ವ | ದೂ | ಳಂ |
| | ೧೨೫ | | | | | | | | | |
| ೧೧ | ೨೮ | ೯ | ಕಾ | ಕ್ಷಂ | ಕ್ಷಂ | ಓಂ | ಓಂ | ಓಂ | ನಂ | ರಾ |
| ೫ | ೩ | ೪ | ವ | ಡೇ | ಡೋ | ಡೌ | ಹ | ಗ್ರ | ರ್‍ರಾ | ವೊಂ |

**ಅಂತ್ಯ :** ಶ್ರೀ ಗುರುಭ್ಯೋ ನಮಃ । ಓಂಯಿಂತ್ರಿ ಗುರುಮಂತ್ರ ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ ॥ ಮುಂದಲಮಂತ್ರ । ಗುರುಚಿತ್ತ ರಾಜ್ಯ ನಿಂನ್ನ ಪಾದಾರವಿಂದವವೆ ಗತ್ತಿ । ಬಿಂದು ಕರ್ಪಣ ಮವ ಅನುತ್ತನಂತ್ರ ಕೊಟ್ಟಿ ಜನ್ಮಕರ ರಾರ್ಜಿಕಾ । ಬಲಾಯಮಾಂ । ವನ ಕೌಮಾರ ವಾರ್ಧೀಕ್ಯಾಂ

ಜಾಗ್ರತ್ಸ್ವಪ್ನ ಸುಶೂಪ್ತರ್ಯೇವಾಸ್ತಿ ಮನೋವಾಕ್ಕಾಯಶಾ । ಕರ್ಮಾಗ್ನಾ ನಾಗ್ನಾ ನಕ್ರುತಾ । ಸಮಾಸ್ತ ।

ವಿಷಯ : ಮಂತ್ರ ಮಂತ್ರಾ ಯಂತ್ರಗಳು.

ವಿಶೇಷ : ಇದರಲ್ಲಿ ಕೆಲವು ಯಂತ್ರ ಚಕ್ರಗಳು ಇವೆ. ಮಂತ್ರಗಳೂ ತಪ್ಪು ತಪ್ಪಾಗಿ ಇವೆ. ಪತ್ರಗಳ ಎರಡು ಪಾರ್ಶ್ವಗಳಲ್ಲಿ ಬರವಣಿಗೆ ಇದೆ. ಕಾಗದ ಬಹಳ ಹಳೆಯದು. ಅಕ್ಷರಗಳು ಅಸ್ಪಷ್ಟವಾಗಿವೆ. ಇದರೊಡನೆ ತತ್ವಪದಗಳೂ ಇವೆ. ಪತ್ರಸಂಖ್ಯೆ ಬರೆದಿರುವುದಿಲ್ಲ.

—ಎಸ್ ಎಸ್ ಕೆ

## 361

ಕ. ೮೮೦ — **ಮಂತ್ರೌಷಧಗಳು** — ಗದ್ಯ

೮.೪"×೨.೧" — ? — ?

೨೫ ಪತ್ರ — ೧೨ ಪಂಕ್ತಿ — ೫೬ ಅಕ್ಷರ

ಆದಿ : ... ಯೋ ಯಂತ್ರವ ದಾರ ಹೆಬ್ಬಾಗಿಲಿಗೆ ಕಟ್ಟಲಾ ಜೀವದನದ ಕಾಲ ಬೇನೆ ಬಾಯಿಬೇನೆ ಮೊಬ್ಬು ಮಾಣು, ಯಿದಕೆ ಮಂತ್ರ, ಕಾಲಾಗ್ನಿ ರುದ್ರಾಯಂ ನಮಃ ಕಪಾಲಧರಯ ನಮಃ ದಕ್ಷಯಿಾ ಎಂತ್ರವ ಬರದು ಕಟ್ಟಲು ಬ್ರಹ್ಮರಾಕ್ಷಸಂ ಸಂಹರಾಯ ನಮಃ । ಸಮಸ್ತ ದೇವಾದಿ ದೇವವ ಬಿಟ್ಟು ಇಹದು ವಿಚಾರ ಗೆಲ್ಲು ।

ಅಂತ್ಯ : ... ಗುರ್ಂಡಿ ಮುಗುಳು ಬೆಳ್ಳುಳ್ಳಿ ೭ ಮೆಣಸು ೭೦ರದು ಗಜ್ಜಿಗಿ ನಷ್ಯ ನುಂಗಿದರೆ ಛಳಿ ಜ್ವರ ಹೋಗೋದು ಪತ್ಯ ಹುಳಿವರ್ಜಂ ॥ ಕಕ್ಕೆ ಮೂಡಲು ವರಿದ ಬೇರ ಗಂದವತೆಯಿ..... ...... ಬೇವಿನ ಬೀಜವ ಹುದುಗಿ ನುಂಗಿದರೆ ರಕ್ತ ಶುಕ್ಲಪ್ರಮೇಹ ಮಾಣ್ಗು.

ವಿಷಯ : ಮಂತ್ರ ಯಂತ್ರ ಔಷಧಿಗಳ ವಿವರ.

ವಿಶೇಷ : ಕ್ರಮಾಂಕಗಳು ಕೆಲವು ಗರಿಗಳಿಲ್ಲ. ಇದ್ದರೂ ಕೆಲವು ಗರಿಗಳಲ್ಲಿ ಕಾಣುವುದಿಲ್ಲ. ಒಟ್ಟು ಪತ್ರಗಳನ್ನು ಎಣಿಸಿ ಕೊಟ್ಟಿದೆ. ಮಂತ್ರಗಳೂ ಯಂತ್ರಗಳ ಮೇಲೆ ಬರೆವ ಬೀಜಾಕ್ಷರಗಳ ವಿವರಗಳೂ ಚಿತ್ರಗಳೂ ಇವೆ.

—ಕೆಆರ್ಎಸ್

## 362

ಕ. ೧೩.೨೪ — **ಮಕರಾಂಕಷೇನನ ಕಥೆ** — ಯಕ್ಷಗಾನ

೯.೭"×೧.೫" — ಲಿಂಗ — ಸು. ೧೮೫೦

೧-೫೩ ಪತ್ರ — ೮ ಪಂಕ್ತಿ — ೩೮ ಅಕ್ಷರ

ಆದಿ : ಶುಭಮಸ್ತು ॥ ಶ್ರೀ ಗಣಾಧಿಪತಯೇ ನಮಃ ॥ ಮಕರಾಂಕಶ್ಯೆನನ ಕಥೆ

ಬರವುದಕ್ಕೆ ನಿರ್ವಿಘ್ನಮಸ್ತು......
...... ಜಾರಮಣ ಶ್ರಿಷ್ಟಿಜನ ನಿರ್ಮಾಣ
ಭೂಸುರಾರ್ಜಿತ ಚರಣ ಭುಜಗರಾಜಭರಣ......
ಗೋಕ್ಷಿರಾದ್ಯುತಿಗಾತ್ರ ಗೋತ್ರ ಭೇದ್ಯ......
ಸಾಕ್ಷಾತ್ರಿವಿಧನೇತ್ರ ಶತ್ಯುಪಾಮಿತ್ರ ಪಾತ್ರ
ದೇವ ದೇವೋತ್ತುಂಗಾ ದಿವ್ಯ ಪ್ರಾಣಮಾಲಿಂಗ

**ಅಂತ್ಯ :** ಪೊಕ್ಕು ಜಲಕೇಳಿಯಂ ಆಡಿದರು ಅಬಲೆಯರು
ಚಿಕ್ಕ ಪ್ರಾಯಂದ ಚೆಲ್ವೆಯರು ಚಿತ್ರರೇಕೆಯರೂ
ದಿಕ್ಕು ದಿಕ್ಕಿನಲಿ ಕಳಿತು ವೈದೊಳವುತವರು
ಪೊಂಬಾಳೆದೊಡೆ ಮಡಿಯು ತಂಗಕಚೆ ತಳಿರಡಿಯು
ಕಂಬುಕಂದರೆ ನಡುವು ಕರೀ ಮಸ್ತಕದ ಮಡುವು

**ವಿಷಯ :** ಮಕರಂಕಸೇನನ ಕಥೆ.

**ವಿಶೇಷ :** ಅಸಮಗ್ರ ಪ್ರತಿ. ಪತ್ರಗಳ ಅಂಚು ಮುರಿದಿದೆ.

—ವೈಸಿಬಿ

363

ಕ. ೧೭೭೮/೧ ಮಗ್ಗಿ ಲೆಕ್ಕ
೪" x ೧" ? ?
೧—೨೫ ಪತ್ರ ೫ ಪಂಕ್ತಿ ೧೬ ಅಕ್ಷರ

**ಆದಿ :** ೧೧೧ ೧೭೯ ೨೧೨
೧೨೨ ೧೮೮ ೨೨೪
೧೩೬ ೧೯೯ ೨೩೬
೧೪೪ ೧೦೧೦ ೨೪೯
೧೫೫

**ಅಂತ್ಯ :** ೧೦ ಸೊಲಗೆ ಮಾ ೧ ಸೊ ೧೦೦ ಸೊಲಗೆ ೮೦೧ ಮಾ ೧೦೦೦ ಸೊಲಿಗೆ
× × × ಮಾ ೨ ೧೦೦೦೦ ಸೊಲಿಗೆ ಬರೆ ೧೧೧೨ ೧೦೦೦೦೦ ಸೊಲಿಗೆ
× × × ×

**ವಿಷಯ :** ಗಣಿತ.

**ವಿಶೇಷ :** ಇದರೊಡನೆ ಅಷ್ಟಾಕ್ಷರ (ಸು) ಮತ್ತು ಗೋಪಿನ ಕಥೆ ಕೃತಿಗಳಿವೆ.

—ಹಕರಾ

## 364

ಕ. ೧೭೭೩/೧ **ಮುಗ್ಗಿಕೋಷ್ಟಕ ಇತ್ಯಾದಿ** ಗದ್ಯ
೮"×೧" ? ?
೧–೧೯ ಪತ್ರ ೫ ಪಂಕ್ತಿ ೩೫ ಅಕ್ಷರ

**ಆದಿ :**

೧೧೧ ೧೬೬ ೨೧೨ ೨೬೧೨
೧೨೨ ೧೭೭ ೨೨೪ ೨೭೧೪
೧೩೩ ೧೮೮ ೨೩೬ ೨೮೧೬
೧೪೪ ೧೯೯ ೨೪೮ ೨೯೧೮
೧೫೫ ೧೧೦೧೦ ೨೫೧೦ ೨೧೦೨೦

**ಅಂತ್ಯ :**

೬ nr ಗ ೪
೭ nr ಗ nr
೮ nr ಗ r ೧
೯ nr ಗ r ೧ nr
೧೦ nr ಗ r ೨ r

**ವಿಷಯ :** ಗಣಿತಶಾಸ್ತ್ರ.

**ವಿಶೇಷ :** ಇದೇ ಕಟ್ಟಿನಲ್ಲಿ ಗಣಾಷ್ಟಕ, ಬಾಣಾಸುರನ ಶಿವಪೂಜೆ, ಜೋಗಿ ಹಾಡು ಮೊದಲಾದ ಗ್ರಂಥಗಳಿವೆ.

—ವೈಸಿಬಿ

## 365

ಕ. ೯೯೨/೪ **ಮಡಿವಾಳ ಮಾಚಯ್ಯಗಳ ತಾರಾವಳಿ** ಹಾಡು
೧೨.೮"×೧.೬" ಕರಸ್ಥಲದ ನಾಗಿದೇವ ಸು. ೧೪೩೦
೬೧–೬೪ ಪತ್ರ ೧೨ ಪಂಕ್ತಿ ೮೪ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ಕರಸ್ಥಲದ ನಾಗಲಿಂಗಯ್ಯ ನಿರೂಪಿಸಿದ ಮಡಿವಾಳ ಮಾಚಯ್ಯಗಳ ತಾರಾವಳಿಯ ಬರೆವದಕ್ಕೆ ಸುಭ ಮಸ್ತು ॥ ರಾಗ ॥ ಕನ್ನಡ. ಕಾಂಬೋದಿ ॥
ನುಡಿಸಲೆನ್ನಳವೆ ನಿಮ್ಮತಿಶಯ ಮಹಿಮೆಯ
ಸಿತಕಂಠ ವೀರ ಶರಭ ಮಾಚಿದೇವಯ್ಯ ॥ ಪಲ್ಲ ॥
ಹರನ ಘನವ ನಿಂತುಟರಿದುಯುದೆ ದಕ್ಷನು
ಮರುಳುಪಡಿದು ಕೂಗಿ ಮಾರಿಯ ಕರವಂತೆ ॥

ಕರಿಯು ಕೇಸರಿಯೊಳಂ ಕದನಕೆಳಸುವಂತೆ ॥
ಹರಿಣವ್ಯಾಘ್ರನ ಕೂಡೆ ಹಾಸ್ಯವನು ನುಡಿವಂತೆ

× × ×

ಪಂಕಜನಾಭ ವಿರಚಿಸಿದನು ಯಾಗವ ಕುಹಕಕಿಲ್ಲಾ
ಹರುಷದೊಳಿರಲು ॥ ಫಣಿಗಂಣದೆರೆಯುಉದ್ಭವಿಸಿದ ವೀರಾವ
ತಾರವಾ ॥ ೧ ॥

ಅಂತ್ಯ : ಅರಸು ಬಿಜ್ಜಳ ದಂಡಧೀಶನೊಡನೆ ಬಂದು
ಶರಣು ಹೊಕ್ಕೆನಂ ಮಾಚಿದೇವ ತಪ್ಪಿದೆನೆಂದು
ಗುರುವೆ ರಕ್ಷಿಸು ಕೃಪ ತರುವೆ ಭಕ್ತರ ಬಾಂದು

× × ×

ಸಿರುತ ನಿಃಕಲ ರೂಪನ ಕಾರುಂಣ್ಯಸಾಗರ ವೀರಮಾಚಯ್ಯನಾ ಮಹಿಮೆ
ಯನು ಬರದೋದಿ ಪಠಿಸುವನಾ । ಬಂದನಭವ ದುರಿತ ದುಃಕ್ರುತ
ನಾಶನ । ಮುಕ್ತಾಂಗನೆ ಬೆರದ ನಿರ್ಮಲ ಕಾಯುನ । ಕರುಂಬುಜದೆರೆಯ
ಸದ್ಗುರುಶಾಂತನೊಲಿಯ್ಯಾದನಾ ॥ ೨೭ ॥ ನುತಿಸಲೆಂನ್ನಳವೆ ನಿಂಮ್ಮಾ॥
ಮಡಿವಾಳ ಮಾಚಯ್ಯಗಳ ತಾರಾವಳಿ ಸಂಪೂರ್ನ ಮಂಗಳ ಮಹಾ ಶ್ರೀ.

ವಿಷಯ : ಮಡಿವಾಳ ಮಾಚಯ್ಯನನ್ನು ಸ್ತುತಿಸುವುದು.

ವಿಶೇಷ : ಸಮಗ್ರ. ಅಕ್ಷರವು ಸಣ್ಣಗಿದೆ. ಇದೇ ಕಟ್ಟಿನಲ್ಲಿ ಗಿರಿಜಾ ಕಲ್ಯಾಣ, ಭಿಕ್ಷಾಟನ ಚರಿತೆ, ಷಡುಸ್ಥಲತಾಮುಸಗುಣದ ಅನುಭಾವದ ವಚನ, ಪ್ರಭು ದೇವರ ತಾರಾವಳಿಗಳೆಂದು ಇನ್ನೂ ನಾಲ್ಕು ಕೃತಿಗಳಿವೆ.

—ಕೆಆರ್‌ಎಸ್

## 366

**ಮಡಿವಾಳ ಮಾಚಯ್ಯಗಳ ತಾರಾವಳಿ**

ಕರಸ್ಥಲದ ನಾಗೀದೇವ

ಕ. ೧೨೫೩/೭ ಹಾಡು
೭.೮"×೨" ಸು. ೧೪೩೦
೧೦೦–೧೦೮ ಪತ್ರ. ೧೦ ಪಂಕ್ತಿ ೩೬ ಅಕ್ಷರ

ಆದಿ : ॥ ಶ್ರೀ ॥ ಕರಸ್ಥಲದ ನಾಗಿದೇವರು ನಿರೂಪಿಸಿದ ವೀರ ಮಡಿವಾಳ ಮಾಚಯ್ಯಗಳ ತಾರಾವಳಿ ॥ ರಾಗ । ಕಂನಡ ಕಾಂಬೋದಿ ॥

ಪಲ್ಲ ॥ ನುತಿಸಲೆಂನಳವೆ ನಿಂಮತಿಶಯ ಮಹಿಮೆಂಯಂ । ಶಿತಕಂಠ ವಿರ ಶರಭ ಮಾಚಿದೇವಯ್ಯಾ ॥

ಪಲ್ಲ ॥ ತರನ ಘನವೆಂತುಟಜ್ಜಿಯುಡೆ ಪಕ್ಷನು ।
ಮರ...ಪಿಡಿದು ಕೂಗಿ ದೂರ್ತಿಯು ಕರದಂತೆ ।

ಕರಿಯುಕೆ ಸತಿಯೊಳುಂ ಕದನಕೆಳಸುವಂತೆ ।
ಹಂಣ ವ್ಯಾಗ್ಗ್ರನ ಕೂಡೆ ಹಾಸ್ಯದಿ ನುಡಿವಂತೆ ।
ಗರುಡನೊಡನೆ ವ್ಯಲ ಗರ್ವ್ವಿಸಿ ನಡದಂತೆ ।

ಅಂತ್ಯ : ಅರಸು ಬಿಜ್ಜಳ ದಂಡಾದೀಶನೊಡನೆ ಬಂದುಂ ।
ಶರಣು ಹೊಕ್ಕನಂ ಮಾಚಿದೇವ ತಪ್ಪಿದೆನೆಂದುಂ ।
× × × ×
ನಿರುಂತ ನಿಃಕಲ ರೂಪನಾ । ಕಾರುಣ್ಯ ಸಾ ।
ಗರ ವೀರ ಮಾಚಯ್ಯನು । ಮಹಿಮೆಯನು ।
ಬರದೋದಿ ಪಟಿಸುವನಾ । ಬಂದನವ ।
ದುರಿತ ದುಃಕ್ಪ್ರತ ನಾಶನಾ × × ×
ಸದ್ಗುರು ಶಾಂತನೊಳು ಲಿಯ್ಯವಾದನಾ ॥ ೨೭ ॥

ವಿಷಯ : ಮಡಿವಾಳ ಮಾಚಯ್ಯನ ಭಕ್ತಿಯು ಮಹಿಮೆ.

ವಿಶೇಷ : ಶಕಟರೇಫದ ಬಳಕೆಯಾಗಿ ಒಂದು ಪತ್ರ ಮಧ್ಯದಲ್ಲಿ ಒಂದೆಡೆ ತ್ರುಟಿತವಾಗಿದೆ. ಅಕ್ಷರಗಳು ಸುಂದರವಾಗಿವೆ. ಈ ಕಟ್ಟಿನಲ್ಲಿ 'ವಚನಗಳು' ಮೊದಲಾದ ಇತರ ೮ ಕೃತಿಗಳಿವೆ.

—ಎಂಪಿಎಂ

## 367

ಕ. ೧೩೧೨/೨ | ಮಡಿವಾಳ ಮಾಚಯ್ಯಗಳ ತಾರಾವಳಿ | ಹಾಡು
೭.೫''×೧.೯'' | ಕರಸ್ಥಲದ ನಾಗಿದೇವ | ಸು. ೧೮೩೦
೧–೧೧ ಪತ್ರ | ೧೨ ಪಂಕ್ತಿ | [illegible] ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಮಡಿವಾಳಯ್ಯಗಳ ಮೂಲ ಸ್ತೋತ್ರ ತಾರಾವಳಿ ॥ ರಾಗ ಕಂನಡಾ ಕಾಂಬೋಧಿ ॥ ಪಲ್ಲ
ನುತಿಸಲೆನ್ನಳವೆ ನಿಮ್ಮತಿಶಯ ಮಹಿಮೆಯ
ಶಿತಿಕಂಠ ವೀರ ಶರಭ ಮಾಚಿದೇವಯ್ಯ
ನುತಿಸಲೆನ್ನಳವೆ ನಿಮ್ಮಾ ॥ ಪದ ॥
ಹರನ ಘನವನೆಂತುಟರಿಯದೆ ದಕ್ಷನು
ಮರುಳುವಿಡಿದು ಕೂಗಿ ಮಾರಿಯ ಕರೆವಂತೆ
ಕರಿಯು ಕೇಸರಿಯೊಳು ಕದನಕೆಳಸುವಂತೆ
ಹರಿಣ ವಾಘ್ರನ ಕೂಡೆ ಹಾಸ್ಯದಿ ನುಡಿವಂತೆ
× × × ×
ಭವ ಫಣೆಗಣ್ಣ ತೆಱೆಯಲುದ್ಭವಿಸಿದ ವೀರಾವತಾರವಾ ॥ ೧ ॥

**ಅಂತ್ಯ :** ಕರುಣಾಬ್ಧಿ ಮಡಿವಾಳೈಯ್ಯನ
ಚರಣವನಾವಾಗ ಕೀರ್ತನೆಗೈವುತ್ತಿರಲು
ಸ್ಮರ ಕಾಲಕರ್ಮವಳಿವುದು
ಗುರುವಾರ್ಯನಂಘ್ರಿ ಮಂದಿರವಾಸದೊಳಿಹರೂ ॥
ಮಡಿವಾಳೈಯ್ಯಗಳ ತಾರಾವಳಿ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಮಡಿವಾಳ ಮಾಚಯ್ಯನ ಸ್ತೋತ್ರ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಬಸವಣ್ಣನ ವಚನಗಳೂ ಇವೆ.

—ಜಿಜಿಎಂ

## 368

ಕೆ. ೮೬೬/೩ ಮಡಿವಾಳಯ್ಯನ ಸಾಂಗತ್ಯ ಸಾಂಗತ್ಯ
೧೧"×೧" ಚೆಲುವ ಸು. ೧೭೨೫
೧–೨೨ ಪತ್ರ ೪ ಪಂಕ್ತಿ ೪೨ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ ಶ್ರೀ ಶಾರದ ಗುರುಭ್ಯೋ ನಮಃ ಶುಭ ಮಸ್ತು ಶೋಭನಮಸ್ತು ॥ ಮಡಿವಾಳೈಯ್ಯನ ಸಂಗ್ಯಾತ್ಯಕ್ಕೆ ಆಯುರ ರೋಗ್ಯ ಐಶ್ವರ್ಯಮಸ್ತು ॥
ಶಿವಯೆಂನಿ ಶಿವಾಯೆಂನ್ನಿ ಶಿವಶರಣುಯೆಂನ್ನಿ
ಭವಸಾಗರವ ದಾಂಟುವರೆ
ಶಿವನರಿಯದ ಮಾನವ ನರಗುರಿಗಳು
ಭವಹರಿವುದು ಕೇಳಿ ಜನರೂ ॥ ೧ ॥

× × ×

ಭವಿಯು ಬಿಜ್ಜಳನ ಕಪ್ಪಡವ ತೊಳೆಯಲೊಲ್ಲದೆ
ಅವಗಾಡದಾನೆಯು ಮುರಿದಾ
ಭುವನದೊಳಗೆ ಮಡಿವಾಳನ ಪ್ರತಾಪವ
ಶಿವಶರಣರು ಚಿತ್ತೈಸಿ ॥ ೩ ॥

**ಅಂತ್ಯ :** ಮಲತ ದೂಶಕರ ಮುರಿದು ಮಡಿವಾಳೈಯ್ಯ
ಬಲುಹುಳ್ಳ ರಾಯಬಿಜ್ಜಳನಾ
ನೆಲೆಗಾಣಿಸಿ ಪಟ್ಟವಗಟ್ಟಿದ ಕತ್ತೆಯಿಂದು
ಚೆಲುವಾನ ಚರಿತ್ರೆ ಸಂಪೂರ್ನ್ನ ॥ ೫೮ ॥

× × ×

ಬರದೋದಿದವರಿಗೆ ಪರಮಪದವನೀವ
ಹರುಶದಿಂದಲಿ ಕೇಳ್ವರಿಗೆ
ದುರಿತವಿನಾಶನ ನೆರೆ ಕರ್ಮ ಹರಿವುದು
ಶರಣನ ಕೃತಿಯ ಕೇಳ್ದರಿಗೆ ॥ ೬೩ ॥
ಅಂತು ಸಂಧಿ ೨ಕೆ ಪದನು ೧೬೩ಕಂ ಮಂಗಳ ಮಹಾ ಶ್ರೀ.

ವಿಷಯ : ಶಿವಭಕ್ತ ಮಡಿವಾಳ ಮಾಚಯ್ಯನ ಕಥೆ.

ವಿಶೇಷ : ಸಮಗ್ರ. ಹಲವಾರು ಕಡೆಗಳಲ್ಲಿ ಪತ್ರಗಳಿಗೆ ಹುಳು ಹೊಡೆದು ರಂಧ್ರಗಳಾಗಿವೆ. ಇದರೊಂದಿಗೆ ಕಿರಾತಾರ್ಜುನೀಯಂ, ಸೀತಾಕಲ್ಯಾಣವೆಂಬ ಎರಡು ತೆಲುಗು ಕೃತಿಗಳಿದ್ದು ಯಕ್ಷಗಾನದಲ್ಲಿವೆ.

—ಕೆಆರ್‌ಎಸ್

## 369

| ಕೆ. ೧೪೭೬/೧ | ಮಡಿವಾಳಯ್ಯನ ಸಾಂಗತ್ಯ | ಸಾಂಗತ್ಯ |
|---|---|---|
| ೧೧" × ೧.೩" | ಚೆಲುವ | ಸು. ೧೭೨೫ |
| ೧–೩೮ ಪತ್ರ | ೫ ಪಂಕ್ತಿ | ೪೮ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ ॥ × × × ಮಡಿವಾಳಯ್ಯನ ಸಾಂಗತ್ಯದ ಪುಸ್ತಕ ॥
ಅಮರಕರೋಡಿ ಮಂಡಿತ ಕಾಮದಹನನೆ
ಹಿಮಕರ ದ್ಯುಮಣಿ ಪೂಜಿತನೆ ॥
ಉಮೆಯ ಮನೋಲತೆ ಮೂರ್ತಿ ತ್ರಿಯಂಬಕ
ವಿಮಲ ಸ್ವರೂಪ ರಕ್ಷಿಪುದು ॥ ೧ ॥

ಅಂತ್ಯ : ಶಿವಕವಿ ಮಹಾದೇವರ ಸ್ವಾಮಿಯಿಶ್ವರ
ಭವಲತೆಗಳನು ತುಂಡಿಸುವ ॥
ಶಿವ ಶಿವಾಯೆಂಬ ನುಡಿಯನಾರು ಕೇಳಲು
ಭವಭಯ ದುರಿತ ಹಿಂಗುವದು ॥ ೩೯೬ ॥
ಗುರುಲಿಂಗ ಜಂಗಮದಾ ಶ್ರೀ ಚರಣಕ್ಕೆ
ಭರದಿಂದ ವಂದನೆ ಮಾಡಿ ॥
ನೆರದ ಭಯವ ನೀಗಿ ಶರಣರ ಚರಣಕ್ಕೆ
ಶರಣಾರ್ಥಿ ಶರಣಾರ್ಥಿಯೆಂಬೆ ॥ ೩೯೭ ॥
ಮಡಿವಾಳೈಯ್ಯಗಳ ಸಾಂಗತ್ಯ ಸಂಪೂರ್ನ ॥ ಮಂಗಳ ಮಹಾ ಶ್ರೀ.

ವಿಷಯ : ಶಿವಭಕ್ತ ಮಡಿವಾಳ ಮಾಚಯ್ಯನ ಕಥೆ.

**ವಿಶೇಷ :** ಕೃತಿ ಸಮಗ್ರ. ಗರಿಗಳ ಅಂಚುಗಳು ತ್ರುಟಿತವಾಗಿವೆ. ಮಧ್ಯದಲ್ಲಿ ಒಂದು ಗರಿ ಇಲ್ಲ. ಬರವಣಿಗೆ ಸುಂದರವಾಗಿದೆ. ಇದರೊಂದಿಗೆ 'ಚೋಳ ಸಾಂಗತ್ಯ'ವೆಂಬ ಇನ್ನೊಂದು ಕೃತಿಯಿದೆ.

—ಎಂಪಿಎಂ

## 370

| ಕೆ. ೯೩೭/೩ | ಮಣ್ಣೇಶ್ವರ ಪುರಾಣದ ಸಾಂದ್ಯ | ಪದ, ಟೀಕು |
|---|---|---|
| ೮.೫" × ೧.೮" | ? | ಸು. ೧೬೦೦ |
| ೬೪-೬೭ ಪತ್ರ | ೧೦ ಪಂಕ್ತಿ | ೩೮ ಅಕ್ಷರ |

**ಆದಿ :** ಮಂಣ್ಣೇಶ್ವರನ ಪುರಾಣದ ಸಾಂದ್ಯದ ಪದನೂ ॥
ತರುವುರದನ ತಂದೆ । ತನುಜೆ ಮನೆಯು ಸಖ ।
ತರುಣ ನಂಮನವರನಣುಂಗಃ ॥
ನರಸಿಯಾತ್ಮಜನ ಮಾವನ ಮಗನುರುಪಿದ
ಗುರುವೆ ಮಾಂಣೇಶ ಮಂತ್ರಾಹಿ ॥

ಟೀಕು ॥ ತರುವುದನ । ಚಂದ್ರನ । ತಂದೆಯು । ಸಮುದ್ರದ । ತನುಜೆಯು । ಲಕ್ಷ್ಮಿಯು । ಮನೆಯು । ತಾವರೇಯು । ಸಖ । ಸೂರ್‍ಯನ । ತರುಣ । ಕರ್ನನ । ಅಂಮ್ಮನ । ಕೊಂತಿಯ್ಯ । ವರ । ಪಾಂಡುವನ । ಅಣುಗನ । ಅರ್ಜುನನ । ಅರಸಿಯು । ಸುಭದ್ರೆಯು । ಆತ್ಮಜನೂ । ಅಭಿಮನ್ಯುವಿನ । ಮಾವ । ನಾರಾಯಣನ । ಮಗನ । ಮನ್ಮಥನ । ವುರುಪಿದ । ದಹಿಸಿದಂಥಾ । ಮಂಣೇಶ । ಚಿವುತ್ರ್ವಿಗೆ । ಕರ್ತವಾದಂಥಾ । ಗುರುವೆ । ಯೆಲೆ । ಆಚಾರ್ಯ್ಯನೆ । ಮಾಂ । ಯಂನನು । ತ್ರಾಹಿ । ರಕ್ಷಿಸೂ ॥ ೧ ॥

**ಅಂತ್ಯ :** ಸರಸಿಪೊಕ್ಕನ ತಾಯುವರನಣುಗನ ರಕ್ತ
ಸುರಿದನ್ನೈಯ್ಯನ ವಾಜಿಯುರಸಿ
ಗರಿ । ಸುತೆಯರಸನ । ವರ । ಬೊಮ್ಮನ ಸೊಸೆ ಮೂ
ಗರಿದನ್ನೈಯ್ಯನೆ ಮಂಣೇಶ ಮಂತ್ರಾಹಿ ॥

ಟೀಕು ॥ ಸರಸಿಕೊಳನ ಪೊಕ್ಕನ । ಕೌರವನ । ತಾಯು । ಗಾಂಧಾರಿಯು । ವರನ । ದ್ರುತರಾಷ್ಟ್ರನ । ಅಣುಗನ । ದುಶ್ಶಾಸನ । ರಕ್ತಸುರಿದನೆ । ಭೀಮನ । ಅಯ್ಯನ । ವಾಯುವಿನ । ವಾಜಿಯು । ಯರಳೆಯು । ಯುರನಿ । ಯೆದೆಯಲ್ಲಿ । ಬರಿಸಿರ್ದ । ಚಂದ್ರನ । ಅರಿಸರ್ಪನ । ಸುತೆ । ನಾಗ ಕರ್ನಿಕೆಯು । ಅರಸನ । ಅರ್ಜುನನ । ವರ । ಶ್ರೇಷ್ಠನಾದಂಥಾ । ಬೊಂಮ್ಮನ । ಕೃಷ್ಣನ । ಸೊಸೆಯು । ಶಾರಧಿಯು । ಮೂಗನರಿದನ ।

ವೀರೇಶ್ವರನ । ಅಯ್ಯನ । ಪರಮೇಶ್ವರನ । ದೇವಸ್ವರೂಪನಾದಂಥಾ ।
ಮಂಣೇಶನೆ । ನಮುಸ್ಕಾರಲು ॥ ೧೨ ॥
ಮಂಣೇಶನ ಪುರಾಣದ ನಾದ್ಯಪದ ಸಮಾಪ್ತಿ ಮಂಗಳ ಮಹಾ ಶ್ರೀ.

ವಿಷಯ : ಮಣ್ಣೇಶ್ವರ ಪುರಾಣದಲ್ಲಿ ಬರುವ ನಾಂದಿ ಪದ್ಯಗಳಲ್ಲಿ ಪರಶಿವನ ಸ್ತುತಿ.

ವಿಶೇಷ : ಈ ಕಟ್ಟಿನಲ್ಲಿ ವಟಪುರ ಸಿದ್ಧಾಂತ ಸ್ತೋತ್ರ, ಗಿರಿಜಾಕಲ್ಯಾಣದೊಳಗಣ ಪದ, ವೈದ್ಯಶಾಸ್ತ್ರ, ಸಂಗಮೇಶ್ವರ ಸ್ತುತಿ ಮೊದಲಾಗಿ ಇನ್ನೂ ಎಂಟು ಕೃತಿಗಳಿವೆ. ಈ ಗ್ರಂಥ ಮಣ್ಣೇಶ್ವರ ಕಾವ್ಯದ ನಾಂದಿ ಪದ್ಯಗಳಾಗಿದ್ದು ಪದಗಳು ಸಾಂಗತ್ಯದ ಛಂದಸ್ಸಿನ ಲಕ್ಷಣಕ್ಕೆ ಸರಿಹೋಗುತ್ತವೆ.
[ಕ. ಹ. ಪ್ರ. ವ. ಸೂ. ತೃತೀಯ ಸಂಪುಟ. ಪುಟ ೨೨೮ ಕ್ರಮಾಂಕ 1239 ನೋಡಿ]

—ಕೆಆರ್‌ಎಸ್

371

ಕ. ೧೨೭೨/೨ — ಮಣ್ಣೇಶ್ವರ ಪುರಾಣದ ನಾಂದ್ಯ — ಪದ, ಟೀಕ
೧೧"×೧.೯" — ? — ಸು. ೧೭೦೦
೭–೯ ಪತ್ರ — ೧೦ ಪಂಕ್ತಿ — ೪೮ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಮಣ್ಣೇಶ್ವನ ಪುರಾಣದ ನಾಂದ್ಯವ ಬರವುದಕ್ಕೆ ಶುಭಮಸ್ತು ॥
ತರುವೂರನ ದ್ವಂದೇ । ತನುಜೆ ಮನೆ ಮನೆಯ ಸಖ ।
ತರುಣನ ಮಗನನುಗಾ । ಸರಸಿಯಾತ್ಮಜನ ಮಾವನ ಮಗ
ನುರುಪಿದ ಗುರುವೇ ಮಣ್ಣೇಶ ಮಾಂ ತ್ರಾಹೀ ॥

ಟೀಕು ॥ ತರುವೂರದನ । ಚಂದ್ರನ । ತಂದೆ । ಸಮುದ್ರದ । ತನುಜೆಯು । ಲಕ್ಷ್ಮಿಯ । ಮನೆಯು । ತಾವರೆಯ । ಸಖ । ಸೂರ್ಯನ । ತರುಣ । ಕರ್ಣನ । ಅಮ್ಮನ । ಕೊಂತಿಯಮಾವರನ । ಪಾಂಡವ । ಅಣುಗನ । ಅರ್ಜುನನ । ಅರಸಿಯು । ಸುಭದ್ರೆಯು । ಆತ್ಮಜನ । ಅಭಿಮನ್ಯುವಿನ । ಮಾವನ । ವಿಷ್ಣುವಿನ । ಮಗನ । ಮನ್ಮಥನ । ವುರುಪಿದ । ದಹಿಸಿದಂಥ ಮಣ್ಣೇಶ । ಚಿತ್ಪೃಥ್ವಿಗೆ ಕರ್ತೃವಾದಂಥ । ಗುರುವೆ । ಯೆಲೆ ಅಯ್ಯನೆ । ಮಾಂ ಯೆನ್ನನು । ತ್ರಾಹೀ ರಕ್ಷಿಸು ॥ ೧ ॥

ಅಂತ್ಯ : ಸರಸಿ ಹೋಕನ ತಾಯ ವರನಣುಗನ ರಕ್ತ
ಸುರಿದನಯ್ಯನ ವಾಜಿಯುರಗಿ ಗಿರಿಸುತೆಯರಸನ
ಪರಭೋವನ ಸೂಸಿ ಮಾಗರಿದಯೆರಳಯ್ಯನೆ ಮಣ್ಣೇಶ ಶರಣು ।

ಟೀಕು ॥ ಸರಸಿ ಕೊಳನ । ಹೊಕ್ಕನ ಕೌರವನ । ತಾಯು । ಗಾಂಧಾರಿಯಂ । ವರನ । ಧೃತರಾಷ್ಟ್ರನ । ಅಣುಗನ । ದುಸ್ವಾಸನ । ರಕ್ತ ಸುರಿದನ । ಭೀಮನ । ಅಯ್ಯನ । ವಾಯವ್ಯನ । ವಾಜಿಯು । ಯೆರಳೆಯು । ಪುರನಿಗೆ । ಎದೆಯಲ್ಲಿ ಧರಿಸಿರ್ದ್ದ ಚಂದ್ರನ ಅರಿ ಸರ್ಪನ । ತಾಯು । ಗಾಂಧಾರಿಯ । ವರನ । ಧೃತರಾಷ್ಟ್ರನ । ಅಣುಗನ । ದುಸ್ವಾಸನ । ರಕ್ತಸುರಿದನ । ಭೀಮನ । ಅಯ್ಯನ । ವಾಯುವ್ಯನ । ವಾಜಿಯು । ವೀರೇಶ್ವರನ । ಅಯ್ಯನೆ ತಂದೆಯಾದ । ಶಿವಸ್ವರೂಪನಾದ ಮಣ್ಣೇಶನ ನಮುಸ್ಕಾರವು ॥ ೧೫ ॥

ಮಣ್ಣೇಶ್ವರನ ಪುರಾಣದ ನಾಂದ್ಯ ಸಮಾಪ್ತ ಮಂಗಳ ಮಹಾ ಶ್ರೀ.

ವಿಷಯ : ಪರಶಿವನ ಸ್ತುತಿ.

ವಿಶೇಷ : ಇದೇ ಕಟ್ಟಿನಲ್ಲಿ ನೀಲಾಂಬಿಕಾ ಲಲಿತ ಸ್ತೋತ್ರ, ಮುರಿಗೆ ಸ್ವಾಮಿಗಳ ನಾಂದ್ಯ ಮೊದಲಾದ ೧೭ ಕೃತಿಗಳಿವೆ.

—ವೈಕಿಬಿ

## 372

| ಕ. ಬಿ. ೫೧೦/೩ | ಮಣ್ಣೇಶ್ವರ ಪುರಾಣದ ನಾಂದ್ಯ | ಪದ, ಟೀಕು |
|---|---|---|
| ೮.೨"×೬.೬" | ? | ಸು. ೧೬೦೦ |
| ೧–೪ ಪತ್ರ | ೨೦ ಪಂಕ್ತಿ | ೧೬ ಅಕ್ಷರ |

ಆದಿ : ಶ್ರೀ ಗುರುವೇ ನಮಃ ॥ ಮಣ್ಣೇಶ್ವರ ನಾಂದ್ಯ ಬರವುದಕ್ಕೆ ಶುಭಮಸ್ತು ಸಾಂಗತ್ಯ ॥

ತರುವುರದನ ತಂದೆ ತನುಜೆಯಂ ಸಖ
ತರುಣನವ್ವೆಯಂ ವರನಣುಗ
ಅರಸಿಯಹಾತ್ಮಜನ ಮಾವನ ಮಗನುರುಹಿದ
ಗುರುವೆ ಮಣ್ಣೇಶ ಮಂತ್ರಾಹೀ ॥ ೧ ॥

ಟೀಕು ॥ ತರು ಉರದನ—ಚಂದ್ರನ. ತಂದೆ—ಸಮುದ್ರರಾಜ, ತನುಜೆ—ಲಕ್ಷ್ಮಿಯಂ, ಮನೆಯು—ತಾವರೆಯಂ, ಸಖ—ಸೂರ್ಯನ, ತರುಣ—ಕರ್ಣನ, ತಾಯಿ—ಕುಂತೀದೇವಿಯಂ, ವರ—ಪಾಂಡವರಾಯನ ಅಣುಗ—ಅರ್ಜುನನ, ಅರಸಿ—ಸುಭದ್ರೆಯಂ, ಆತ್ಮಜ—ಅಭಿಮನ್ಯುವಿನ, ಮಾವ—ಕೃಷ್ಣನ, ಮಗ—ಮನ್ಮಥನ, ಉರುಹಿದ—ದಹಿಸಿದಂಥ ಗುರುವೆ ಮಣ್ಣೇಶ್ವರನೆ ಮಾಂ ತ್ರಾಹಿ ರಕ್ಷಿಸು—ಎಂದನು ॥ ೧ ॥

ಅಂತ್ಯ : ನಾಸಿಕ ಉಂಬನ ಘಾಸೆಗೈದವನ ಛೇ
ದಿಸಿದನಂಗನೆಯಂ ಪಿತನಾ

ಸೂಸದುಂಡವಗೆ ನಂದಿಸಿದಾತಗೆಯಹಾದಿ
ವಾಸ ಮಣ್ಣೇಶ ಮಂತ್ರಾಹೀ ॥ ೧೩ ॥

ಟೀಕೂ ॥ ನಾಶಿಕ—ಮೂಗಿನಿಂದ ಉಂಬ ಗಜೇಂದ್ರನ ಘಾಸೆ—ಗೈದ—ಮೊಸಳೆಯಂ, ಛೇದಿಸಿದ—ಕೃಷ್ಣನ, ಅಂಗನೆ—ಲಕ್ಷ್ಮಿಯಂ, ಪಿತ—ಸಮುದ್ರರಾಜನ, ಸೂಸದುಂಡವ—ಅಗಸ್ತ್ಯನಿಗೆ ವಂದಿಸಿದಾತಂಗೆ, ವಿದ್ಯಾಚಲ—ಹಿಮಾಚಲಕ್ಕೆ ವಾಸವಾಗಿ ಇರುವಂಥ ಮಹೇಶ್ವರನೆ, ಮಾಂತ್ರಾಹೀ—ಎಂದನೂ ॥ ೧೩ ॥ ಶ್ರೀ.

**ವಿಷಯ :** ಪರಶಿವನ ಸ್ತುತಿ.

**ವಿಶೇಷ :** ಗ್ರಂಥದ ಸ್ಥಿತಿಯು ಉತ್ತಮವಾಗಿದೆ. ಸಿರಿಗೆರೆಯ ಶ್ರೀ ರುದ್ರಪ್ಪಯ್ಯನವರಿಂದ ತರಿಸಿಕೊಂಡ ಓಲೆ ಕಟ್ಟಿನಲ್ಲಿದ್ದ ಗ್ರಂಥದ ಮರುಪ್ರತಿಯನ್ನು ಶ್ರೀ ಎಂ. ಎಸ್. ಬಸವರಾಜಯ್ಯನವರು ಸಿದ್ಧಗೊಳಿಸಿದ್ದಾರೆ. ಇದೇ ಪುಸ್ತಕದಲ್ಲಿ ಕಲ್ಲೆಲಿಂಗೇಶ್ವರನ ಚಾರಿತ್ರ, ವಂಶಾವಳಿ ಟೀಕು, ಗುರು ಮುರಿಗೇಂದ್ರ ಷಟ್ಪದಿ ಎಂಬ ಇತರ ಮೂರು ಗ್ರಂಥಗಳಿವೆ.

—ಕೆಆರ್‌ಎಸ್

## 373

| ಕೆ. ೧೭೨೩/೪ | ಮತಾಂತರ ಬಾಲವೈದ್ಯ | ಗದ್ಯ |
|---|---|---|
| ೮.೮″ × ೧.೪″ | ? | ? |
| ೨೯-೫೦ ಪತ್ರ | ೭ ಪಂಕ್ತಿ | ೪೨ ಅಕ್ಷರ |

**ಆದಿ :** ಶ್ರೀ ಕೂಷ್ಮಾಂಡಿನಿಯೇ ನಮಃ ॥ ನಿರ್ವಿಘ್ನಮಸ್ತು ॥ ಮತಾಂತರ ಬಾಲ ವೈದ್ಯ ॥ ವೊಂದು ದಿವಸ ವೊಂದು ತಿಂಗಳು ವೊಂದು ವರ್ಷದ ಕೂಸಂ ವಿರಹಿಯಂಬ ದೇವತೆ ಹಿಡಿಗುಂ। ಯಿದರ ಚೇಷ್ಟೆ। ಕಣ್ಣ ಮುಚ್ಚಿ ಸುಗುಂ ಕುಡಿದ ಹಾಲು ತಿರುಗುವದು। ಮೈಯಿ ಬಿಂಚುಗುಂ। ಮಾವುನ ದಲ್ಲಿ ಯಿರುವುದು। ಹಾಲ ಕುಡಿಯದು।

**ಅಂತ್ಯ :** ಯಿಾ ವರ್ಷ ಮಾಸ ದಿನಂಗಳಲ್ಲಿ ಕಟಿಣ ಸಾಧ್ಯ। ೧। ೫। ೯। ೩। ಯಿಾ ದಿನ ಮಾಸ ವರ್ಷಂಗಳಲ್ಲಿ ಸಾಧ್ಯವೆಂದು ಅರಿವುದು ೩। ೪। ನೇ ವರ್ಷಕ್ಕೆ ನಷ್ಟ ಸಾಧ್ಯ ॥ ಶ್ರೀ

**ವಿಷಯ :** ಬಾಲಗ್ರಹ ಚಿಕಿತ್ಸೆ, ಯಂತ್ರ ಹಾಗೂ ವೈದ್ಯ.

**ವಿಶೇಷ :** ಬರಹ ಚೆನ್ನಾಗಿದೆ. ೩೦ನೆಯ ಪತ್ರ ಮುರಿದು ಒಂದು ಭಾಗ ಲುಪ್ತವಾಗಿದೆ. ಇದೇ ಗ್ರಂಥದ ಅಂತ್ಯದಲ್ಲಿ 'ನಕ್ಷತ್ರಬಲಿ'ಗೆ ಸಂಬಂಧಿಸಿದ

ಮೂರು ಪತ್ರಗಳಿವೆ. ಈ ಕಟ್ಟಿನಲ್ಲಿ ಬಾಲಗ್ರಹ ಚಿಕಿತ್ಸೆ, ಬಾಲಗ್ರಹ ರಾವಣ ಮಂತ ಮೊದಲಾದ ಗ್ರಂಥಗಳಿವೆ.

—ಕೆಆರ್‌ಎಸ್

## 374

| ಕೆ. ಎ. ೪೫೪ | ಮದನತಿಲಕ | ಚಂಪೂ |
|---|---|---|
| ೧೦.೫"×೯.೫" | ಚಂದ್ರರಾಜ | ೧೦೭೯ |
| ೧–೮೫ ಪುಟ | ೨೦ ಪಂಕ್ತಿ | ೧೮ ಅಕ್ಷರ |

ಆದಿ : ಮದನತಿಲಕ ಗ್ರಂಥ। ಶೋಭನಮಸ್ತು। ನಿರ್ವಿಘ್ನಮಸ್ತು।
ಶ್ರೀ ವಧುವಿಂಗಗಜೆಗೆ ವಾಕ್
ಶ್ರೀ ವಧುವಿಂಗಜನನ ಜನನಜನಂ ಕುಸುಮಶಾ
ಸ್ತ್ರಾವಳಿಯಿಂದೋಲೈಸಿದ
ಭಾವೋದ್ಭವನೀಗೆ ನಮಗೆ ಸುಖಸಂಪದಮಂ ॥ ೧ ॥
ಶ್ರೀಯಂ ಉರಸ್ಥಳದೊಳ್ ವಾಕ್
ಶ್ರೀಯಂ ನಿಜವದನ ಕಮಲದೊಳ್ ಕೂರ್ತು ಜಯ
ಶ್ರೀಯಂ ಭುಜದೊಳ್ ಕೀರ್ತಿ
ಶ್ರೀಯಂ ದಿಕ್ತಟದೊಳೋವಿದಂ ರೇಚನೃಪಂ ॥

× × × ×

ಕೃತಿಪತಿ ರೇಚನೃಪಂ ಕವಿ
ಪತಿ ಚಂದ್ರಂ ಬರೆದವಂತಿರ್ದ ಬ್ರಹ್ಮಂ ಸ
ತ್ಕೃತಿ ಮದನತಿಲಕಮಿದು ಕಾ
ಮಂತತ್ವಮೆನೆ ನಚ್ಚಿಮಚ್ಚಿ ಪೊಗಳದರೊಳರೇ ॥

ಅಂತ್ಯ : ಕಾಮುಂಗೆ.......... ಮೂಲಂ
ಕಾಮಿನಿ ತಾನನ್ಯಚಿತ್ತೆಯಾಗದ ತೆರದಿಂ
ಪ್ರೇಮದಿ ನಿಚ್ಚಂ ಯತ್ನದೊ
ಳೀಮಾತೊ ನೆಗಳೆ ನೆಗಳೆ ಪಡೆಗುಂ ಸುಖಮಂ ॥

ವಿಷಯ : ಕಾಮಶಾಸ್ತ್ರ.

ವಿಶೇಷ : ಶ್ರೀ. ಎ. ಅಳಗಿರೀಶಾಚಾರ್ ಅವರಿಂದ 1927ರಲ್ಲಿ ಪ್ರತಿ ಮಾಡಲಾಗಿದೆ. ಮೂಲಪ್ರತಿ ಯಾವುದೊ ತಿಳಿಯುವುದಿಲ್ಲ. ಅಸಮಗ್ರ ಪ್ರತಿ.

—ಬಿಎಸ್‌ಎಸ್

## 375

ಕೆ. ೮೫೫/೧ ಮದನಮೋಹಿನಿಯ ಕಥೆ ಸಾಂಗತ್ಯ
೧೦.೬'' × ೧.೨'' ಲಕ್ಷ್ಮಯ್ಯ ಸು. ೧೬೫೦
೧-೧೦೨ ಪತ್ರ ೫ ಪಂಕ್ತಿ ೩೮ ಅಕ್ಷರ

**ಆದಿ :** ..... ಪತಾಯೆಂ ನಮಃ ॥ ಶ್ರೀ ಗುರುಭ್ಯೋ ನಮಃ ॥ ಶುಭಮಸ್ತು ॥ ......ನಂ ಭರಕೇಶ ...ಗಿರಿಜೇಶನ ಕೈಲಾಸವಾಶನಾ ॥ ಸೇಷಭೂಷಣನ ಗೊಂಬೆ ॥

× × ×

ಸಕ್ಕರೆಯಂತೆ ಜೇಂನ್ಗೊಡದಂತೆ ಚಿಲಿ ಪಾಲು
ಸೊಕ್ಕ ಜವ್ವನೆಯ ಸೊಬಗಿನಂತೆ
ಚಿಕ್ಕ ಪ್ರಾಯದ ಹೆಂಣ ತಕ್ಕೆಯ......
.. ಕ್ಕರಂತಿಹುದು ಯಿಾ ಕೃತಿಯೋದಾ ॥ ೧೬ ॥

**ಅಂತ್ಯ :** ತಂದೆತಾಯಿಗಳ...ವೆಯ ಮಾಡಿದುದರಿಂದ
ಯಿಂದ್ರನ ಪದವಿ ಕೈಸಾರಿತೂ
ಸಂದಿತು ಕೀರ್ತ್ತಿ ಮೂಜಗದೊಳು ಜಯಸೇನ
ಗೆಂಬಲ್ಲಿ ಕಥೆ ಸಂಧಿ ಸಂಪೂರ್ನ್ನ ॥ ೭೩ ॥
ಅಂತು ಸಂಧಿ ೧೧ಕ್ಕಂ ಪದನು ೮೩೩ಕ್ಕಂ ಮಂಗಳ ಮಹಾ ಶ್ರೀ.
ವಿರೋಧಿಕೃತು ಸಂವತ್ಸರದ ಜೇಷ್ಟ ಶುದ್ಧ ೧೦ ಯೇಲುಮೋಗಳ ಗವಿಯ ಬಸವಲಿಂಗದೇವರ ಶಿಷ್ಯ... ಂತ ಮಲ್ಲಿಕಾರ್ಜುನ ದೇವರು ಮಾಗ ಮಾರಕೆಂಪಯ್ಯನ ಮಗ ದೇವೈಯ್ಯನಿಗೆ ಬರೆದುಕೊಟ್ಟ ಮದನಮೋಹಿನಿ ಕಥೆ ॥ ಸಮಸ್ತ ಮಂಗಳ ಮಹಾ ಶ್ರೀ.

**ವಿಷಯ :** ಮದನ ಮೋಹಿನಿಯ ಕಥೆ.

**ವಿಶೇಷ :** ಅಸಮಗ್ರ. ಆದಿಯಲ್ಲಿ ಕೆಲವು ಪತ್ರಗಳು ತ್ರುಟಿತ ಹಾಗೂ ಮುರಿದು ಲುಪ್ತವಾಗಿವೆ. ಎಲ್ಲಾ ಗರಿಗಳಿಗೂ ಹುಳು ಹೊಡೆದಿದೆ. ೨, ೯ನೆಯ ಪತ್ರಗಳು ಇಲ್ಲ. ಶಕಟರೇಫವನ್ನು ಬಳಸಿದೆ.

—ಕೆಆರ್ ಎಸ್

## 376

ಕೆ. ೯೧೦ ಮದನಮೋಹಿನಿಯ ಕಥೆ ಸಾಂಗತ್ಯ
೧೩.೨''×೧.೯'' ಲಕ್ಷ್ಮಯ್ಯ ಸು. ೧೬೫೦
೧-೯೪ ಪತ್ರ ೫ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀ ಗಣಾಧಿಪತಯೆ ನಮಃ ಶ್ರೀ ಸದಾಶಿವಾಯಂ ನಮಃ ಶ್ರೀ ನರ

ಸಿಂಹಾಯ ನಮಃ ॥ ಮದನ ಮೋಹಿನಿ ಕಥೆ ॥ ಸೊಬಗಿನ ಸೋನೆವರ್ನ
ವದುವರೆ......ವಃಸ್ತು ॥

ಶ್ರೀ ಗಿರಿಜೇಶನ ಸಖ ಮುತ್ತಯ್ಯನ
ನಾಗ ಪೆತ್ತನ ಪ್ರೀಯ ತಾತಾನಾ
ಭೋಗೀಶಯನನ ವಾರಿಧಿ ಜಾತೆಯರಸನ
ಬೇಗದಿಂ ಭಜಿಪೆ ನಾ ನಂಡಿನಾ ॥ ೧ ॥

× × ×

ಪದದಾದಿಯಾವುದೆಂವಡೆ ಪುರಾಣದೊಳುದಿ
ಸಿದ ಕಥೆಯ ಕಾವ್ಯವ ಮಾಡಿ
ಯದುಗಿರಿವಾಸನ ವರದಿಂದ ಪೇಳುವೆ
ಮದನ ಮೋಹಿಸಿಯ ಕಥೆಯನೊಂದಾ ॥ ೧೯ ॥

ಅಂತ್ಯ : ತಂದೆ ತಾಯಿಗಳ ಸೇವೆಯ ಮಾಡಿದುದರಿಂದ
ಯಿಂದ್ರನ ಪದವಿ ಕೈಸಾರಿತೂ
ಸಂದಿತು ಕೀರ್ತಿ ಮೂಜಗದಲಿ ಜಯಸೇನ
ಗೆಂದಲ್ಲಿ ಸಂಧಿ ಸಂಪೂರ್ನವೂ ॥ ೭೧ ॥

× × ×

ದೇವರದೇವನೆ ದೇವಶಿಖಾಮಣಿ ಪಾವನರೂಪ ಪುಣ್ಯೋದಯ ।
ದೇವೇಶ ನರಸಿಂಹದೇವನೆಕ್ರುಪೆಯಿಂದ ।
ಕಾವುದು ಸಕಲ ಸಜ್ಜನರನೂ ॥ ೭೭ ॥
ಸಂಧಿ ಸಂಪೂರ್ನ ॥ ಅಂತು ಸಂಧಿ ೧೧ಕ್ಕಂ ಪದನು ೮೮೭ ಕ್ಕಂ
ಮದನ ಮೋಹಿನಿ ಕಥೆ ಸಂಪೂರ್ನ ಮಂಗಳ ಮಹಾ ಶ್ರೀ.

ವಿಷಯ : ಮದನಮೋಹಿನಿಯ ಕಥೆ.

ವಿಶೇಷ : ಸಮಗ್ರವಾಗಿದ್ದರೂ ಕೆಲವು ಗರಿಗಳ ಅಂಚುಗಳಿಗೆ ಹುಳು ಹೊಡೆದಿದೆ. ಕವಿಯು ಮೇಲುಕೋಟೆಯ ನರಸಿಂಹಸ್ವಾಮಿಯನ್ನು ವಿಶೇಷವಾಗಿ ಸ್ತುತಿಸಿದ್ದಾನೆ. ಅಲ್ಲಲ್ಲಿ ಶಕಟರೇಫದ ಪ್ರಯೋಗವಿದೆ. ಅಂತ್ಯದಲ್ಲಿ ಕಾವ್ಯದಲ್ಲಿ ಪ್ರತಿ ಬರೆಸಿದವನ, ಬರೆದವನ ವಿವರವಿದೆ.

—ಕೆಆರ್ ಎಸ್

## 377

| ಕೆ. ೧೦೨೬ | ಮದನಮೋಹಿನಿಯು ಕಥೆ | ಸಾಂಗತ್ಯ |
|---|---|---|
| ೧೧.೪″ × ೧.೨″ | ಲಕ್ಷ್ಮಯ್ಯ | ಸು. ೧೬೫೦ |
| ೧-೯೧ ಪತ್ರ | ೪ ಪಂಕ್ತಿ | [illegible] ಅಕ್ಷರ |

ಆದಿ : ಶ್ರೀ ಶಾರದಾ ಗುರುವೆ ಗತಿ । ಮದನಮೋಹಿನಿಯು ಪುಸ್ತಕವ ಬರವದಕೆ ಗುರುವೆ ಗತಿ ॥
ಯಿಶನಂಬರಕೇಶನ ಶ್ರೀ ಗಿರಿ
ಜೇಶನ ಕೈಲಾಸವಾಸನ
ಶೇಷಾಭೂಷಣನ ಸರ್ವೇಶನ ಗಂಗಾಧ
ರೇಶನನೊಮ್ಮೆ ನಾ ಬಲಗೊಂಬೆ
ಶ್ರೀ ರಮಣನ ಗಿರಿಜಾರಮಣನ ವಾ
ಣೀರಮಣನ ತ್ರಿಗುಣಸ್ವರೂಪನಾ
ತೋರಿ ತೋರದ ಚತರ್ವೇದಾಘೋಚರನಾದಾ
ನಾರಸಿಂಹ್ಯನಿಗೆ ನಾನೆರಗುವೆ

ಅಂತ್ಯ : ತಂದೆ ತಾಯಿಂಗಳಾ ಸೇವೆಯು ಮಾಡಿದುದರಿಂದ
× × ಪದವಿ ಕೈಸಾರಿತು
ಸಂದಿತು ಕೀರ್ತಿಮೂಜಗದೊಳು ಜಯುಸೇನಗಂ
ಬೋದು ಸಂಧಿ ......
ಅಂತು ಮದನಮೋಹಿನಿಯು ಕಥೆ × × × ಸಾಪಾಗಿ ಬರದ ಸಂಧಿ ೧೧ಕ್ಕಂ ಪದನು ೯೭೭ ಮಂಗಳ ಮಹಾಶ್ರೀ ಶ್ರೀ
ವ್ಯಯ ಸಂವತ್ಸರದ ಭಾದ್ರಪದ ಬ ೭ ಸೋಮವಾರದ ಹೂಲಿಕೆರೆ ಗಲುಡಗಳ ಗುರುಸ್ವಾಮಿ ಪುರಾಣದ ಬಸಲಿಂಗದೇವರ ಮಕ್ಕಳು ಮಹಾಂತದವರ ಮಕ್ಕಳು ಬಸುಲಿಂಗದೇಪರು ಬರದ ಮದನಮೋಹಿನಿಯು ಪುಸ್ತಕಕ್ಕೆ ಆಯುರಾರೋಗ್ಯಮಸ್ತು ಶ್ರೀ ಶ್ರೀ.

ವಿಷಯ : ಜಯುಸೇನ ಮತ್ತು ಮದನಮೋಹಿನಿಯರ ಕಥೆ.

ವಿಶೇಷ : ೯೧ನೆಯು ಪತ್ರ ಇಡೀ ಕಟ್ಟಿನ ಇತರ ಪತ್ರಗಳಿಂದ ಭಿನ್ನವಾಗಿದೆ.

—ಜಿಜಿಎಂ

378

ಕೆ. ಎ. ೩೮೯ | ಮದನಮೋಹಿನಿಯ ಕಥೆ | ಸಾಂಗತ್ಯ
೧೩.೧"×೮.೫" | ಲಕ್ಷ್ಮಯ್ಯ | ಸು. ೧೬೫೦
೧–೧೪೯ ಪುಟ | ೨೪ ಪಂಕ್ತಿ | ೧೩ ಅಕ್ಷರ

ಆದಿ : ಮದನಮೋಹಿನೀ ಕಥೆ। ಸೊಬಗಿನ ಸೋನೆ ವರ್ಣವದುದಕ್ಕೆ ಶುಭ ಮಸ್ತು ।

ಶ್ರೀ ಗಿರಿಜೇಶನ ಸಖನ ಮುತ್ತಯ್ಯನ
ನಾಗ ಪೆತ್ತನ ಪ್ರಿಯತಾತನ
ಭೋಗಿಶಯನನ ವಾರಿಧಿಜಾತೆಯರಸನ
ಬೇಗದಿಂ ಭಜಿಪೆ ನಾನನುದಿನ ॥ ೧ ॥

× × × ×

ವ್ಯಾಸ ವಾಲ್ಮೀಕಿ ಹರೀಶ ಬಾಣನು ಕಾಳಿ
ದಾಸ ಮಯೂರನು ಮಲುಹಣ
ಈಶಭಕ್ತನು ರಾಘವಾಂಕನ ಬಲಗೊಂಡು
ಲೇಸಾಗಿ ಪೇಳ್ವೆನೀ ಕೃತಿಯನು ॥ ೧೩ ॥
ಕಾಲ ಮೊದಲು ಕಾವ್ಯವ ನೋಡಿದವನಲ್ಲ
ಮೇಲೆ ಶಾಸ್ತ್ರವ ಪಠಿಸಿದವನಲ್ಲ
ಮೇಲುಗೋಟೆಯ ನರಸಿಂಹನ ಕೃಪೆಯಿಂದ
ಪೇಳಿದೆನೀ ಕೃತಿಯನು ನಾನು ॥ ೧೪ ॥

× × × ×

ಪದದಾದಿ ಯಾವುದೆಂದಡೆ ಪೌರಾಣದೊ
ಳುದಿಸಿದ ಕಥೆಯ ಕಾವ್ಯದ ಮಾಡಿ
ಯದುಗಿರಿವಾಸನ ವರದಿಂದ ಪೇಳುವೆ
ಮದನ ಮೋಹಿನಿಯ ಕಥೆಯನೊಂದ ॥ ೧೯ ॥

ಅಂತ್ಯ ಬಸವೇಶ್ವರನ ಭಕತ ಕೆಂಪರಾಜನ
ರಸಿಕಕುಮಾರ ವೀರಯ್ಯಗೆ
ಪೊಸತೆನೆ ಬರದನು ಹಿರಿಯ ಸುಪೆಯಲಿಪ್ಪ
ವಸುಧೆ ಲಕುಮಯ್ಯ ॥ ೭೫ ॥
ತೆರ ಕಾಣ್ಬೆಯ ರಂಗಪಂಡಿತರಾತ್ಮಜ
ವರದ ಮದನ ಮೋಹಿನಿಯ ಕಥೆ

ಧರಣಿ ಚಂದ್ರನ್ನರುಳ್ಳನ್ನ ಶುಭದೊಳಿತ್ತ್ಯ
ವರ ಭಾರ್ಗವದೇವಿಯೊಲವಿಂದ ॥ ೭೬ ॥
ದೇವರ ದೇವನೆ ದೇವ ಶಿಖಾಮಣಿ
ಪಾವನ ರೂಪ ಪುಣ್ಯೋದಯ
ದೇವೇಶ ನರಸಿಂಹದೇವನೆ ಕೃಪೆಯಿಂದ
ಕಾವುದು ಸಕಲ ಸಜ್ಜನರನು ॥ ೭೭ ॥
ಸಂಧಿ ಸಂಪೂರ್ಣಂ ॥ ಅಂತು ಸಂಧಿ ೧೧ಕ್ಕಂ ಪದನು ೨೧೭೬ಕ್ಕಂ ಮದನ ಮೋಹಿನೀ ಕಥೆ ಸಂಪೂರ್ಣಂ. ಮಂಗಳ ಮಹಾಶ್ರೀ.

ವಿಷಯ : ಮಾಳವ ದೇಶದ ಚಂಪಕಪುರದರಸ ಚಂದ್ರಶೇಖರರಾಜನ ಮಗನಾದ ಜಯಸೇನನು ಚಿಕ್ಕಮ್ಮನ ದ್ವೇಷಕ್ಕೆ ಗುರಿಯಾಗಿ ಮನೆಯನ್ನು ಬಿಟ್ಟು ನಡೆದು, ಪ್ರಸಿದ್ಧನಾಗಿ ಮದನಮೋಹಿನಿಯನ್ನು ಮದುವೆಯಾದುದು.

ವಿಶೇಷ : ಇದನ್ನು ೧೯೪೮ರಲ್ಲಿ ಪ್ರತಿಮಾಡಲಾಗಿದೆ. ಇದರ ಮೂಲಪ್ರತಿ ಮದರಾಸಿನ ಡಿ. ನಂ. 1015.

—ಬಿಎಸ್‌ಎಸ್

## 379

| ಕ. ೧೫೮೦ | ಮದನಾದಿ ಗಣಪಾಠ | ಶ್ಲೋಕ, ಗದ್ಯ |
|---|---|---|
| ೧೫.೨" × ೧.೪" | ? | ? |
| ೩೦ ಪತ್ರ | [illegible] ಪಂಕ್ತಿ | ೪೮ ಅಕ್ಷರ |

ಆದಿ : ......ಗಣಪಾಠ ಬರೆಯುದಕ್ಕೆ ನಿರ್ವಿಘ್ನಮಸ್ತು ॥ ಮದನಾದಿಗಣ ॥
ಶ್ರೀಮತ್ಪಂಚ ಗುರುಭ್ಯೋ ನಮಃ ॥ ಶುಭಮಸ್ತು ॥
ಶ್ರೀ ವೀರಜಿನಪಂ ವಂದೆ ಸರ್ವಲೋಕ ..... ಲೋಕೆ ಸಾಲೋಕಾಯು ಧ್ಯದ ಮಣಿದರ್ಪಣೆಯತ್ಪಾದ ಸರಸಿಜಾತದ್ವಿತಯ ಮಲಸೇನಮಃ ಮುಕ್ತ ಶ್ರೀವಶ್ಯ ಚೂರ್ಣತ್ವಂಯಾತಿತಾಂ ಸೌಮಿ..... ಗುಪ್ತ ಮಹಾವೈದ್ಯ ಸೂನುಬಾಹಟಭಾಷಿತಂ। ವಾಗ್ಭಟಾಖ್ಯ ಮಹಾವೈದ್ಯ ಶಾತ್ಮಾ ವೈದ್ಯ ಮನೋಹರಂ

ಅಂತ್ಯ : ಅಗಿಲು ಶ್ರೀವಾಸ .....ಲವಂಗ। ಧೂಪ ವಿಶೇಷತಃ। ಕುಂ. ಮಂ। ಬಾಹ್ಲೀಕ। ......ಗೋಪನಾ। ಗುಗುಲು। ಗುಗುಳ ಧೂಪ ಮಹೀಮಾ। ಶ್ರೀ ದೇವದೂಪಾಯೆಂಬರರು.........ಯೆಂಬಬಿದಾನಂದಿಂ। ಅಡಕೆಯು ಹೊಂಬಾಳೆಯು ಪಟ್ಟೆ।... ರಕ್ತಕೇಸರ। ನಾಗಾಹ್ವಂ। ನಾಗಕೇಸರ।

ವಿಷಯ : ವೈದ್ಯಶಾಸ್ತ್ರ ನಿರೂಪಣೆ. ಬಾಹಟನ ಕೃತಿಗೆ ಭಾಷ್ಯ (?).

ವಿಶೇಷ : ಅಸಮಗ್ರ. ಅತ್ಯಂತ ಶಿಥಿಲ ಪ್ರತಿ. ಎಲ್ಲಾ ಓಲೆಗಳಿಗೂ ಹುಳು ಹಿಡಿದು ರಂಧ್ರ ಬಿದ್ದಿದೆ.

—ವೈಸಿಬಿ

380

ಕೆ. ೧೭೭೮/೨ ಮದ್ದುಗಳು ಗದ್ಯ
೭.೪"×೧.೫" ? ?
೭ ಪತ್ರ ೪ ಪಂಕ್ತಿ ೩೭ ಅಕ್ಷರ

ಆದಿ : ಹಾವು ಕಡಿದಕ್ಕೆ ॥ ಕೈಸೋರೆ ಬೀಜ । ಬೆಳುಳಿಯಿಂದು ಅರದು ದೂಳಿ ಮಾಡಿ ನಶ್ಯ ಹಾಕಲು । ವಿಷಬಡುವದೂ ॥
ಯಲಿ ವಿಷಕ್ಕೆ । ಚಿತ್ರಮೂಲದ ಬೇರು ।
ಸಾಸುವೆ । ಯಿರುಳಿ । ಸಹಸಂಣನಾಗಿ । ಅರದ ।
ಕಟಿ ಬ್ರಂಹ್ಮರಂದನದಲ್ಲಿ ಹರನಹುದು ॥

ಅಂತ್ಯ : ಆದಿಗ್ರಹ ಅನಾದಿಗ್ರಹ । ಪರಕುಟಿಲ ।
ಪಿಲ್ಲಿಸೂನ್ಯ । × × × ನಾಡಂಗಡಬಿ
ತಲೆಯಿರುವನಾಣೆ ಮಲೆಯಾಳ ವೀರಭದ್ರ
ನಾಣೆ । ಓಂ ಬಾಳು ಗುರುಬಾಳು । ಶ್ರೀ ಶ್ರೀ.

ವಿಷಯ : ಔಷಧ ವಿಚಾರ.

ವಿಶೇಷ : ಇದರಲ್ಲಿ ಹಾವು, ಇಲಿ ಮುಂತಾದುವು ಕಡಿದುದಕ್ಕೆ ಔಷಧಿಯನ್ನು ವಿವರಿಸಿದೆ. ಈ ಕಟ್ಟಿನಲ್ಲಿ 'ಮಂತ್ರಗಳು' ಎಂಬ ಇನ್ನೊಂದು ಕೃತಿ ಇದೆ.

—ಎಂಹಿಬಿಎಂ

381

ಕೆ.ಬಿ. ೭೨೩/೪ ಮನೆ ಕಟ್ಟುವ ಸೂತ್ರ ಶ್ಲೋಕ-ಟೀಕು
೬.೫"×೮.೫" ? ?
೭೪–೭೫ ಪುಟ ೧೪ ಪಂಕ್ತಿ ೨೦ ಅಕ್ಷರ

ಆದಿ : ಶ್ರೀ ಗಣೇಶಾಯ ನಮಃ ಇನ್ನು ಮನೆಯ ಕಟ್ಟುವರಾಯಗಳನ್ನು ತೆಗೆಯುವ ಸೂತ್ರ ॥ ಮನೆಯ ಕಟ್ಟಬೇಕಾದರೆ ಬೇಕಾದ ಸ್ಥಳವನ್ನು ಅಳತೆಯನ್ನು ಉದ್ದಾದ ಅಳತೆ ಸಂಖ್ಯೆಯನ್ನು ಅಗಲದಳತಿ ಸಂಖ್ಯಯಿಂದ ಗುಣಿಸಿ ೮ರಿಂದ ಬಾಗಿಸಬೇಕು । ಶೇಷ । ೧ ವುಳಿದರೆ ಧ್ವಜಾಯಾ । × × × ಧ್ವಜಾಯ ವೃಷಾಭಾಯಗಳಲ್ಲಿ ಮನಿಯನ್ನು ಕಟ್ಟಬೇಕು ॥

ಅಂತ್ಯ : ಮೇಲಿನ ಸಂಖ್ಯೆಯನ್ನು ೯ರಿಂದ ಗುಣಿಸಿ। ೭ರಿಂದ ಭಾಗಿಸಬೇಕು। ಶೇಷವು ವಾರ ಸಂಖ್ಯೆಯಹಾಗುತ್ತದೆ. ೨–೪–೫–೬ ಯೀಷ್ಟು ವಾರಗಳು ಆದರೆ ಶುಭಕರವು। × × ×। ೫–೧–೭–೮ ವುಳಿದರೆ ಶುಭಕರವಾಗುವದು ॥ ಯಿಾ ಪ್ರಕಾರ ನಿರ್ಣಯುವಮಾಡಿಕೊಂಡು ಮನೆಯುನ್ನು ಕಟ್ಟಬೇಕು ॥ ಶ್ರೀ ॥

ವಿಷಯ : ಮನೆಯನ್ನು ಕಟ್ಟುವ ವಿಚಾರ,

ವಿಶೇಷ : ಸಮಗ್ರ ಕೃತಿ. ಸುಂದರ ಬರವಣಿಗೆ. ಇದರೊಂದಿಗೆ 'ನಕ್ಷತ್ರಚೂಡಾಮಣಿ' ಮುಂತಾದ ಕೃತಿಗಳಿವೆ.

—ಎಂಕೆಎಂ

382

ಕೆ. ಬಿ. ೫೩೩. ಮನೆ ಖರ್ಚಿನ ಲೆಕ್ಕ ಗದ್ಯ

೬"×೮" ? ?

೧೫೪ ಪತ್ರ ೧೬ ಪಂಕ್ತಿ ೧೮ ಅಕ್ಷರ

ಆದಿ : ಯುಮುನ ಮೌಸ ॥ ಕ್ಕೆ ಕುಮಕೊಯುಲುಕಬಳಿ ಹಕಿರು। ಯುವರ ಹೆಪಸಣ ಒರ ಮಕುಟಿ ಕಳದು। ಕರೆಕಬಳಿ ೨ ಚಿಕ್ಕಮುದ ಕುಲಿ ಕಳದು ಕರೆಕಬಳಿ ೨। ಹುಂಕುಮುದಿ ಕುಲಿ ಕಳರು ಪರೆಉ ೨। ವೊಡ ಕರಿಯು ಜವನ ಕುಲಿಕಳರು ಪರೆಉ ೨।

ಅಂತ್ಯ : ರಾತಿಪರಮೇಣಾಗ ೧ ಹೊನಳಿಬಸಣಾಗ ॥ ರುದ್ರಣವಿರಗ ॥
ಕುರಬರ ಚಿಕವಿರಗ ೨ ಉರಪಗ ೨ ॥ ಪಕಿರಹಲಗ ॥

ವಿಷಯ : ಕೂಲಿ ಲೆಕ್ಕ.

ವಿಶೇಷ : ಗೋಣಿಥಾಟಿನ ಮೇಲೆ ಕಪ್ಪುಲೇಪನ ಮಾಡಿ (ಕಡತ) ಅದರ ಮೇಲೆ ಬಳಪದ ಕಲ್ಲಿನಿಂದ ಬರೆದಿದೆ. ಪತ್ರಗಳೆಲ್ಲ ಬಿಡಿಯಾಗಿರದೆ ಎಲ್ಲವೂ ಉದ್ದಕ್ಕೆ ಒಂದಾಗಿದ್ದು ಹಾಳೆಯಂತೆ ಮಡಿಸಿದೆ. ಎರಡು ಪಾರ್ಶ್ವದಲ್ಲೂ ಬರವಣಿಗೆ ಇದೆ. ಅಕ್ಷರ ಬಹಳ ಮೋಡಿ. ಓದುವುದು ಕಷ್ಟ. ಕೆಲವು ಪತ್ರಗಳಲ್ಲಿ ಬರವಣಿಗೆ ಇಲ್ಲ. ಇನ್ನು ಕೆಲವು ಕಡೆ ಸ್ವಲ್ಪ ಭಾಗದಲ್ಲಿ ಮಾತ್ರ ಬರವಣಿಗೆ ಇದೆ. ಕೆಲವು ಲೆಕ್ಕಗಳನ್ನು ಹೊಡೆದು ಹಾಕಿದೆ. ಈ ಕಟ್ಟನ್ನು ಮೇಣಗರಲ ಅಥವಾ ಖಡ್ಜನ್ ಎಂದು ಕರೆಯುವುದು ರೂಢಿಯಲ್ಲಿದೆ. ಒಬ್ಬ ವ್ಯಕ್ತಿ ಅಥವಾ ಒಂದು ಸಂಸ್ಥೆಗೆ ಸಂಬಂಧಪಟ್ಟ ಲೆಕ್ಕ ವ್ಯವಹಾರಗಳನ್ನು ಒಂದೆಡೆಯಲ್ಲಿ ಲೋಪವಾಗದಂತೆ ಬರೆದಿಡಲು ಅನುಕೂಲಿಸುವಂತೆ ತಯಾರಿಸಿರುವ ಪುಸ್ತಕ.

—ಎಸ್ ಎನ್ ಕೆ

## 383

ಕೆ. ೭೭೩/೮ ಮನೋವಿಕಾರ ನಿರಸನ ರಗಳೆ ರಗಳೆ

೬.೬" × ೧.೮" ಶಂಕರದೇವ ಸು. ೧೬೦೦

೬೪–೭೪ ಪತ್ರ ೮ ಪಂಕ್ತಿ ೨೪ ಅಕ್ಷರ

**ಆದಿ :** ಶ್ರೀ ಗುರುಸಿದ್ಧಲಿಂಗಾಯ ನಮಃ । ಮನೋವಿಕಾರರಗಳೆ ॥

ವೃತ್ತ ॥ ದಿಟ್ಟಮನಂ ಕನಿಷ್ಟ ಜೇಷ್ಟೆಯೊಳಿರ್ದಪುದಲ್ಲದೊಂಮೆಯಂ
ಮುಟ್ಟಿ ಮಹೇಶ ನಿಮ್ಮನೊಲಿದರ್ಚಿಸಲೊಲ್ಲದು
ಕೆಟ್ಟೆಕೆಟ್ಟೆ ನಾ ಬಿಟ್ಟೆಯ ಕಾಣದೆ ಬಾಯಬಿಡುತ್ತಲಿದೆನೆ
ಚಿತ್ತವಿಕಾರದೊಳ್ಗಿಯುಂ ಮೆಟ್ಟಿ ಕೆಲಕ್ಕೆ ಜಾಜಿಸಿ ನಿಂಮ ನಿಜಾಂಘ್ರಿಯಂ
ತೋರಿಸು ತಂದೆ ಶಂಕರಾ ॥ ೧ ॥

ಲಲಿತ ರಗಳೆ॥ ಶ್ರೀ ದಿವಿರಾಜ ಪೂಜಿತಜಿತಮನೋನಾಥ
ಮಹಾದೇವ ಮುಖಪದ್ಮಭಾನು ಶಂಕರಲಿಂಗಾ ॥ ೧ ॥
ಆದಿ ತಾಂಡವಮೂರ್ತಿ ದಶದಿಶಮಯ ಕೀರ್ತಿ
ವೆದೆಸುತ ಶರಣ ಸುರಧೇನು ಶಂಕರಲಿಂಗಾ ॥ ೨ ॥

**ಅಂತ್ಯ:** ಮಹಿಮ ಶಂಕರಲಿಂಗಾ । ಶರಣು ಶಂಕರಲಿಂಗಾ ॥ ೧೩೩ ॥
ಶರಣು ಶರಣಾರ್ತಿ ಶಂಕರಲಿಂಗಾ ॥

ಕಂದ ॥ ಜನನಕಾಲದೊಳೊಂದಿಸೆ
ಘನಯೌವ್ವನದೊಳು ನಿಮಗಾನೊಂದಿಸಿ ಮು
ಪ್ಪಿನ ಕಾಲದೊಳೊಂದಿಸುವೆನು
ನಿನದ ಮನಸಿಗೆ ತಾರದಿರು ತಂದೆ ಶಂಕರಾ ॥ ೮ ॥
ಮನೋವಿಕಾರ ನಿರಸನ ರಗಳೆ ॥ ಸಾಮಾಪ್ತ ಮಂಗಳ ಮಹಾ ಶ್ರೀ ॥
ಗಂಗಪ್ಪನು ಸಂಪಾದಿಸಿದ । ಜಂನವೀರಪ್ಪ ಬರದರು

**ವಿಷಯ :** ಮನಸ್ಸಿನ ವಿಕಾರಗಳಿಂದ ಮುಕ್ತನಾಗುವುದು.

**ವಿಶೇಷ :** ಸಮಗ್ರ ಕೃತಿ ; ಇದರೊಡನೆ ಗುರು ರಗಳೆ, ಷಡಕ್ಷರಿಯ ರಗಳೆ, ಶರಣ ಬಸವ ರಗಳೆ, ವೀರಶೈವರಗಳೆ, ಭೀಮಕವೀಶ್ವರರಗಳೆ, ಸದ್ಗುರುರಗಳೆ ಬಸವೇಶ್ವರ ಪವಾಡದ ರಗಳೆ, ಗುರುಬೋಧಾಮೃತ ರಗಳೆ, ಬಸವರಾಜ ರಗಳೆ, ಲಿಂಗಾರ್ಚನೆ ರಗಳೆ, ಭಕ್ತಿಬಿನ್ನಹದ ರಗಳೆ, ಮಂಗಳಾಷ್ಟಕ (ಶತಗಣನಾಮ ಸ್ತೋತ್ರ), ಅಷ್ಟಾವರಣದ ಮಂಗಳಾಷ್ಟಕ, ಇಪ್ಪತ್ತೊಮ್ಮರು ಮಂಗಳಾಷ್ಟಕಗಳು, ದೇವೀ ಸ್ತೋತ್ರ ಇತ್ಯಾದಿಗಳಿವೆ.

—ಎಸ್ ಎಸ್ ಕೆ

## 384

| | | |
|---|---|---|
| ಕೆ. ೧೧೫೨/೫ | ಮನೋವಿಕಾರ ನಿರಸನ ರಗಳೆ | ರಗಳೆ |
| ೭.೪″×೨″ | ಶಂಕರದೇವ | ಸು. ೧೬೦೦ |
| ೧೦–೧೪ ಪತ್ರ | ೧೪ ಪಂಕ್ತಿ | ೫೦ ಅಕ್ಷರ |

ಆದಿ: ಶ್ರೀ ಸಾಂಬ ಸದಾಶಿವಾಯನಮಃ ॥ ಗುರುಬೋಧಾಂಮೃತ ರಗಳೆ ॥
ವೃತ್ತ ॥ ಮನೋವಿಕಾರದ ರಗಳೆ ॥
ದಿಟ್ಟ ಮನಂಕನಿಷ್ಟಕಪಿಚೇಷ್ಟೆಯೊಳಿರ್ದಪುದಲ್ಲದೊಮ್ಮೆಯುಂ
ಮುಟ್ಟಿ ಮಹೇಶ ನಿಮನೊಲಿದರ್ಚಿಸಲೊಲ್ಲದೆ ಕೆಟ್ಟೆ ಕೆಟ್ಟೆ ನಾಂ
ಬಟ್ಟೆಯು ಕಾಣದೆ ಬಾಯು ಬಿಡುತ್ತೈದೆನೆ ಚಿತ್ತವಿಕಾರದೇಳ್ಗೆಯುಂ
ಮೆಟ್ಟಿ ಕೆಲಕ್ಕೆ ಜಾರಿಸಿ ನಿಂಮ ನಿಜಾಂಘ್ರಿಯಂ ತೋಱಿಸು ತಂದೆ ಶಂಕರಾ
ರಗಳೆ ॥ ಶ್ರೀದಿವಿಜರಾಜಪೂಜಿತ ಜಿತಮನೋನಾಥ
ಮೂದೇವ ಮುಖ್ಯಿವನಜ ಭಾನುಶಂಕರಲಿಂಗಾ ॥ ೧ ॥

ಅಂತ್ಯ: ಕಂದ ॥ ಜನನಕಾಲದೊಳೊಂದಿಸಿ
ಘನಯುವ್ವನದೊಳೊಂದಿಸೆ ನಿಮಗೆ ನಾಂ ಮು
ಪ್ಪಿನವಂದಿಸೆ ನಿನ್ನ
ಮನಸ್ಸಿಗೆ ತಾರದಿರು ತಂದೆ ಶಂಕರಲಿಂಗಾ ॥
ಮನೋವಿಕಾರ ನಿರಸನ ರಗಳೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.
ಅಂತು ೫ ರಗಳೆ.

ವಿಷಯ: ಮನಸ್ಸಿನ ವಿಕಾರಗಳಿಂದ ಮುಕ್ತನಾಗುವುದು.

ವಿಶೇಷ: ಇದೇ ಕಟ್ಟಿನಲ್ಲಿ ಗುರುಲಿಂಗಗಳೆ. ಷಡಕ್ಷರಿಯ ರಗಳೆ ಇತ್ಯಾದಿ ೨೯ ಕೃತಿಗಳಿವೆ.

—ಜಿಜಿಎಂ

## 385

| | | |
|---|---|---|
| ಕೆ. ೧೧೮೮/೪ | ಮನೋವಿಕಾರ ನಿರಸನ ರಗಳೆ | ರಗಳೆ |
| ೫.೨″ × ೧೬″ | ಶಂಕರದೇವ | ಸು ೧೬೦೦ |
| ೨-೪೨ ಪತ್ರ | ೮ ಪಂಕ್ತಿ | ೨೨ ಅಕ್ಷರ |

ಆದಿ: ಮನೋವಿಕಾರ ನಿರಸನ ರಗಳೆ ॥ ವೃತ್ತ ॥
ದಿಟ್ಟಮನಂ ಕನಿಷ್ಟ ಕಪಿಚೇಷ್ಟೆಯೊಳಿರ್ದಪುದಲ್ಲದೊಂಮ್ಮೆಯುಂ
ಮುಟ್ಟಿ ಮಹೇಶ ನಿಮ್ಮನೊಲಿದರ್ಚಿಸಲೊಲ್ಲದೊಂಮ್ಮೆಯು
ಕೆಟ್ಟೆ ಕೆಟ್ಟೆ ನಾಂ ಬಟ್ಟೆಯು ಕಾಣದೆ ಬಾಯು ಬಿಡುತಿದೇನ ಚಿತ್ತವಿಕಾರ
ದೇಳ್ಗೆಯುಂ
ಮೆಟ್ಟಿ ಕೆಲಕ್ಕೆ ಜಾರಿಸಿ ನಿಂಮ ನಿಜಾಂಘ್ರಿಯಂ ತೋಱಿಸು ವಂದೇ ಶಂಕರಾ ॥

ರಗಳೆ ॥ ಶಿದಿವಿಜ ರಾಜ ಪೂಜಿತ ಮನೋನಾಥ
ಮೂದೇವ ಮುಖವನಜ ಭಾನು ಶಂಕರಲಿಂಗ ॥ ೧ ॥

**ಅಂತ್ಯ :** ಕರುಣಿ ಶಂಕರಲಿಂಗ । ಶರಣು ಶಂಕರಲಿಂಗ
ಶರಣು ಶಂಕರಲಿಂಗ । ಶರಣು ಶಂಕರಲಿಂಗ × ×

ಕಂದ ॥ ಜನನ ಕಾಲದೊಳು ವಂಚಿಸಿ
ಘನ ಯವ್ವನದಲ್ಲಿ ನಾ ನಿಮಗೊಂದಿಸಿ ಮು
ಪ್ಪಿನಲ್ಲಿ ವಂದಿಸಿ ನೀನದ
ಮನಸಿಗೆ ತಾರದಿರು ತಂದೆ ಶಂಕರ ॥
ಮನೋವಿಕಾರ ನಿರಸನ ರಗಳೆ ॥ ಸಮಾಪ್ತ ಮಂಗಳ ಮಹಾಶ್ರೀ

**ವಿಷಯ :** ಮನಸ್ಸಿನ ವಿಕಾರಗಳಿಂದ ಮುಕ್ತನಾಗುವುದು.

**ವಿಶೇಷ :** ಸಮಗ್ರ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಗುರು ರಗಳೆ, ಷಡಕ್ಷರಿ ರಗಳೆ ಮೊದಲಾಗಿ ಒಟ್ಟು ಆರು ಕೃತಿಗಳಿವೆ. [ಕ.ಹ.ಪ್ರ.ವ.ಸೂ. ತೃತೀಯ ಸಂಪುಟ. ಪುಟ. ೨೪೨ ಕ್ರಮಾಂಕ. 1253 ನೋಡಿ]

—ಕೆಆರ್‌ಎಸ್

## 386

| ಕೆ. ೧೨೬೩/೪ | ಮನೋವಿಕಾರ ನಿರಸನ ರಗಳೆ | ರಗಳೆ |
|---|---|---|
| ೭.೬"×೧.೮" | ಶಂಕರದೇವ | ಸು. ೧೬೦೦ |
| ೧೧-೧೭ ಪತ್ರ | ೯ ಪಂಕ್ತಿ | ೩೮ ಅಕ್ಷರ |

**ಆದಿ :** ಮನೋವಿಕಾರ ನಿರಸನ ರಗಳೆ.

ವೃತ್ತಂ ॥ ದಿಟ್ಟಮನಂ ಕನಿಷ್ಟ ಕಪಿಚೇಷ್ಟೆಯೊಳಿರ್ದ್ದುಪುದಲ್ಲದೊಮ್ಮೆಯುಂ
ಮುಟ್ಟಿ ಮಹೇಶ ನಿಮ್ಮನೋಲಿದರ್ಚ್ಚಿಸಲೊಲ್ಲದೆ ಕೆಟ್ಟೆ ಕೆಟ್ಟೆ ನಾಂ
ಒಟ್ಟೆಯ ಕಾಣದೆ ಬಾಯ ಬಿಡುತ್ತೈದನೆ ಚಿತ್ತವಿಕಾರ ದೇಳ್ಗೆಯಂ
ಮಟ್ಟೆ ಕೆಲಕ್ಕೆ ಜಾರಿಸಿ ನಿಂಮ ನಿಜಾಂಘ್ರಿಯ ತೋರಿಸು ತಂದೆ ಶಂಕರಾ ॥
ರಗಳೆ ॥ ಶ್ರೀದಿಜರಾಜ ಪೂಜಿತ ಮನೋನಾಥ
ಮೂದೇವ ಮುಖವ ನಿಜಭಾನು. ಶಂಕರಲಿಂಗ ॥ ೧ ॥

**ಅಂತ್ಯ :** ಮಾನಿ ಶಂಕರಲಿಂಗ ಮಹಿಮಶಂಕರಲಿಂಗಾ
ಶರಣು ಶಂಕರಾಲಿಂಗಾ...ಂಕ ಲಿಂಗ
ಶರಣು ಶಂಕರಲಿಂಗಾ...ಶರಣಾರ್ತ್ತ ಶಂಕರಲಿಂಗಾ ॥

ಕಂದ॥ ಜನನ ಕಾಲದೊಳೊಂದಿಸಿ
ಘನ ಯಂವ್ವನದೊಳೊಂದಿ...

ಮಂಗೆ ನಾಂ ಮುಪ್ಪಿನಲ್ಲಿ ಮಂದಿಸಿ ನೀನದ
ಮನಸಿಗೆ ತಾರದಿರು ಶಂಕರಲಿಂಗಾ ॥
ಮನೋವಿಕಾರ ನಿರಸನ ರಗಳೆ ಸಮಾಪ್ತ ಮಂಗಳ ಮಹಾ ಶ್ರೀ.

ವಿಷಯ : ಮನಸ್ಸಿನ ವಿಕಾರಗಳಿಂದ ಮುಕ್ತನಾಗುವ ವಿವರ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ, ಷಡಕ್ಷರಿ ರಗಳೆ, ಶಂಕರದೇವರ ಕಂದ ಇತ್ಯಾದಿ ಒಟ್ಟು ೧೧ ಕೃತಿಗಳಿವೆ.

—ಕೆಆರ್‌ಎಸ್

## 387

| ಕೆ. ೧೩೭೬/೧೦ | ಮನೋವಿಕಾರ ನಿರಸನ ರಗಳೆ | ರಗಳೆ |
|---|---|---|
| ೨.೧"×೮.೮" | ಶಂಕರದೇವ | ಸು. ೧೬೦೦ |
| ೨೩–೨೮ ಪತ್ರ | ೧೦ ಪಂಕ್ತಿ | ೩೮ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮನೋವಿಕಾರ ರಗಳೆ ॥ ವೃತ್ತ
ದಿಟ್ಟಮನಂ ಕನಿಷ್ಟ ಕಪಿಚೇಷ್ಟೆಯೊಳಿರ್ದಪುದಲ್ಲದೊಮ್ಮೆಯಂ
ಮುಟ್ಟಿ ಮಹೇಶ ನಿಮ್ಮನೊಲಿದರ್ಚಿಸಲೊಲ್ಲದೆ ಕೆಟ್ಟೆ ಕೆಟ್ಟೆ ನಾಂ
ಬಟ್ಟೆಯ ಕಾಣದೆ ಬಾಯಬಿಡುತ್ತೈದೇನೆ ಚಿತ್ತವಿಕಾರದೇಳ್ಗೆಯಂ
ಮೆಟ್ಟಿ ಕೆಲಕ್ಕೆ ಜಾಱಿಸಿ ನಿಮ್ಮ ನಿಜಾಂಘ್ರಿಯಂ ತೋಱಿಸ ತಂದೆ ಶಂಕರಾ ॥
ರಗಳೆ ॥ ಶ್ರೀ ದಿವಿಜ ರಾಜಪೂಜಿತ ಜಿತ ಮನೋನಾಥ
ಮೂದೇವ ಮುಖವನಜಭಾನು ಶಂಕರಲಿಂಗಾ ॥ ೧ ॥

ಅಂತ್ಯ : ದಾನಿ ಶಂಕರಲಿಂಗ ಧರ್ಮಿ ಶಂಕರಲಿಂಗ
ಮಾನಿ ಶಂಕರಲಿಂಗ ಮಹಿಮ ಶಂಕರಲಿಂಗ
ಕರುಣಿ ಶಂಕರಲಿಂಗ ಶರಣು ಶಂಕರಲಿಂಗ
ಶರಣು ಶಂಕರಲಿಂಗ ಶರಣಾರ್ತಿ ಶರಣಾರ್ತಿ ಶಂಕರಲಿಂಗ ॥
ಕಂದ ॥ ಜನನ ಕಾಲದೊಳೊಂದಿಸೆ
ಘನಯವ್ವನದೊಳೊಂದಿಸೆ ನಿಮಗೆ ನಾಂ ಮು
ಪ್ಪಿನಲಿ ಮಂದಿಸುವೆ ನೀನಿದ
ಮನಸಿಗೆ ತಾರದಿರು ತಂದೆ ಶಂಕರಲಿಂಗ ॥
ಮನವಿಕಾರ ರಗಳೆ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

ವಿಷಯ : ಮನಸ್ಸಿನ ವಿಕಾರಗಳಿಂದ ಮುಕ್ತನಾಗುವುದು.

ವಿಶೇಷ : ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೨ ರಗಳೆಗಳು, ಗಣನಾಮ

ಸ್ತೋತ್ರದ ತ್ರಿವಿಧಿ ಮೊದಲಾದ ೭ ತ್ರಿವಿಧಿಗಳು ಮತ್ತು ಶೀಲವಂತಯ್ಯನ ಆತ್ಮಲಿಂಗ ಸಂಯೋಗ ಸ್ಥಲವಿದೆ.

—ಜಿಜಿಎಂ

## 388

| ಕ. ೧೪೦೩/೯ | ಮನೋವಿಕಾರ ನಿರಸನ ರಗಳೆ | ರಗಳೆ |
|---|---|---|
| ೮.೭''×೧.೩'' | ಶಂಕರದೇವ | ಸು. ೧೬೦೦ |
| ೭೩–೭೯ ಪತ್ರ | ೫ ಪಂಕ್ತಿ | ೨೫ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯನಮಃ ॥ ಮನೋವಿಕಾರ ನಿರಸನ ರಗಳೆ

ವೃತ್ತ ॥ ದಿಷ್ಟಮನಂ ಕನಿಷ್ಟ ಕಪಿಚೇಷ್ಟೆಯೊಳಿರ್ದಪುದಲ್ಲದೊಂಮೆಯುಂ
ಮುಟ್ಟಿ ಮಹೇಶಾ ನಿಂಮನೊಲಿದರ್ಚಿಸುತೊಲ್ಲದ ಕೆಟ್ಟೆ ಕೆಟ್ಟೆ ನಾಂ
ಬಟ್ಟೆಯ ಕಾಣದೆ ಬಾಯಿಬಿಡುತ್ತೈದೆನೆ ಚಿತ್ತವಿಕಾರದೆ ಗೆಳೆಯಂ
ಮೆಟ್ಟಿ ಕೆಲಕ್ಕೆ ಜಾರಿಸಿ ನಿಮ್ಮ ನಿಜಾಂಘ್ರಿಯ ತೋರಿಸಿ ತಂದೆ ಶಂಕರಾ ॥೧॥
ರಗಳೆ ॥ ಶ್ರೀದಿವಿಜರಾಜ ಪೂಜಿತ ಜಿತಮನೋನಾಥಾ
ಮಾದೇವ ಮುಖವನಿಜ ಭಾನುಶಂಕರಲಿಂಗಾ ॥ ೧ ॥

**ಅಂತ್ಯ :** ಕಂದ ॥
ಜನನಕಾಲದೊಳವಂದಿಸೆ
ಘನ ಯೌವನದೊಳೊಂದಿಸೆ ನಿಮಗೆ ನಾಂ ಮು
ಪ್ಪಿನಲಿವ್ರೊಂದಿಸುವೆ ನಾಂ
ಮನಸಿಗೆ ತಾರದಿರು ತಂದೆ ಶಂಕರಲಿಂಗಾ ॥ ೧ ॥
ಮನೋವಿಕಾರ ನಿರಸನ ರಗಳೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಮಾನಸಿಕ ವಿಕಾರಗಳನ್ನು ನಿವಾರಿಸುವ ವಿಚಾರ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೦ ಕೃತಿಗಳಿವೆ.

—ಜಜಿಎಂ

## 389

| ಕ. ೭೭೫ ಬಿ/೭ | ಮನೋವಿಜಯ ಕಾವ್ಯ | ಕುಸುಮ ಷಟ್ಪದಿ |
|---|---|---|
| ೯.೫''×೨'' | ಗುರುಬಸವ | ಸು. ೧೪೩೦ |
| ೭೫–೮೭ ಪತ್ರ | ೦೨ ಪಂಕ್ತಿ | ೪೦ ಅಕ್ಷರ |

**ಆದಿ :** ಪಲ್ಲ ॥ ವಸೆದು ಕರುಣಾಬ್ಧಿ ಗುರು
ಬಸವೇಶ ಮುದದಿ ಬೋ
ಧಿಸಿದನು ವಿವೇಕಗೆ ಮನೋವಿಜಯಮಂ ।

ಅಂತ್ಯ : ಕುಸುಮ ಷಟ್ಪದಿ ಪದ
ಪ್ರಸರ ಮುನ್ನೂರು ಪೇ
ಳೆಸೆವವ್ವೈವತ್ತ್ಯೆದನ ಧ್ಯಾತೃದಾ ।
ದೆಸೆಗೊರೆದೆ ಭದ್ರಗುರು
ಬಸವನಾಗ್ನೆಗೊಳೆ ಭಾ
ವಿಸಲಹುದು ಚಂದ್ರಾರ್ಕರುಳ್ಳನ್ನೆಗಂ ॥ ೨೯ ॥
ಯಿತೀ ಪರಿಪೂರ್ಣ ನಿರೂಪಣಂ ಸಮಾಪ್ತ : ಶ್ರೀ ಶ್ರೀ ಅಂತು ಪ್ರಕರಣ ೯ಕಂ ಪದನು ೧೫೫೨ಕಂ ಮಂಗಳ ಮಹಾ ಶ್ರೀ

ವಿಷಯ : ಅಧ್ಯಾತ್ಮಬೋಧೆ.

ವಿಶೇಷ : 85 ಮತ್ತು 86ನೆಯ ಓಲೆಗಳಿಲ್ಲವಾದ್ದರಿಂದ ಗ್ರಂಥ ಅಪೂರ್ಣವಾಗಿದೆ. 9 ಪ್ರಕರಣಗಳನ್ನುಳ್ಳ ಈ ಗ್ರಂಥದ ಕೊನೆಯಲ್ಲಿ ಸಪ್ತಕಾವ್ಯಗಳ ಒಟ್ಟು ಪದಸಂಖ್ಯೆ ೧೨೫೨ ಎಂಬುದಾಗಿ ತಿಳಿಸಲಾಗಿದೆ. ಇದರೊಡನೆ ಅವಧೂತ ಗೀತೆ, ಯೋಗಾಂಗ ವಿಭೂಷಣ–ಮೊದಲಾದ ಇತರ ಆರು ಗ್ರಂಥಗಳಿವೆ. ಬಿಡಿಸಿಯ ಪತ್ರವು ಷಟ್ಸ್ಥಲ ತಿಲಕ ಗ್ರಂಥದ ಮೊದಲ ಓಲೆಯಾಗಿದೆ.

—ಶ್ರೀನಂತ

## 390

| ಕೆ. ೯೮೯/೮ | ಮನೋವಿಜಯು ಕಾವ್ಯ | ಕುಸುಮ ಷಟ್ಪದಿ |
|---|---|---|
| ೧೦.೪''×೨.೩'' | ಗುರುಬಸವ | ಸು. ೧೮೩೦ |
| ೧೬೧–೧೮೫ ಪತ್ರ | ೧೩ ಪಂಕ್ತಿ | ೬೬ ಅಕ್ಷರ |

ಆದಿ : ಮನೋವಿಜಯು ಕಾವ್ಯ ॥ ಕುಸುಮ ಷಟ್ಪದ ॥

ಪಲ್ಲ ॥ ವಸದಂ ಕರುಣಾಬ್ಧಿ ಗುರು
ಬಸವೇಶ ಮುದದೆ ಬೋ
ಧಿಸಿದ ಸುವಿವೇಕ ಮನೋವಿಜಯುಮಂ ॥

ಪದ ॥ ಶ್ರೀಮುದಮಲಾತ್ಮಾಭಿ
ರಾಮುನಾನಂದಾಬ್ಧಿ
ಸೋಮ ಸದಮಲ ಭಾವಭರಿತಗೆಂ ನಾ
ಸ್ವಾಮಿಂ ಸದ್ಭಕ್ತ ಸು
ಪ್ರೇಮಿ ರಕ್ಷೆ ಮುದದೊ
ಳೀ ಮಹಾ ಭದ್ರ ಗುರುಬಸವಲಿಂಗಾ ॥ ೧ ॥

ಅಂತ್ಯ : ಕುಸುಮ ಷಟ್ಪದಿ ಪದ
ಪ್ರಸರಮುಂ ಸೂಜಿವೇ
ಲೆಸೆವವೈವತ್ತೈದನಧ್ಯಾತ್ಮದಾ
ದೆಸೆಗೊರೆದೆ ಭದ್ರ ಗುರು
ಬಸವನಾಗ್ನೆಯೊಳೆ ಭಾ
ವಿಸಲಹುದು ಚಂದ್ರಾರ್ಕತಾರಂಬ್ಳಂನೆಗಂ ॥ ೨೯ ॥
ಯಿತಿ ಪರಿನ್ನರ ಸಿರೂಪಣಂ ಸಮಾಪ್ತಂ ॥ ಅಂತು ಪ್ರಕರಣ ೯ಕ್ಕಂ ಪದನು ೩೫೫ಕ್ಕಂ ಮಂಗಳ ಮಹಾ ಶ್ರೀ
ಅಂತು ಸಪ್ತಕಾವ್ಯ ೭ಕ್ಕಂ ಪದನು ೧೨೫೨ಕ್ಕಂ ಮಂಗಳ ಮಹಾ ಶ್ರೀ.

ವಿಷಯ : ಅಧ್ಯಾತ್ಮ ಬೋಧೆ.

ವಿಶೇಷ : ಸಮಗ್ರ. ಶಕಟರೇಫವನ್ನು ಬಳಸಿದೆ. ಇದೇ ಕಟ್ಟಿನಲ್ಲಿ ಪದ್ಮರಾಜ ಪುರಾಣ. ಶಿವಯೋಗಾಂಗ ವಿಭೂಷಣಾದಿ ಸಪ್ತಕಾವ್ಯಗಳು, ಭಿಕ್ಷಾಟನ ಚರಿತೆ ಎಂಬ ಕಾವ್ಯಗಳೂ ಇವೆ.
[ಕ.ಹ.ಪ್ರ.ವ.ಸೂ. ತೃತೀಯ ಸಂಪುಟ. ಪುಟ ೨೮೩–೨೮೫ ಕ್ರಮಾಂಕ 1254–1255 ನೋಡಿ]

—ಕೆಆರ್ ಎಸ್

## 391

ಕೆ. ೧೧೧೩/೭ ಮನೋವಿಜಯ ಕಾವ್ಯ ಕುಸುಮ ಷಟ್ಪದಿ
೧೧.೨" × ೧.೧೧" ಗುರುಬಸವ ಸು. ೧೮೩೦
೫೭–೭೫ ಪತ್ರ ೧೦ ಪಂಕ್ತಿ ೭೫ ಅಕ್ಷರ

ಆದಿ : ಶ್ರೀ ಗುರುಬಸವವಲಿಂಗವ ನಮಃ । ಮನೋವಿಜಯ । ಕುಸುಮ ಷಟ್ಪದಿ

ಪಲ್ಲವ ॥ ಪೊಸದು ಗುರುಕರುಣಾಬ್ಧಿ
ಬಸವೇಶ ಮುದದಿ ಬೋ
ಧಿಸಿದ ಸುವಿವೇಕಗೆ ಮನೋವಿಜಯಮಂ ॥

ಪದ ॥ ಶ್ರೀಮದಮಲಾತ್ಮಾಭಿ
ರಾಮನಾನಂದಾಬ್ಧಿ
ಸೋಮ ಸದಮಲಭಾವ ಭರಿತನೆಂಸ್ಸಾ
ಸ್ವಾಮಿ ಸದ್ಭಕ್ತಾ ಸು
ಪ್ರೇಮಿ ರಕ್ಷಿಸು ಮುದದೊ
ಳೀ ಮಹಾಭದ್ರ ಗುರುಬಸವಲಿಂಗಾ ॥ ೧ ॥

ಅಂತ್ಯ : ಕುಸುಮಷಟ್ಪದಿ ಪದ
ಪ್ರಸರ ಮೆಂನೂಱುಱಿಂ
ದೆಸವಿವೈತ್ತಯಿದನದ್ಯಾತ್ಮದಾ
ದೆಸೆಗೊರದೆ ಭದ್ರಗುರು
ಬಸವನಾಗ್ನೆಯೊಳೆ ಭೂ
ವಿಸಲಹುದು ಚಂದ್ರಾರ್ಕತಾರಾಂಬರಂ ॥ ೨೯ ॥
ಅಂತು ನವಮೋಪದೇಶ ಮನೋವಿಜಯ ಪದನು ೩೫೫ಕ್ಕಂ ಸಂಪೂರ್ನ್ನಂ

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಸಮಗ್ರ. ಶಕಟರೇಫ ಇದೆ. ಇದೇ ಕೃತಿಯ ಇತರ ಪ್ರತಿಗಳಿಗೆ ಕ. ಹ. ವ. ಸೂಚಿಯ ೩ನೆಯ ಸಂಪುಟ ನೋಡಿ. ಇದೇ ಕಟ್ಟಿನಲ್ಲಿ ಶಿವಯೋಗಾಂಗ ವಿಭೂಷಣ, ಅವಧೂತ ಗೀತೆ ಮೊದಲಾದ ಇತರ ಏಳು ಕೃತಿಗಳಿವೆ.

—ಬಿಎಸ್‌ಎಸ್

## 392

| ಕ. ೧೦೪೦/೭ | ಮನೋವಿಜಯ ಕಾವ್ಯ | ಕುಸುಮ ಷಟ್ಪದಿ |
|---|---|---|
| ೫.೨″ × ೧.೬″ | ಗುರುಬಸವ | ಸು. ೧೪೩೦ |
| ೧೩೭–೧೭೬ ಪತ್ರ | ೧೦ ಪಂಕ್ತಿ | ೩೨ ಅಕ್ಷರ |

ಆದಿ : ಮನೋ ವಿಜಯ ಕಾವ್ಯ ॥ ರಾಗ ॥ ಕುಸುಮ ಷಟ್ಪದಿ
......ಣಾಬ್ಧಿ ಗುರು
ಬಸವೇಶ ಮುದದೆ ಬೋ
ಧಿಸಿದ ಸುವಿವೇಕಗೆ ಮ......

ಪದ ॥ ಶ್ರೀಮದಮಲಾತ್ಮಾಭಿ
ರಾಮನಾನಂದಾಬ್ಧಿ
ಸೋಮ ಸದಮಲ......ವ ಭರಿತನೆಂನ್ನಾ
ಸ್ವಾಮಿ ಸದ್ಭಕ್ತ ಸು
ಪ್ರೇಮ ರಕ್ಷಿಸಂ ಮುದದೊ
ಳೀ ಮಹಾಭದ್ರ ಗುರು ಬಸವಲಿಂಗಾ ॥ ೧ ॥

ಅಂತ್ಯ : ಯಿದು ಮನೋವಿಜಯಮೆಂ
ಬುದಂ ನಾಮವಱಿವ ಸಂ
ವಿದಿರಗಾನಂದ ಸಂದೋಹವಿತ್ತೂ

ವಂದವನೊದವಿಸಿ ಮುಕ್ತಿ
ಪದವೀವುದೇಂ ನೀ
ಡಿದೆ ಕೈಯ್ಯ ನಂಬಿ ಸತ್ಶ್ಲೋಕ್ತಿ .. ೨೪

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಶಕಟರೇಫವಿದೆ. ಗ್ರಂಥವು ೯ನೆಯ ಪ್ರಕರಣ ೨೪ನೆಯ ಪದ್ಯದವರೆಗಿದ್ದು ಮುಂದೆ ಬರುವ ೫ ಪದ್ಯಗಳು ಲುಪ್ತವಾಗಿವೆ. ಇದೇ ಕಟ್ಟಿನಲ್ಲಿ ಶಿವ ಯೋಗಾಂಗ ವಿಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ಸ್ವರೂಪಾ ಮೃತ, ವೃಷಭಗೀತೆ, ಅವಧೂತಗೀತೆ ಎಂಬೀ ಗ್ರಂಥಗಳಿವೆ.
[ಕ. ಹ. ಪ್ರ. ವ. ಸೂ. ತೃತೀಯ ಸಂಪುಟ ಪುಟ ೨೪೩–೨೪೭ ಕ್ರಮಾಂಕ 1254–1257 ನೋಡಿ]

—ಕೆಆರ್‌ಎಸ್

## 393

ಕೆ. ೧೧೦೩/೧೨ | ಮನೋವಿಜಯ ಕಾವ್ಯ | ಕುಸುಮ ಷಟ್ಪದಿ
೧೪.೨″ × ೨.೨″ | ಗುರುಬಸವ | ಸು. ೧೪೩೦
೧೯೦–೨೦೦ ಪತ್ರ | ೧೩ ಪಂಕ್ತಿ | ೯೫ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಕುಸುಮ ಷಟ್ಪದಿ ॥ ಪಲ್ಲ ॥
ವೊಸೆದು ಕರುಣಾಬ್ಧಿ ಗುರು
ಬಸವೇಶವಂದದೆ ಬೋ
ಧಿಸಿದ ಸುವಿವೇಕಗೆ ಮನೋವಿಜಯಮಂ ॥
ಪದ ॥ ಶ್ರೀಮದಮಲಾತ್ಮಾಭಿ
ರಾಮಾನಾನಂದಾಬ್ಧಿ
ಸೋಮಸದಮಲ ಭಾವಭರಿತನೆನ್ನ
ಸ್ವಾಮಿ ಸದ್ಭಕ್ತಾ ಸು
ಪ್ರೇಮಿ ರಕ್ಷಿಸು ಮುಂದದೊ
ಲೀ ಮಹಾಭದ್ರ ಗುರು ಬಸವಲಿಂಗಾ ॥ ೧ ॥

ಅಂತ್ಯ : ಕುಸುಮ ಷಟ್ಪದೀ ಪದ
ಪ್ರಸರವಮಂನ್ನೂಱಱಿಂ
ದೆಸವಿವೃತ್ತಯಿದನರ್ಥ್ಯಾತ್ಮದಾ
ದೆಸೆಗೊರೆದೆ ಭದ್ರ ಗುರು
ಬಸವನಾಗ್ನೆಯೊಳೆ ಭಾ
ವಿಸಬಹುದಾ ಚಂದ್ರಾರ್ಕ ತಾರಾಂಬರಂ ॥ ೨೯ ॥

ಅಂತು ನವಮೋಪದೇಶ ಮನೋವಿಜಯುಕ್ಕಂ ಪದನುಂ ಕ್ಯಂ೫೫ ಸಂಪೂರ್ನ ಶ್ರೀ ಶ್ರೀ ಅಂತು ಸಪ್ತಕಾವ್ಯಕ್ಕಂ ಪದನೂ ೧೫೫೭ಕ್ಕಂ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಇದರ ಜೊತೆಯಲ್ಲಿ ಬಸವೇಶ್ವರ ಪುರಾಣದ ಕಥಾಸಾಗರ, ಭೈರವೇಶ್ವರ ಪುರಾಣದ ಕಥೆಗಳು, ಬಸವಪುರಾಣ ಮತ್ತು ಭೈರವೇಶ್ವರ ಪುರಾಣದ ಕಥೆಗಳಿಗೆ ಸಂಸ್ಕೃತ ಆಧಾರ ಮತ್ತು ಸಪ್ತಕಾವ್ಯದ ಗುರುಬಸವನ ಕೃತಿಗಳಿವೆ

—ಜಿಜಿಬಿ

## 394

| ಕೆ. ೧೩೭೨/೭ | ಮನೋವಿಜಯ ಕಾವ್ಯ | ಕುಸುಮಷಟ್ಪದಿ |
|---|---|---|
| ೯'' × ೨'' | ಗುರುಬಸವ | ಸು. ೧೮೩೦ |
| ೭೮–೮೩ ಪತ್ರ | ೧೦ ಪಂಕ್ತಿ | ೫೨ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯೇ ನಮಃ ॥ ಮನೋವಿಜಯದ ಕಾವ್ಯ ।
ಕುಸುಮ ಷಟ್ಪದಿ ॥
ಪಸೆದು ಕರುಣಾಬ್ಧಿ ಗುರು
ಬಸವೇಶ ಮುದದಿ ಜೋ
ಧಿಸಿದ ಸುವಿವೇಕಿಗೆ ಮನೋವಿಜಯುವು ॥

ಪದನು ॥ ಶ್ರೀಮದಮಲಾತ್ಮಾಭಿ
ರಾಮನಾನಂದಾಬ್ಧಿ
ಸೋಮ ಸದಮಲ ಭಾವಭರಿತನೆಂನಾ
ಸ್ವಾಮಿ ಸದ್ಭಕ್ತನು
ಪ್ರೇಮ ರಕ್ಷಿಸು ಮುದದೊ
ಳೆ ಮಹಾ ಭದ್ರ ಗುರುಬಸವಲಿಂಗಾ ॥ ೧ ॥

ಅಂತ್ಯ : ಕುಸುಮಷಟ್ಪದಿ ಪದ ॥
ಪ್ರಸರ ಮುಂನೂರು ವೇ
ಲೆಸೆವಪಯ್ವತ್ತಯ್ದುನಧ್ಯಾತ್ಮದಾ
ದೆಸೆಗೊರೆವೆ ಭದ್ರಗುರು
ಬಸವನಾಜ್ಞೆಯೊಳೆ ಭಾ
ವಿಸಲಹುದು ಚಂದ್ರಾರ್ಕರುಳ್ಳಂನೆಗಂ ॥ ೨೯ ॥

ಯಿತಿ ಪರಿಪೂರ್ಣ ನಿರೂಪಣಂ ಸಮಾಪ್ತಃ ॥
ಅಂತು ಪ್ರಕರಣ ೯ಕ್ಕಂ ಪದನೂ ೩೫೫ಕ್ಕಂ ಮಂಗಳ ಮಹಾಶ್ರೀ ಶ್ರೀ ॥
ಪ್ರಮಾದೀಚ ಸಂವತ್ಸರದ ಚೈತ್ರ ಶುದ್ಧ ೧೦ಯು ಗುರುವಾರದಲ್ಲಿ ।
ಷಟ್ಕಾವ್ಯ ಪ್ರಕರಣ ಸಮಾಪ್ತಃ ॥ ಶ್ರೀ ಗುರುಬಸವಲ್ಲಿಂಗಾಯೇನಮಃ ॥
ಶ್ರೀ ಚಿದಾನಂದ ಗುರುವೇ ನಮಃ ॥ ಶ್ರೀ ॥

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಕೃತಿ ಸಮಗ್ರ. ಇದು ಗುರುಬಸವೇಶ್ವರನ ಷಟ್ಕಾವ್ಯಗಳಲ್ಲಿ ಒಂದು. ಇದರ ಜತೆಯಲ್ಲಿ 'ಸದ್ಗುರು ರಹಸ್ಯ' ಮೊದಲಾದ ೬ ಕೃತಿಗಳಿವೆ. ಬರವಣಿಗೆ ಸುಂದರವಾಗಿದೆ.

—ಎಂಜಿಎಂ

## 395

| ಕೆ. ೧೧೮೦/೧ | ಮನೋವಿಜಯ ವ್ಯಾಖ್ಯಾನ | ಹಾಡು, ಟೀಕು |
|---|---|---|
| ೧೩.೮'' × ೧.೨'' | ತೋಂಟದ ಸಿದ್ಧಲಿಂಗ ದೇಶಿಕ | ಸು. ೧೫೬೦ |
| ೧–೩೭ ಪತ್ರ | ೧೨ ಪಂಕ್ತಿ | ೮೧ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮನೋವಿಜಯ ವ್ಯಾಖ್ಯಾನೇ ಪೂಜ್ಯತೆ ॥ ಆಯುರಾರೋಗ್ಯ ಐಶ್ವರ್ಯಮಸ್ತು ಶುಭಮಸ್ತು ॥

ಕಂ ॥ ಶ್ರೀ ವರವಕರ ಮಹೇಶ್ವರ
ಪಾವನಕರ ಚಿತ್ಸ್ವರೂಪ ಸಂನುತ ಜನ ಸಂ
ಜೀವದಯಾಮೃತಸಿಂಧು ನಿ
ರಾವಣನೆ ಸಲಹು ಗುರು ನಿರಂಜನಲಿಂಗಂ ॥ ೧ ॥

× × ×

ಗದ್ಯ ॥ ಶ್ರೀಮತ್ಪರಮಾನಂದ ನಿತ್ಯ ನಿರ್ಮಲ × × × ನಿರೂಪಿಸಿದ ಮನೋವಿಜಯ ಪ್ರಕರಣಮುಂ ವೈರಿನೃಪ ಮದಪ್ಪಿರದ ಮೃಣಾಧಿಪನಸಹಾಯ ಶೂರ ಚರಲಿಂಗ ಪಾದಸೇವನಾತತ್ಪರ ಬಿಜ್ಜವರಪುರವರಾಧಿಪ ತೋಂಟದ ಸಿದ್ಧಲಿಂಗ ಭೂಪಾಲಕನಿಂ ಪರಿಪೂಜಿತನಾದ × × × ತೋಂಟದ ಸಿದ್ಧಲಿಂಗದೇವನೆ ನಾಂ ಸರ್ವರಿಗರಿಯಬಪ್ಪಂತೆ ವ್ಯಾಖ್ಯಾನಮಂ ಮಾಡಿದಪೆಂ॥

ಅಂತ್ಯ : ಯಿದು ಸಕಲ ಮುನಿಜನ ನತ ನಿರಂಜನ ಲಿಂಗ ಚರಣಾರವಿಂದಮಂದ ಮಕರಂದ ಬಿಂದು ಸಂದೋಹ ನಿಷ್ಯಂದಾನಂದಿತ ಮಧುಕರಾಯಮಾಣ ಶ್ರೀ ವೀರಶೈವ ಷಟ್ಸ್ಥಲ ಜ್ಞಾನಸುಧಾಸ್ವಾದನಾಸಕ್ತ ಚಿತ್ತ ನಾಗಭೂಪಾಲಕನಿಂ ಪರಿಪೂಜಿತನಾದ ತೋಂಟದ ಸಿದ್ಧಲಿಂಗದೇಶಿಕನಿಂ ವಿರಚಿತಮಪ್ಪ

ಮನೋವಿಜಯದ ತಾತ್ಪರ್ಯಚಂದ್ರಿಕೆಯೆಂಬ ವ್ಯಾಖ್ಯಾನದೊಳ್ಪೂರ್ಣತ್ವ ನಿರೂಪಣ ನಾಮ ನವಮ ಪ್ರಕರಣಂ ಸಂಪೂರ್ಣ ॥ ಅಂತು ಪ್ರಕರಣಂಗಳು ೯ಕ್ಕಂ ಪದ ೩೫೫ಕ್ಕಂ ಮಂಗಳಮಸ್ತು ಮಹಾಶ್ರೀ ॥

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಸ್ಫುಟಾಕ್ಷರ. ಇದೇ ಕಟ್ಟಿನಲ್ಲಿ ಅದ್ವೈತಖಂಡ ಮತ್ತು ಕರಣಹಸಿಗೆ ಎಂಬ ಕೃತಿಗಳಿವೆ.

—ವೈಸಿಬಿ

## 396

| ಕ. ೭೪೩ | **ಮನ್ಮಥ ಚರಿತ** | ಸಾಂಗತ್ಯ |
|---|---|---|
| ೧೬″ × ೧.೬″ | ರಾಮಚಂದ್ರ | ? |
| ೨–೬೧ ಪತ್ರ | ೧೦ ಪಂಕ್ತಿ | ೪೮ ಅಕ್ಷರ |

ಆದಿ : ......ರಾಲಿಸಿ ಕರ್ನಾಮೃತವಾ ॥ ೩೦ ॥
ರಸಕಾವ್ಯದೊಳೂಸರುವ ಸೊಬಗಿನ ಸೋನೆ
ಯೆಸೆವ ಕರ್ನಾಟಕ ಬಾಶೆ
ಪಸದು ಕೇಳುವ ಸುಜನರಿಗೆ ದವರ್ನಾಮೃತ
ಕುಸುಮಬಾಣನ ಚರಿತೆಯೊಳೂ ॥ ೩೧ ॥
ಚದುರ ಜನರು ಕೇಳಿ ಮದನಚರಿತೆಯೊಳು
ವೊದವಿದ ಮೃದು ವಚನಗಳಾ
ಮುದದಿಂದಲಿ ಪೇಳುವೆ ರಸದಾಳಿಯು
ತಂದಿ ಪೊದಲಿಗೆ ಸವಿದಂತೆ ॥ ೩೨ ॥
ಅವನಿಯೊಳನವರತದೊಳು ಪೂರ್ವರು ಗುಂದಿ
ನವಕೋಟಿಜಿನಮುನಿಗಳನು
ವಿವಿದ ಶಥದಲಿ ಕೊಂಡಾಡಿ ಮನ್ಮಥನ ಕಾ
ವ್ಯವ ಪೇಳ್ವೆ ಕೇಳಿ ಜನರು ॥ ೩೩ ॥ ಆ ಕಥೆಯೆಂತೆಂದೊಡೆ
× × × × × ×
ಚದುರಿನ ಚಾವಡಿ ಹದುರಿನಾಲಯು
ವೊದವಿದ ಸೊಬಗಿನ ಜಲ್ಮಭೂಮಿ
ಮೃದುನುಡಿಗಳ ನೃತ್ಯಶಾಲೆ ಸಂಗೀತದ
ಸದನ ರಾಮನ ಮೃದುವಚನಾ ॥ ೧೩೨ ॥
ತಂದಿ ಪೊದಲಾಗಿ ಸವಿದ ಕಬ್ಬು ದ್ರಾಕ್ಷೆಯು
ಮೃದುವರ್ಣಾ ಅಮೃತ ಸಂಜೀವಾ ।

ಕದಳಿ ಖರ್ಜೂರ ಸದ್ಯಘೃತ ಸಖರೆಯಾ ರಾಸಿ
ಯೊದವು ರಾಮನ ಮೃದು ವಚನಾ ॥ ೧೩೩ ॥
ಯೆಂದು ಬಿಂನಯಿಸಿ ಜಿನೇಂದ್ರನ ಮಥದೊಳಂ
ಸಂದ ಕಾರುಂಣ್ಯಪುರುಷರಾ
ಅಂದವ ಕೇಳ್ದ ಶ್ರೇಣಿಕನ ಚರಿತದ
ಸಂದಿ ೧ಕ್ಕೆ ಮಂಗಲ ಮಹಾಶ್ರೀ ॥ ಅಂತು ಸಂದಿ ೧ಕ್ಕೆ ಪದನು ೧೩೪ಕ್ಕಂ
ಮಂಗಳ ಮಹಾಶ್ರೀ

× × × × × ×

ಯೆಂದು ಗವುತಮ ಗಣಧರ ಪೇಳೆ ಕೇಳ್ದತ್ರಿ
ಯಿಂದ ಶ್ರೇಣಿಕ ಮಹಾರಾಯ
ಸಂದ ಸಂತೋಷಸುಧಾಕಡಲೊಳಗರ್ತಿ
ಯಿಂದಲೋಲಾಡುತಲಿರ್ದಾ ॥ ೧೦೭ ॥
ಕವಿಜನರ್ಗಿದು ಕರ್ನಾಮೃತ ಸುಜನರ್ಕ
ಳ್ಕಿವಿಗೆ ರಸಾಯನದಿರ್ತಕಾ
ನವಮ ವುಕ್ತಿದ ಪೊಹಣ ರಾಮಚಂದ್ರನ
ಕವಿತೆಯ ಕೇಳಿ ಬಲ್ಲವರೂ ॥ ೧೦೮ ॥
ಯೆಂದು ಬಿಂನೈಸಿ ಜಿನೇಂದ್ರನ ಮಥದೊಳೂ
ಸಂದ ಕಾರುಂಣ್ಯಪುರುಷರಾ
ಅಂದವ ಕೇಳ್ದ ಮನ್ಮಥನ ಸುಕಾವ್ಯದ
ಸಂದಿತ್ರಯಕ್ಕೆ ಮಂಗಲ ಮಹಾಶ್ರೀ ೧೧೯. ಅಂತು ಸಂದಿ ೩ಕ್ಕಂ ಪದನು
೬೫೭ಕ್ಕೆ ಮಂಗಲ ಮಹಾಶ್ರೀ

ಅಂತ್ಯ : ಕಟ್ಟುವೊಡೆದು ಕರುಣಿಸಿ ನಂಮಯಿಬ್ಬರ
ಬಿಟ್ಟನಯ್ಯಗೆ ದೂರ್ರಿ ಬೇಗಾ
ಮುಟ್ಟಿಸಿ ಹಾನಿಯೆನಲು ಬಂದೆವಿದಕಿಂನು
ಬಟ್ಟೆಯಾವುದು ರಾಯ ಯೆನಲೂ
ಮುರಿದು ಮಿಾಸೆಯನುರಿವರಿದು ಪ್ರದಾ
ನರ ಕರಸಿಯಾ......

ವಿಷಯ : ಗೌತಮಗಣಧರರು ಶ್ರೇಣಿಕರಾಜನಿಗೆ ಹೇಳಿದ ಮನ್ಮಥನ ಕಥೆ.

ವಿಶೇಷ : ಕೃತಿ ಅಸಮಗ್ರ. ಆದ್ಯಂತಗಳಿಲ್ಲ. ೧ನೆಯ ಸಂಧಿ ೩೧ನೇ ಪದ್ಯದಿಂದ ೧೧ನೆಯ ಸಂಧಿ ೧೪೧ನೇ ಪದ್ಯಪೂರ್ತಿ ಗ್ರಂಥ ಇದೆ. ಉಳಿದ ಭಾಗ ಲುಪ್ತ. ೩೪ ಮತ್ತು ೩೫ನೇ ಗರಿಗಳಿಲ್ಲ. ೧೧ನೆಯ ಗರಿಯ ಒಂದು

ಪಾರ್ಶ್ವದಲ್ಲಿ ಮಂಟಪಾಕಾರದ ಚಿಕ್ಕ ಚಿತ್ರವಿದೆ. ಸ್ಫುಟಾಕ್ಷರ. ಕೆಲವು ಗರಿಗಳ ಅಂಚು ಮುರಿದು ಅಕ್ಷರಗಳು ತ್ರುಟಿತವಾಗಿವೆ. ಇದೇ ಕಟ್ಟಿನಲ್ಲಿ ಜಯನೃಪಚರಿತೆ ಎಂಬ ಕಾವ್ಯ ಇದೆ.

—ಎಸ್‌ಎನ್‌ಕೆ

## 397

| | | |
|---|---|---|
| ಕೆ. ಬಿ. ೭೨೯/೫ | ಮನ್ಮಥನು ಹುಟ್ಟಿದ ಪದ | ತ್ರಿಪದಿ |
| ೩.೭" × ೩" | ? | ? |
| ೪೫–೫೨ ಪತ್ರ | ೬ ಪಂಕ್ತಿ | ೧೬ ಅಕ್ಷರ |

ಆದಿ : ರಾಗ ಪಂತುವರಳಿ ॥
ಹಸ್ತಿಮುಖದಾತನಾ ಜೊಚ್ಚಲ ಕೊಮರನಾ
ಬುಚ್ಚಿರದಿಂದ ಬಲಗೊಂಡು ಮನ್ಮಥನು
ಹುಟ್ಟಿದಾ ಪದ ನಾ ರಚಿಸುವೆ ॥ ೧ ॥

ಅಂತ್ಯ : ನಿತ್ಯಾದಲಿ ಹೇಳುವದಕ್ಕೆ ಮತ್ಯಾರಿಗಳವಲ್ಲ
ಆದಿತ್ಯವಾರಾ ಪ್ರದೋಷಾದಿ ಉದಯಾದಿ ಹೇಳುವರು
ವಿಷ್ಣುಭಕ್ತಿಯು ಪಡೆವರು ॥ ೩೦ ಶ್ರೀ ಶ್ರೀ.

ವಿಷಯ : ಮನ್ಮಥನ ಜನನ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಶ್ರೀಕೃಷ್ಣೇಂದ್ರಗೀತೆ ಮೊದಲಾದ ೧೫ ಕೃತಿಗಳಿವೆ.

—ಜಿಜಿಎಂ

## 398

| | | |
|---|---|---|
| ಕೆ. ಬಿ. ೭೪೪ | ಮನ್ಮಥವಿಜಯ | ಚಂಪು |
| ೬" × ೪.೭" | ಕವಿಮಲ್ಲ | ಸು. ೧೪೮೦ |
| ೧-೧೦೭ ಪುಟ | ೧೮ ಪಂಕ್ತಿ | ೧೮ ಅಕ್ಷರ |

ಆದಿ : ಶ್ರೀ ॥ ಮನ್ಮಥ ವಿಜಯಮೆಂಬ ಕಾಮಶಾಸ್ತ್ರಂ ॥
ಶ್ರೀಮನ್ಮೋಹನ ಮಂತ್ರದೇವಿಯುರಿರಲ್ ಪಕ್ಕಂಗಳೊಳ್ ಚೈತ್ರಚೈ
ತ್ರ್ಯಾಮಾತ್ಯನ್ನಿರ್ಗಲೇಟಿಂದೆ ಮಂದಳಿಕುಲಂ ಸಂಗೀತಮಂ ಪಾಡೆ ಶೈ
ತ್ಯಾಮೋದಂ ಮೃದು ಯಾನದಿಂ ಮರುತ ನೋಲ್ದೈಸಲ್ಪ್ರಿಯಳ್ಗೊಡಿಯು
ದ್ಯಾಮಂ ವ್ಯಸ್ಮಿತನಾಗಿ ರಂಜಿಸುವ ಕಾಮಂ ಮಾಳ್ಕೆ ಮಾಂಗಲ್ಯಮಂ ॥ ೧॥

× × × ×

ವೃತ್ತ ॥ ಚತುರ ಬತುರ್ಮುಖಂ ಕೃತಕೃತಿ ಪ್ರಮುಖಂ ವರವೇದಶಾಸ್ತ್ರ ವಿ
ಶ್ರುತಮಂತಿ ಕಾಮತತ್ವ ಭರತಾಗಮಂ ಶಬ್ದ ವಿಚಾರ ಕಾವ್ಯ ಪ
ದ್ಧತಿ ರಸಭಾವ ರಾಗರಮಣೀಯಕರಂ ಕವಿ ಪುಟ್ಟಣಾಂಕ ಪಂ
ಡಿತನೆನಲಾತನಿಂದರಿವು ಪ್ರೋನ್ಮದಮಲ್ಲನದೇ ಕೃತಾರ್ಥನೋ ॥ ೧೧ ॥

**ಅಂತ್ಯ :** ಸ್ತ್ರೀಯುಂ ತಂನ ಮುಖ ಸ್ತನ ಯೆರಡು ಭುಜ ಕಾಲು ಸಹಾ ಭೂಮಿಯಲ್ಲಿ ಬೀಳುವ ಹಾಗೆ ಬಗ್ಗಿಸಿ ಆನೆಯಂತೆ ರಮಿಸಿದರೆ ಯಿಭಕರಣವೆಂದು ಹೆಸರು. ॥ ೨ ॥ ವಟ್ಟು ೩೦ ಬಂಧಗಳು ॥ ಇಂತೀ ಮನ್ಮಥವಿಜಯಂ ಸಂಪೂರ್ಣ ಶ್ರೀ.

**ವಿಷಯ :** ಕಾಮಶಾಸ್ತ್ರ.

**ವಿಶೇಷ :** ಸಮಗ್ರ. ಕಲ್ಲಚ್ಚಿನ ಪ್ರತಿ. ಸ್ಥಿತಿ ಚೆನ್ನಾಗಿದೆ.

—ಕೆಆರ್‌ಎಸ್

## 399

| ಕ. ೧೩೭೯/೨ | **ಮರಣಚಿಹ್ನೆ** | ಗದ್ಯ |
|---|---|---|
| ೧೨.೫"×೧.೭" | ? | ? |
| ೯೧ ನೆಯ ಪತ್ರ | ೭ ಪಂಕ್ತಿ | ೫೮ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯನಮಃ ॥ ಮರಣಚಿಹ್ನೆ
ನವಭ್ರೂ ಸಪ್ತ ಕರ್ಣೇಶು ಪಂಚನೇತ್ರಂ ತ್ರಿನಾಸಿಕಂ
ಯೇಕ ರಾತ್ರೇಣ ಜಿಹ್ವಾಚ ಮರಣಚ್ಹಂನಿ ವಿದೀಯತೇ ॥ ೧ ॥
ನಾಲಗೆಯು ಕೊನೆಯು ಕಾಣದಡೊಂದು ದಿನ ಕಳೆವರ್ಮೇಲೆ ತಂನಾಸಿಕಾಗ್ರಂ ಕಾಣಿಸದಡೆ ಸುರನಾಲಯಕ್ಕೆ ನಾಲ್ಕು ದಿನದೊಳಗೈದುವಂ ತಮಾರ್ಪೊಳಪ್ಪು ಕಾಣಿಸದೊಡೆ ಮೇಲ್ಯೆದು ದಿನವ ಕೈಪುಬ್ಬಿನಾಗ್ರಂಗಳು ಮೆನಲೋಕಿಸಲು ತೋರದಿನಲಾರ ದಿನದಲ್ಲಿ ಕಾಲಿ ಮಾಡುವಾ ಮನುಜನೆಂಬುದನರಿದುದ್ಯೆಯಾ ಕೇಳೀ ಮತದೊಳೂ ॥

**ಅಂತ್ಯ :** ನೀರೊಳಗೆ ನೋಡಲಿನನಲ್ಲಿ ಹತ್ತಿರ ದೂರ ಮರಣವೈದಶದಿನಂ ಚಿದ್ರವಾಗಲ್ಕದುವಾರವಿಯು ಕೀಳ್ಬಿರಲ್ ನಾಲ್ಕು ಕರಿದಾಗಿ ತೋರಲು ಮೂರು ದಿವಸದಲ್ಲಿ ಪೋರಂತೆ ಹುಗ್ಗಿಯಂತಿರಲೆರಡದೆ ಭಾನು ತೋರದಿರಲೆಂಟು ಜೀವದೊಳ್ಳವನಂತಿವಂ ಕಾಲವನ್ನರಿದು ಪರಲೋಕಕ್ಕೆ ಸಾಧನಂ ದಾನ ಧರ್ಮವ ಮಾಳ್ಪುದು ಶ್ರೀ ಶ್ರೀ.

**ವಿಷಯ :** ಮರಣಕಾಲದ ಚಿಹ್ನೆಗಳ ವಿವರ.

**ವಿಶೇಷ :** ಸಮಗ್ರ. ಅಕ್ಷರಗಳು ಚೆನ್ನಾಗಿಲ್ಲ. ಇದೇ ಕಟ್ಟಿನಲ್ಲಿ ಅನುಭವಮುದ್ರೆ ಮೊದಲಾದ ೬ ಕೃತಿಗಳಿವೆ.

—ಜಿಜಿಎಂ

## 400

ಕೆ. ೧೦೦೧/೧೬ **ಮರಣಮಣಿದರ್ಪಣ ಶತಕ** ಕಂದ
೧೧″ × ೧.೮″ ಶಾಂತಾಚಾರ್ಯ ಸು. ೧೭೦೦
೧೩೭ನೆಯ ಪತ್ರ ೮ ಪಂಕ್ತಿ ೪೫ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ಮರಣ ಮಣಿದರ್ಪಣ ಶತಕ ॥
ಶ್ರೀ ರಜತಾದ್ರಿಯ ಸ್ಥಾನಂ
× × × ಕಜ ಜಾಹ್ನವಿ
ಗುರುಶಾಂತ ಶ್ರೀ ವೀರೇ
ಶ್ವರ ಪೊರೆವುದೆಂಮು ಸಂತಸದಿಂದಂ ॥ ೧ ॥

**ಅಂತ್ಯ :** ಚಾರುತರ ನಾಶ ಸೂಚನೆ
ಯೋರಂತರಿವುತ್ತ ಭಸಿತ ರುದ್ರಾಕ್ಷೆಗಳಂ
ದಾರಣಗೈವುತ್ತ ಶಾಂತ ಶ್ರೀ
ವೀರೇಶ್ವರನೊಲಿದು ಪಡೆವುದು ಬಲ್ಲರ್ ॥ ೧೦೦ ॥
ಮರಣಸೂಚನೆ ಸಮಾಪ್ತ ಮಂಗಳ ಮಹಾಶ್ರೀ ಶ್ರೀ

**ವಿಷಯ :** ಮರಣಕಾಲದ ಸೂಚನೆ.

**ವಿಶೇಷ :** ಇದರ ಜೊತೆಯಲ್ಲಿ ಜ್ಯೋತಿರ್ಮಯ ಶಾಂಭವಜ್ಞಾನದೀಕ್ಷಾಬೋಧೆ, ಪ್ರಭುವಿನ ವಚನ ಇತ್ಯಾದಿ ೧೬ ಕೃತಿಗಳಿವೆ.

—ಜಿಜಿಎಂ

## 401

ಕೆ. ೧೧೫೯/೩ **ಮರಣಸೂಚನೆ ವಾರ್ಧಕ ಷಟ್ಪದಿ, ಘಟಚಕ್ರ ಇತ್ಯಾದಿ** ವಚನ
೧೧.೫″ × ೨″ ? ?
೧೮೬–೧೯೭+೨ ಪತ್ರ ೧೨ ಪಂಕ್ತಿ [illegible] ಅಕ್ಷರ

**ಆದಿ :** ಶ್ರೀ ಮರಣಸೂಚನೆ ವಾರ್ಧಿಕ,
ನಾಲಗೆಯ ಕೊನೆಯ ಕಾಣದಡೊಂದುದಿನ ಕಳಿಪ
ನೈಲಸನ್ನಾಸಿಕಾಗ್ರಂ ಕಾಣಿಸದೊಡೆ ಸುರ
ನಾಲಯಕೆ ನಾಲ್ಕು ದಿನದೊಳಗೆಯ್ದುವಂ ಕಂಣ ಮಾರ್ಪೊಳಪು ಕಾಣಿಸದೊಡೆ
ಮೇಲೈದಂ ದಿನವಲ್ಲೆ ಪುರ್ಪಿನಗ್ರಂಗಳು ಮಹಾವ

ನಾಲೋಕಿಸಲು ತೊರದಿರಲಾರು ದಿನದಲ್ಲಿ
ಕಾಲಮಂ ಮಾಡುವಂ ಮನುಜನೆಂಬುದನರಿವುದೈ ಕೇಳಿ ಮತದೊಳೂ ॥ ೧ ॥

**ಅಂತ್ಯ :** ಯಿ ಪ್ರಕಾರದಲ್ಲಿ ಮೂರು ವೇಳೆ ಅರ್ಪಿಸುವದು ಯಿಷ್ಟಲಿಂಗಕ್ಕೆ ಅರ್ಪಿಸಿದರೆ ಷಡ್ವಿದ ಲಿಂಗಕ್ಕೆ ತೃಪ್ತಿಯಾತ್ತು ××× ಓಂ ಮಾಂ ಭಾವಲಿಂಗಯೇ ನಮಃ ।

**ವಿಷಯ :** ವೀರಶೈವ ತತ್ವ.

**ವಿಶೇಷ :** ವೀರಶೈವ ಸಂಕೀರ್ಣ ವಿಷಯಗಳಿವೆ. ಇಲ್ಲಿ ಕೊಟ್ಟಿರುವ ಅಂತ್ಯದ ನಂತರ ಬರುವ ಎರಡು ಪತ್ರಗಳಲ್ಲಿ ಮಂತ್ರ ತಂತ್ರಗಳು ನಕ್ಷೆ ಸಹಿತವಾಗಿವೆ. ಇದೇ ಕಟ್ಟಿನಲ್ಲಿ ಪ್ರಭುಲಿಂಗಲೀಲೆ ಮೊದಲಾದ ಇತರ ಕೃತಿಗಳಿವೆ.

—ಬಿಎಸ್‌ಎಸ್

## 402

| ಕೆ. ೬೬೪/೮ | ಮರುಳದೇವರ ಕಂದ | ಕಂದ |
|---|---|---|
| ೯.೫"×೨.೪" | ಮರುಳದೇವ | ಸು. ೧೧೬೦ |
| ೨೪–೨೮ ಪತ್ರ | ೧೨ ಪಂಕ್ತಿ | ೭೦ ಅಕ್ಷರ |

**ಆದಿ :** ಗುರುಬಸವಲಿಂಗಾಯ ನಮಃ ॥ ಮರುಳುದೇವರ ಕಂದ ॥
ಶ್ರೀ ಮತ್ಕಾಂಭವ ಭಕ್ತಿ
ಪ್ರೇಮಾನಂದಾಬ್ಧಿ ಸಾಮನತ ಜನ ಚಯವಿ
ಶ್ರಾಮನರಿ ಭೀಮನಗಜಾ
ವಾಮಾಂಗೋದ್ದಾಮನೇಮ ಪರಮ ಪ್ರಭುವೆ

**ಅಂತ್ಯ :** ವರ ಬಸವ ಚೆಂನಬಸವೇ
ಶ್ವರ ಪ್ರಭು ಮಹಾದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಹೃ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮಪ್ರಭುವೇ ॥ ೧೩೪ ॥
ಮರುಳುದೇವರ ಕಂದ ಸಮಾಪ್ತ ಮಂಗಳ ಮಹಾಶ್ರೀ ಶ್ರೀ ಶ್ರೀ.

**ವಿಷಯ :** ವೀರಶೈವಸಿದ್ಧಾಂತ.

**ವಿಶೇಷ :** ಪತ್ರಗಳ ಕ್ರಮಸಂಖ್ಯೆಯಿಲ್ಲ. ಪತ್ರಗಳು ಸ್ವಲ್ಪ ತ್ರುಟಿತವಾಗಿವೆ. ಇದೇ ಕಟ್ಟಿನಲ್ಲಿ ಈ ಕೃತಿಯಲ್ಲದೆ ಶಂಕರದೇವರ ಕಂದಾದಿ ೧೭ ಕನ್ನಡ ಗ್ರಂಥಗಳೂ, ಶಿವಭುಜಂಗ ಸ್ತೋತ್ರಾದಿ ೧೬ ಸಂಸ್ಕೃತ ಗ್ರಂಥಗಳೂ, ಒಂದು ತೆಲುಗು ಕೃತಿಯೂ ಇವೆ. ಇದಕ್ಕೆ ಪ್ರಭುದೇವರ ಕಂದ ಎಂಬ ಹೆಸರೂ ಇದೆ ಎಂದು ಕವಿಚರಿತೆಕಾರರು ಹೇಳುತ್ತಾರೆ.

—ಎಸ್‌ಬಿ

## 403

ಕೆ. ೯೯೪/೬ ಮರುಳದೇವರ ಕಂದ ಕಂದ

೮"×೨.೨" ಮರುಳದೇವ ಸು. ೧೧೬೦

೩೦_೩೭ ಪತ್ರ ೧೩ ಪಂಕ್ತಿ ೪೪ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ ಮರುಳದೇವರ ಕಂದ
ಶ್ರೀಮತ್ಶ್ಯಾಂಭವ ಭಕ್ತಿ
ಪ್ರೇಮಾನಂದಾಬ್ಧಿ ಸೋಮನತಜನ ಚಯ ವಿ
ಶ್ರಾಮನರಿ ಭೀಮನಗಜಾ
ವಾಮಾಂಗೋದ್ಧಾಮ ನೇಮ ಪರಮ ಪ್ರಭುವೆ ॥

ಅಂತ್ಯ : ವರಬಸವ ಚೆಂನ ಬಸವೇ
ಶ್ವರ ಪ್ರಭು ಮಹಾದೇವ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಹೃ
ತ್ಸರಸಿಜದೊಳು ತಾಳ್ದು ಬಾಳ್ವೆ ಪರಮಪ್ರಭುವೇ ॥ ೧೩೪ ॥
ಮರುಳದೇವರ ಕಂದ ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ

ವಿಷಯ : ವೀರಶೈವಸಿದ್ಧಾಂತ ಪ್ರತಿಪಾದನೆ.

ವಿಶೇಷ : ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಬಸವಸ್ತೋತ್ರ ತ್ರಿವಿಧಿ ಮುಂತಾದ ೨೭ ಕೃತಿಗಳಿವೆ. ಹಾಡಿನ ಕೆಲವು ಪತ್ರಗಳೂ ಇವೆ. ೮೪–೧೧೦ ಪತ್ರಗಳಿಲ್ಲ.

—ಜಜಿಎಂ

## 404

ಕೆ. ೧೦೦೬/೨೪ ಮರುಳದೇವರ ಕಂದ ಕಂದ

೭.೭" × ೧.೫" ಮರುಳದೇವ ಸು. ೧೧೬೦

೨೮_೯೫ ಪತ್ರ ೧೦ ಪಂಕ್ತಿ ೪೬ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯನಮಃ ಮರುಳುದೇವರು ನಿರೂಪಿಸಿದ ಕಂದ ॥
ಶ್ರೀ ಮತ್ಶ್ಯಾಂಭವ ಭಕ್ತಿ
ಪ್ರೇಮದಿನಾದಬ್ಧಿ ಸೋಮ ನತ ಜನಚಯ ವಿ
ಶ್ರಾಮನತಿಭೀಮನಗಜಾ
ವಾಮಾಂಗೋದ್ದಾಮ ನೇಮ ಪರಮಪ್ರಭುವೇ ॥ ೧ ॥

ಅಂತ್ಯ : ವರಬಸವ ಚೆಂನಬಸವೇ
ಶ್ವರ ಪ್ರಭು ಮಹದೇವಿ ಸಿದ್ಧರಾಮೇಶ್ವರ ಮು

ಖ್ಯರ ಪ್ರಮಥರಡಿಗಳನು ಹ್ರು
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮಪ್ರಭುವೇ ॥ ೧೨೪ ॥
ಮರುಳುದೇವರು ಸಿರೂಪಿಸಿದ ಕಂದ ಸಮಾಪ್ತ, ಮಂಗಳ ಮಹಾ ಶ್ರೀ.

**ವಿಷಯ :** ವೀರಶೈವಸಿದ್ಧಾಂತ ಪ್ರತಿಪಾದನೆ.

**ವಿಶೇಷ :** ಸಮಗ್ರ. ಶಕಟರೇಫವನ್ನು ಬಳಸಿದೆ. ಈ ಕಾವ್ಯದ ಕಂದಗಳ ನಾಲ್ಕನೆಯ ಪಾದದಲ್ಲಿ 'ಪರಮ ಪ್ರಭುವೇ' ಎಂಬ ಅಂಕಿತವಿದೆ. ಇದೇ ಕಟ್ಟಿನಲ್ಲಿ ಷಡ್ವಕ್ತ್ರ (ಸಂ), ಮಂಗಳಾಷ್ಟಕ (ಸಂ), ಗುರುಸ್ತೋತ್ರದ ತ್ರಿವಿಧಿ ಮೊದಲಾದ ೨೪ ಗ್ರಂಥಗಳಿವೆ.

[ಕ.ಹ.ಪ್ರ.ವ.ಸೂ. ತೃತೀಯ ಸಂಪುಟ. ಪುಟ ೨೫೬–೨೯ ಕ್ರಮಾಂಕ. 1267–1270 ನೋಡಿ].

—ಕೆಆರ್‌ಎಸ್

## 405

| ಕ. ೧೦೭೬/೩ | **ಮರುಳದೇವರ ಕಂದ** | ಕಂದ |
|---|---|---|
| ೧.೮''×೧.೬'' | ಮರುಳದೇವ | ಸು. ೧೧೬೦ |
| ೨೪–೩೬ ಪತ್ರ | ೯ ಪಂಕ್ತಿ | ೩೪ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ಮರುಳದೇವರ ಕಂದ.
ಶ್ರೀ ಮತ್ಸಂಭವ ಭಕ್ತಿ
ಪ್ರೇಮಾನಂದಾಬ್ಧಿಸೋಮ ನತಜನಚಯ ವಿ
ಶ್ರಾಮಸಜೀ ಛೀಮಃನಗಜಾ
ವಾಮಾಂಗೋದ್ಧಾಮಸೋಮ ಪರಮಪ್ರಭುವೆ ॥ ೧ ॥

**ಅಂತ್ಯ :** ವರಬಸವ ಚೆನ್ನಬಸವೇ
ಶ್ವರ ಪ್ರಭು ಮಹದೇವಿ ಸಿದ್ಧರಾಮೇ
ಶ್ವರ ಮುಖ್ಯರ ಪ್ರಮಥರಡಿಗಳನು ಹೃ
ತ್ಸರಸಿಜದೊಳು ತಾಳ್ದೆ ಪರಮಪ್ರಭುವೆ ॥ ೧೩೪ ॥
ಮರುಳುದೇವರು ನಿರೂಪಿಸಿದ ಕಂದ ಸಮಾಪ್ತ, ಮಂಗಳ ಮಹಾಶ್ರೀ ಶ್ರೀ.

**ವಿಷಯ :** ವೀರಶೈವಸಿದ್ಧಾಂತದ ಪ್ರತಿಪಾದನೆ.

**ವಿಶೇಷ :** ಇದೇ ಕಟ್ಟಿನಲ್ಲಿ ಶಂಕರದೇವರ ಕಂದ, ಮಂತ್ರಮಹತ್ವದ ಕಂದ ಮತ್ತು ಅಪರಾಧ ಸ್ತೋತ್ರಗಳಿವೆ.

—ಜಜಎಂ

## 406

ಕೆ. ೧೧೩೮/೧೩ ಮರುಳದೇವರ ಕಂದ ಕಂದ

೭.೪"x೨" ಮರುಳದೇವ ಸು. ೧೧೬೦

೫೯-೬೦ ಪತ್ರ ೧೪ ಪಂಕ್ತಿ ೫೦ ಅಕ್ಷರ

ಆದಿ : ಮರುಳುದೇವರು ನಿರೂಪಿಸಿದ ಕಂದ ॥
ಶ್ರೀಮತ್ಸಾಂಭವ ಭಕ್ತಿ
ಪ್ರೇಮಾನಂದಾಬ್ಧಿ ಸೋಮ ನತಜನಚಯು ವಿ
ಶ್ರಾಮನರಿ ಭೀಮನಗಜಾವಾ
ಮಾಂಗೋದ್ದಾಮನೇಮ ಪರಮಪ್ರಭುವೆ ॥ ೧ ॥

ಅಂತ್ಯ : ವರಬಸವ ಚೆನ್ನಬಸವೇ
ಶ್ವರ ಪ್ರಭು ಮಹಾದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥ ರತಿಗಳನು ಹೃ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮಪ್ರಭುವೆ ॥ ೧೩೩ ॥
ಮರುಳುದೇವರು ನಿರೂಪಿಸಿದ ಕಂದ ಸಂಪೂರ್ಣ ಮಂಗಳ ಮಹಾಶ್ರೀ ಶ್ರೀ. ಸೂಲೆಗಾವಿ ಶಾಂತಲಿಂಗಮರಿದೇವರಿಗೆ ತೋಟದದಂಬಳದ ತೋಟದ ಸ್ವಾಮಿಗಳ ಪಾದದ ಮರಿಮಳ್ಳಯ ಬರಕೊಟ್ಟ ಪುಸ್ತಕ ವೊಂದುವರಕೆ ವೊಂದು ಹಡಕ್ಕೆ ಅೈದು ಟೆಂಕೆ ರೊಕ್ಕ ಕೊಡುವರು ಮೇಲೆ ಯೇನು ಕೊಟ್ಟದು ವಹಾಪು ಕೊಡದಿದ್ದರೆಯಿಲ್ಲ.

ವಿಷಯ : ವೀರಶೈವಸಿದ್ಧಾಂತ ಪ್ರತಿಪಾದನೆ.

ವಿಶೇಷ : ಈ ಕಟ್ಟಿನಲ್ಲಿ ಗುರು ರಗಳೆ, ಷಡಕ್ಷರಿ ರಗಳೆ ಮೊದಲಾದ ೨೯ ಕೃತಿಗಳಿವೆ.

—ಜಿಜಿಎಂ

## 407

ಕೆ. ೧೧೩೯/೧೬ ಮರುಳದೇವರ ಕಂದ ಕಂದ

೭"x೨" ಮರುಳದೇವ ಸು. ೧೧೬೦

೭೦-೭೭ ಪತ್ರ ೧೨ ಪಂಕ್ತಿ ೩೮ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯನಮಃ ॥ ಮರುಳದೇವರ ಕಂದ ॥
ಶ್ರೀಮಂತ್ಸಾಂಭವ ಭಕ್ತಿ
ಪ್ರೇಮಾನಂದಾಬ್ಧಿ ಸೋಮ ನತಜನಚಯು ವಿ
ಶ್ರಾಮನರಿಭೀಮನಗಜಾ
ವಾಮಾಂಗೋದ್ದಾಮ ನೇಮ ಪರಮಪ್ರಭುವೇ ॥ ೧ ॥

ಅಂತ್ಯ : ವರ ಬಸವ ಚೆಂನ ಬಸವೇ
ಶ್ವರ ಪ್ರಭು ಮಹಾದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಹ್ರು
ತ್ಸರಸಿಜದೊಳು ತಾಳು ಬಾಳೆ ಪರಮ ॥ ೧೩೪ ॥
ಮರುಳುದೇವರ ಕಂದ ಸಾಪೂರ್ನ್ನ ಮಂಗಳ ಮಹಾ ಶ್ರೀ.

ವಿಷಯ : ವೀರಶೈವಸಿದ್ಧಾಂತ ಪ್ರತಿಪಾದನೆ.

ವಿಶೇಷ : ಪ್ರತಿಯೊಂದು ಪದ್ಯವೂ 'ಪರಮ ಪ್ರಭುವೇ' ಎಂದು ಮುಗಿಯುತ್ತದೆ. ಈ ಕೃತಿಯಲ್ಲದೆ ಇದರೊಂದಿಗೆ ಮಂತ್ರಮಹತ್ವದ ಕಂದಾದಿ ೩೭ ಗ್ರಂಥಗಳಿವೆ. ಇದರಲ್ಲಿ ಹಲವು ಸಂಸ್ಕೃತ ಗ್ರಂಥಗಳಾಗಿವೆ.

—ಎಸ್‌ಬಿ

## 408

ಕೆ. ೧೧೯೪/೬ ಮರುಳದೇವರ ಕಂದ ಕಂದ
೭.೨"×೧.೭" ಮರುಳದೇವ ಸು. ೧೧೬೦
೫೩–೬೧ ಪತ್ರ ೯ ಪಂಕ್ತಿ ೩೨ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಮರುಳದೇವರ ಕಂದ ॥
ಶ್ರೀ ಮತ್ಸಾಂಭವ ಭಕ್ತಿ
ಪ್ರೇಮಾನಂದಾಬ್ಧಿ ಶೋಮ ನತಜನ ಚಯವಿ
ಶ್ರಾಮಸರಿ ಭೀಮನಗಜಾ
ವಾಮಾಂಗೋದ್ದಾಮ ನೇಮಂ ಪರಮಪ್ರಭುವೇ ॥ ೧ ॥

ಅಂತ್ಯ : ವರ ಬಸವ ಚೆಂನ ಬಸವೇ
ಶ್ವರ ಪ್ರಭು ಮಹಾದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಹ್ರ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮಪ್ರಭುವೇ ॥ ೧೩೪ ॥

ವಿಷಯ : ವೀರಶೈವಸಿದ್ಧಾಂತ ಪ್ರತಿಪಾದನೆ.

ವಿಶೇಷ : ಇದೇ ಕಟ್ಟಿನಲ್ಲಿ ಬಸವಸ್ತೋತ್ರದ ತ್ರಿವಿಧಿ, ಅಷ್ಟಾವರಣ ಸ್ತೋತ್ರದ ತ್ರಿವಿಧಿ, ಶೀಲವಂತಯ್ಯನ ತ್ರಿವಿಧಿ, ಶಿವಾಧವ ಶತಕ, ಶಿವಾವಲ್ಲಭ ಶತಕ, ಷಡಕ್ಷರಿಯ ಕಂದ ಮೊದಲಾದ ಕೃತಿಗಳಿವೆ.

—ವೈಸಿಬಿ

## 409

ಕೆ. ೧೨೬೦/೮ | **ಮರುಳದೇವರ ಕಂದ** | ಕಂದ

೧೦"×೨.೧" | ಮರುಳದೇವ | ಸು. ೧೧೬೦

೧೦೨–೧೧೯ ಪತ್ರ | ೧೦ ಪಂಕ್ತಿ | ೫೦ ಅಕ್ಷರ

ಆದಿ : ಮರುಳುದೇವರ ಕಂದವ ಬರುವುದಕ್ಕೆ ಸುಭಮಸ್ತು ॥
ಶ್ರೀ ಮತ್ಕಾಂಭವ ಭಕ್ತಿ
ಪ್ರೇಮಾನಂದಾಬ್ಧಿಸೋಮಂ ನತಜನಚಯು ವಿ
ಶ್ರಾಮನರಿಭೀಮಂನಗಚಾ
ಪಾವಶಾಂಗೋದ್ದಾಮ ನೇಮ ಪರಮಪ್ರಭುವೇ ॥ ೧ ॥

ಅಂತ್ಯ : ಪರಬಸವ ಚೆಂನಬಸವೇ
ಶ್ವರ ಪ್ರಭು ಮಹಾದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಪ್ರ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮ ಪ್ರಭುಂವೇ ॥ ೧೩೪ ॥
ವುಜ್ಜಿನಿಯ ಮರುಳುದೇವರು
ಸಜ್ಜನ ಸತ್ಪುರುಷರೊಲಿದು ಪಠಿಸಲಿಯೆಂನುತಂ
ಸಜ್ಜನತ್ವದಲಿ ಪೇಳಿದ
ವುಜ್ಜಿನಿಯ ಮರುಳುದೇವಲಿಂಗದೊಳೈಕ್ಯಂ ॥ ೧೩೫ ॥
ಮರುಳುದೇವರ ಕಂದ ಸವಶಾಪ್ತ ಮಂಗಳ ಮಹಾಶ್ರೀ.

ವಿಷಯ : ವೀರಶೈವಸಿದ್ಧಾಂತದ ಪ್ರತಿಪಾದನೆ.

ವಿಶೇಷ : ಸಮಗ್ರ. ಬರಹ ಚೆನ್ನಾಗಿದೆ. ಸ್ಥಿತಿ ಉತ್ತಮವಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಉದ್ಭಟದೇವರೇ ಮೊದಲಾಗಿ ೧೩ ರಗಳೆಗಳೂ, ಬಸವ ಸ್ತೋತ್ರದ ತ್ರಿವಿಧಿ, ಮಂತ್ರಮಹತ್ವದ ಕಂದ, ಅಕ್ಷರಾಂಕ ಗದ್ಯ ಇತ್ಯಾದಿ ೨೬ ಕೃತಿಗಳಿವೆ. ಇವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳಾಗಿವೆ.

—ಕೆಆರ್‌ಎಸ್

## 410

ಕೆ. ೧೬೮೮/೩ | **ಮರುಳದೇವರ ಕಂದ** | ಕಂದ

೭.೮"×೨.೩" | ಮರುಳದೇವ | ಸು. ೧೧೬೦

೭೧–೭೮ ಪತ್ರ | ೧೪ ಪಂಕ್ತಿ | ೪೦ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ । ಜಿಗುನಿಯ ಮರುಳದೇವರು ನಿರೂಪಿಸಿದ ಕಂದ ॥

ಶ್ರೀಮತ್ಸ್ವಾಂಭವ ಭಕ್ತಿ
ಪ್ರೇಮಾನಂದಾಬ್ಧಿಸೋಮಾ ನತಜನಚಯ ಪಿ
ಶ್ಚಾಮನರಿ ಭೀಮನಗಜಾ
ವಾಮಾಂಗೋದ್ದಾಮನೇಮ ಪರಮಪ್ರಭುವೆ ॥ ೧ ॥

**ಅಂತ್ಯ :** ವರಬಸವ ಚೆಂನಬಸವೇ
ಶ್ವರ ಪ್ರಭು ಮಹಾದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಹೃ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮಪ್ರಭುವೆ ॥ ೧೩೪ ॥
ಜಿಗುನಿಯ ಮರುಳುದೇವರ ಕಂದ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತದ ಪ್ರತಿಪಾದನೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಪ್ರಭುಲಿಂಗದ ಕಂದ. ಮೊದಲಾದ ೨೨ ಕೃತಿಗಳಿವೆ.

—ಜಿಜಿಮ

## 411

ಕ. ೧೭೫೦/೧೬ | **ಮರುಳದೇವರ ಕಂದ** | ಕಂದ
೧೦.೨"×೧.೯" | ಮರುಳದೇವ | ಶ. ೧೧೬೦
೬೧-೬೬ ಪತ್ರ | ೧೦ ಪಂಕ್ತಿ | ೫೨ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ಮರುಳದೇವರ ಕಂದ ॥
ಶ್ರೀಮಚ್ಛಾಂಬವ ಭಕ್ತಿ
ಪ್ರೇಮಾನಂದಾಬ್ಧಿಸೋಮ ನತಜನಚಯ ಪಿ
ಶ್ಚಾಮನರಿಭೀಮನಗಜಾ
ವಾಮಾಂಗೋದ್ದಾಮನೇಮ ಪರಮಪ್ರಭುವೇ ॥ ೧ ॥

**ಅಂತ್ಯ :** ವರಬಸವ ಚೆಂನಬಸವೇ
ಶ್ವರ ಪ್ರಭು ಮಹದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಹೃ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮ ಪ್ರಭುವೇ ॥ ೧೩೪ ॥
ಮರುಳದೇವರ ಕಂದ ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ವೀರಶೈವಸಿದ್ಧಾಂತ ಪ್ರತಿಪಾದನೆ.

**ವಿಶೇಷ :** ಇದೇ ಕಟ್ಟಿನಲ್ಲಿ ಅಕ್ಷರಮಾಲಿಕಾಗದ್ಯ, ಶಿವಾಧವ ಶತಕ, ಪುಷ್ಪಾಷ್ಟಕ, ಶಂಕರದೇವರ ಕಂದ ಇವೇ ಮೊದಲಾದ ೨೮ ಕೃತಿಗಳಿವೆ.

—ವೈಸಿಬಿ

## 412

| ಕೆ. ೧೭೫೨/೯ | ಮರುಳದೇವರ ಕಂದ | ಕಂದ |
|---|---|---|
| ೫.೫" × ೧.೭" | ಮರುಳದೇವ | ಸು. ೧೧೬೦ |
| ೧೩೦–೧೪೬ ಪತ್ರ | ೧೦ ಪಂಕ್ತಿ | ೨೪ ಅಕ್ಷರ |

**ಆದಿ :** ಶ್ರೀಗುರು ಬಸವಲಿಂಗಾಯ ನಮಃ ॥ ಮರುಳದೇವರು ನಿರೂಪಿಸಿದ ಕಂದ ॥
ಶ್ರೀಮತ್ಸಾಂಭವ ಭಕ್ತಿ
ಪ್ರೇಮಾನಂದಾಬ್ಧಿಸೋಮ ನತಜನಚಯಂ ವಿ
ಶ್ರಾಮನರಿ ಭೀಮನಗಜಾ
ವಾಮಾಂಗೋದ್ದಾಮನೇಮಂ ಪರಮಪ್ರಭುವೆ ॥ ೧ ॥

**ಅಂತ್ಯ :** ವರಬಸವ ಚೆಂನಬಸವೇ
ಶ್ವರಪ್ರಭು ಮಹದೇವಿ ಸಿದ್ಧರಾಮೇಶ್ವರ ಮು
ಖ್ಯರ ಪ್ರಮಥರಡಿಗಳನು ಹೃ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮಪ್ರಭುವೆ ॥ ೧೩೪ ॥
ಮರುಳ ದೇವರು ನಿರೂಪಿಸಿದ ಕಂದ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ವೀರಶೈವಸಿದ್ಧಾಂತ ಪ್ರತಿಪಾದನೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಶಂಕರದೇವರಕಂದ ಮೊದಲಾದ ೧೭ ಕೃತಿಗಳಿವೆ.

—ಜಿಜಿಎಂ

## 413

| ಕೆ. ೧೭೫೩/೧೭ | ಮರುಳದೇವರ ಕಂದ | ಕಂದ |
|---|---|---|
| ೮" × ೨.೪" | ಮರುಳದೇವ | ಸು. ೧೧೬೦ |
| ೫೬-೬೮ ಪತ್ರ | ೧೨ ಪಂಕ್ತಿ | ೪೨ ಅಕ್ಷರ |

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ॥ ಜಿಗಿನಿಯಂ ಮರುಳುದೇವರುಂ ನಿರೂಪಿಸಿದ ಕಂದ ॥
ಶ್ರೀಮತ್ಸಾಂಭವ ಭಕ್ತಿ
ಪ್ರೇಮಾನಂದಾಬ್ಧಿಸೋಮ ನತಜನಚಯು ವಿ
ಶ್ರಾಮನರಿಭೀಮನಗಜಾ
ವಾಮಾಂಗೋದ್ದಾಮನೆ ಪರಮಪ್ರಭುವೆ ॥ ೧ ॥

**ಅಂತ್ಯ :** ವರಬಸವ ಚೆಂನಬಸವೇ
ಶ್ವರಪ್ರಭು ಮಹಾದೇವಿ ಸಿದ್ಧರಾಮೇಶ್ವರ ಮುಂ

ಖ್ಯರು ಪ್ರಮಥರಡಿಗಳನು ಹೃ
ತ್ಸರಸಿಜದೊಳು ತಾಳ್ದು ಬಾಳ್ದೆ ಪರಮಪ್ರಭುವೆ ॥ ೧೩೪ ॥
ಜಗಿನಿಯ ಮರುಳದೇವರು ನಿರೂಪಿಸಿದ ಕಂದ ಸಮಾಪ್ತ ಮಂಗಳ
ಮಹಾಶ್ರೀ ಶ್ರೀ.

ವಿಷಯ : ವೀರಶೈವ ಸಿದ್ಧಾಂತ ಪ್ರತಿಪಾದನೆ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಸಮಾಧಿಕ್ರಿಯೆ ಮೊದ
ಲಾದ ೪೭ ಕೃತಿಗಳಿವೆ.

—ಜಜಿಎಂ

## 414

ಕೆ. ೧೫೪೩/೧೧ ಮರುಳಸಿದ್ಧಸ್ವಾಮಿಗಳು ನಿರೂಪಿಸಿದ ನಾಂದ್ಯ ವಾರ್ಧಕ ಷಟ್ಪದಿ
೧೧.೨" × ೧.೯" ಮರುಳಸಿದ್ಧ ?
೩೧–೩೪ ಪತ್ರ ೯ ಪಂಕ್ತಿ ೫೬ ಅಕ್ಷರ

ಆದಿ : ಮರುಳು ಸಿದ್ಧಸ್ವಾಮಿಗಳು ನಿರೂಪಿಸಿದ ನಾಂದ್ಯದ ಪದ
ವಾಧಿಕ ॥ ಶ್ರೀಮದಜಹರಿ ಸುರಾಸುರ ಕಿರೀಟ ಘಟಿ
ತಾಮಳ ಮಹಾದಿವ್ಯ ರತ್ನ ಸಂದೋಹ ಪ್ರ
ಭಾಮಹಿತಪಾದ ಪಂಕಜ ಶರದಪ್ಪರ್ವಿಪಿನ ಪಟುಧಾವನಲಾ
ತಾಮರಸಸಖ ಕೋಟಿತೇಜವಿಜಿತಾಂಗಾಭಿ
ರಾಮರಯ ಗಾಪ್ತಲೋಚನ ರಜತ ಗಿರಿವಾಸ
ಹೈಮವತಿಯರಸ ಶ್ರೀ ಸೋಮಶೇಖರ ರಕ್ಷಿಸೆಂಮನತಿಹರುಷವೆರಸಿ ॥ ೧ ॥

ಅಂತ್ಯ : ಪಂಚವದನನ ಭಕ್ತಿರಸಭರಿತ ಮಣಿಕಳಸ
ಸಂಚಿತಾಗಾಮಿ ಕರ್ಮ್ಮದ ಮೂಲ ಕುದ್ದಾಲ
ಕಾಂಚನಾದಿಸುವಸ್ತು ಲಾಭ ಕಾಂಕ್ಷಿತರೀಗತಿಶಯ ಪಂಚವರುಷವೆನಿಪಾ
ಪಂಚವಿಂಶತಿನುತಿಯಿದಂ ಲೇಖಿನಂಗೆಯ್ದು
ಸಂಚಲವನುಳಿದೋದಿ ಕೇಳಿ ವಿಸ್ತರಿಸೆದರ
ವಾಂಚಿತ ಸಂಕೋತ್ಕರವ ಸೋಮಶೇಖರನೊಳಿದು ಕೃಪೆಮಾಡಿ ಪೂಜ[3]ವ
ಸತತಂ ॥ ೨೫ ॥
ಮರುಳು ಸಿದ್ಧಸ್ವಾಮಿಗಳು ನಿರೂಪಿಸಿದ ನಾಂದ್ಯ ಸಮಾಪ್ತಂ ಮಂಗಳ
ಮಹಾ ಶ್ರೀ॥

ವಿಷಯ : ಸ್ತುತಿ (ನಾಂದೀ ಪದ್ಯಗಳು)

ವಿಶೇಷ : ಇದರಲ್ಲಿ ೨೫ ಪದ್ಯಗಳಿವೆ. ಬರಹ ಚೆನ್ನಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ನೀಲಾಂಬಿಕಾ ಲಲಿತಸ್ತೋತ್ರ, ಕಲ್ಯಾಣದ ಸ್ವಾಮಿಗಳು ನಾಂದ್ಯ ಇತ್ಯಾದಿ ೩೦ ಕೃತಿಗಳಿವೆ.

—ಕೆಆರ್ ಎಸ್

## 415

ಕ. ೧೧೫೮/೩ — **ಮಲಯರಾಜ ಸ್ತೋತ್ರ (ಸಟೀಕು)** — ಟೀಕು

೧೬"×೨" — ? — ?

೨೭-೪೪ ಪತ್ರ — ೮ ಪಂಕ್ತಿ — ೬೫ ಅಕ್ಷರ

ಆದಿ : ಶ್ರೀ ವೃಜ್ಜನಿಪುರಾಧಿನಾಥಾಯೇ ನಮಃ ॥ ಮಲಯರಾಜ ಸ್ತೋತ್ರದ ಟೀಕೂ ಗ್ರಂಥ ॥
ಕಂಠೇ ಕಾಲಂ ಕಾಲಕಾಲಂ ಕಾಲಾತೀತಂ ವಿಭುಂ ಹರಂ
ಶುದ್ಧಸ್ಪಟಿಕಸಂಕಾಶಂ ವಂದೇ ಶಶಿಧರಂ ಧರಂ
ಈ ಸ್ತೋತ್ರಾರಂಭವ ಮಾಡುತಿರ್ದಪಂ

ಆರ್ಯವೃತ್ತ: ಯೋ ನದಿಯಾಮದಿಗಮ್ಯಸ್ತಸ್ಯಾ ಕುಸಂಭವೊ ಗಿರಾಂ ವೃತ್ತೇಃ :
ಸ್ವಾಮಿಸ್ತಥಾಪಿ ಭವಂತಂ ಮನೋರಥೋ ಯಾತ್ಯ ಭೂಮಿಮಾಪೇ

ಟೀಕು : ಯ :—ಆವನೊಬ್ಬ ಪರಮೇಶ್ವರನು. ಧೀಯಾಂ ಮನೋಬುದ್ಧಿಗಳಿಂವೆ ಅಧಿಗಮ್ಯಃ :—ಅರಿಯಲು ಯೋಗ್ಯವಾಗಿದ್ದಾತನು

ಅಂತ್ಯ : ಮಲಯನರಪತಿ । ಮಲಯರಾಜ ದೇವರಸು. ನವಾಂ ಕೈರ್ಲಕ್ಷೈಃ: ರಾಜ್ಯೈ ಸಹ—ವಂಬತ್ತು ಲಕ್ಷ ದೇಶಂಗಳೊಡನೆ ಕೂಡಿದಂತನಾಗುತ್ತಲೂ, ಭಕ್ತ್ಯಾ—ಶಿವಭಕ್ತಿಯಿಂದ. ಶಿವಪುರಂ—ಕೈಲಾಸವನು. ಆಯಾತ್— ಯಯ್ದಿದನು. ಹಿ—ಪ್ರಸಿದ್ಧವು.
ಮಲಯರಾಜಸ್ತವ ಟೀಕಾಗತಿ ಸಮಾಪ್ತ : ಶ್ರೀ ಶ್ರೀ ಶ್ರೀ.

ವಿಷಯ : ಮಲಯರಾಜನಂ ಮಾಡಿದ ಶಿವ ಸ್ತುತಿ.

ವಿಶೇಷ : ಈ ಕಟ್ಟಿನಲ್ಲಿ ಮಹಿಮ್ನಾ ಸ್ತೋತ್ರದ ಟೀಕು, ಹಲಾಯುಧ ಸ್ತೋತ್ರದ ಟೀಕು ಮುಂತಾದ ಇತರ ನಾಲ್ಕು ಕೃತಿಗಳಿವೆ.

—ತಕರಾ

## 416

ಕ. ೧೮೫೬/೬ **ಮಲಯರಾಜಸ್ತೋತ್ರ (ಸಟೀಕು)** ಶ್ಲೋಕ, ಗದ್ಯ
೮.೮" × ೨" ? ?
೨೮–೪೯ ಪತ್ರ ೯ ಪಂಕ್ತಿ ೪೨ ಅಕ್ಷರ

**ಆದಿ :** ವಿರಕ್ತ ಸರ್ವೇಶ್ವರಾಯ ನಮಃ । ಮಲೆಯರಾಜ ಸ್ತೋತ್ರದ ಟೀಕು ॥
ಯೋ ನದಿಯಾ ಮಧಿಗಮ್ಯಸ್ತಸ್ಯಕುತಃ ಸಂಭವೊ ಗಿರಾಂ ವೃತ್ತಿಃ ।
ಸ್ವಾಮಿ ತಥಾ ಪಿ ಭವಂತಂ ಮನೋರದೋಯಾತ್ಯ ಭೂಮಿಮಪಿ
ಟೀಕು ॥ ಯಃ । ಆವನಾನೊಬ್ಬ ಪರಮೇಶ್ವರನು । ಧೀಯಾಂ । ಮನೋಬುದ್ಧಿ
ಗಳಿಂದೆ ಅಧಿಗಮ್ಯಃ । ಅಳಿಯಲು ಯೋಗ್ಯನಾಗಿದ್ದಾತನು । ನ ಭವತಿ ।
ಆಗುತ್ತಿರನು । × × × ಯಾತಿ । ಯೆಯ್ದುತ್ತಿದ್ದಿತು ॥ ೧ ॥

**ಅಂತ್ಯ :** ಶಿವಭಕ್ತಿಯಿಂದ । ಶಿವಪುರಂ । ಕೈಲಾಸವನು । ಅಯಾತ್ । ಯಯ್ದಿದನು ।
ದೇವರಾಜಾತ್ಮಜಃ । ದೇವರಾಜನ ಪುತ್ರನಾದ । ಅಯಂ ಮಯಂ ನರಪತಿಃ ।
ಈ ಮಲಯರಾಜನು । ನವಾಂಕೈಃ ಅಕ್ಷೈಃ । ರಾಜ್ಯೈಃ । ಸಹ । ವೊಂಭತ್ತು
ಲಕ್ಷ ದೇಶಂಗಳೊಡನೆ ಕೂಡಿದಾತ ನಾಣುತಲು । ಭಕ್ತ್ಯಾ । ಭಕ್ತಿಯಿಂದ ।
ಶಿವಪುರಂ । ಕೈಲಾಸವನು । ಆಯಾತ್ । ಯಯ್ದಿದ । ಹೆ । ಪ್ರಸಿದ್ಧವು ॥
ಮಲಯ ರಾಜ ಸ್ತೋತ್ರದ ಟೀಕೂ । ಶಿವಾರ್ಪಣಮಸ್ತು ।

**ವಿಷಯ :** ಮಲಯರಾಜನು ಮಾಡಿದ ಶಿವ ಸ್ತುತಿ.

**ವಿಶೇಷ :** ಸಮಗ್ರ ಕೃತಿ. ಸುದೃಢ ಪ್ರತಿ. ಇದರೊಂದಿಗೆ 'ಅನಾಮಯಸ್ತೋತ್ರ
ಟೀಕು' ಮುಂತಾದ ಕೃತಿಗಳಿವೆ

— ಪಿ.ಪಿ.ಎಂ

•

## 417

ಕ. ೧೨೦೬/೬ **ಮಲುಹಣನ ರಗಳೆ** ರಗಳೆ
೧೨.೮" × ೨.೨" ಹರಿಹರ ಸು. ೧೨೦೦
೬೬–೭೦ ಪತ್ರ ೧೨ ಪಂಕ್ತಿ ೬೫ ಅಕ್ಷರ

**ಆದಿ :** ಶ್ರೀ ವಿರೂಪಾಕ್ಷ ಲಿಂಗಾಯ ನಮಃ ॥ ಮಲ್ಹಣನ ರಗಳೆ ॥ ನಿರ್ವಿಘ್ನಮಸ್ತು
ಧಾರುಣಿಯೊಳ್ ಮಲುಹಣನಂ
ಕಾರುಣ್ಯಕರಮಧಾರಪಾರಿಧಿಮೆಱದಂ
ಗೌರೀಕುಚ ಕುಂಕುಮಲಜಿ
ತೋರಸ್ಥಳನೆಂಮ ಹಂಪೆಯ ವಿರೂಪಾಕ್ಷಂ ॥

ಲಲಿತರಗಳೆ ॥ ಶ್ರೀ ವಸುಮತೀವದನ ಮುಕುರವೆಂದೆನಿಸಿಪ್ಪ
ಪಾವನಂ ಸಕಳ ದೇಶಕ್ಕೆ ತಾನೆನಿಸಿಪ್ಪ
ಸಾರದಾದೇವಿ ಪ್ರಸಂನ್ನೆಯಾಗಿರುತಿಪ್ಪ ॥

ಅಂತ್ಯ : ಕರುಣಂ ಮಿಂಗೆ ಮಲುಹಣನಂ
ವಿರಹಚಿತ್ತನಂ ಮಲುಹಣೆಯೊಳ್ ನೆರಪಿ ಮಿಂಗೆ
ನೆರಪಿಮಿಂಗೆ ಮೆಚಿದ ಪಂಪಾ
ಪುರಪತಿ ನಮಗೀಗೆ ಭಕ್ತಿಸುಖಸಂಪದವಮಂ ॥

ವಿಷಯ : ಮಲುಹಣನ ಕಥೆ.

ವಿಶೇಷ : ಇದೇ ಕಟ್ಟಿನಲ್ಲಿ ಚೆನ್ನಬಸವಣ್ಣನ ವಚನಗಳು, ನಂಬಿಯಣ್ಣನ ರಗಳೆ ಇತ್ಯಾದಿ ೮ ಕೃತಿಗಳಿವೆ.

—ಜಜಿಎಂ

## 418

ಕೆ. ೧೧೦೨/೨ ಮಲುಹಣಸ್ತೋತ್ರ (ಟೀಕು) ಶ್ಲೋಕ, ಟೀಕು
೧೨.೬″ x ೨.೪″ ಮಲುಹಣ ?
೧೧–೨೦ ಪತ್ರ ೯ ಪಂಕ್ತಿ ೫೮ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ । ಮಲುಹಣ ಸ್ತೋತ್ರಂ ಲಿಖ್ಯತೆ ॥
ವಸಂತತಿಲಕ ಉೃತ್ತ ॥
ಕಾಂತಾಃ ಕಚಪ್ರಚಯ ಪುಷ್ಪಸುಗಂಧಿಗಂಧಾ
ಲುಬ್ಧಿತ್ರಿಪುದ್ಭ್ರಮರ ಕರ್ಬುರ ಕಂಧರಾಯ
ಗಂಧರ್ವ ಯಕ್ಷಸುರಸಿದ್ಧ ಕಿರೀಟಕೋಟಿ
ಸಂಘಷ್ಟ-ಘೃಷ್ಟಚರಣಾಯ ನಮಃ ನಮಃ ಶಿವಾಯ ॥ ೧ ॥

ಟೀಕು ॥ ಕಾಂತಾಃ । ಸ್ತ್ರೀಯರುಗಳ । ಕಚಃ ಕೇಶದಪ್ರಚಯ । ಮುಡಿಕಟ್ಟಿನಲ್ಲಿಹ । ಪುಷ್ಪಂ । ಪುಷ್ಪಂಗಳ । ಸುಗಂಧಿ । ಸುಗಂಧವನ್ನುಳ್ಳ × ×

ಅಂತ್ಯ : ಸ್ತೋತ್ರಂ ಮಯಕೃತಮಿದಂ ಭವತೋ ಗಣೆಸ
ಉೃತ್ತೈರ್ವಸಂತತಿಲಕೈ ಶಿವಮಲ್ಹಣೇನ
ಆಯಾಸ ಮಾತ್ರ ಭಗವನ್‌ಗದಿತಂ ದುರುಕ್ತಂ
ಭಕ್ತಿಪ್ರಮಾಣಮಿತಿ ಸರ್ವಮಿದಂ ಕ್ಷಮಸ್ವಾ ॥

ಟೀಕು ॥ ಭೋಶಿವಾ । ಯಲೆ ಶಿವನೆ । ಭವತಃ । ನಿನ್ನನಂ । ಮಲ್ಹಣೇನ ಮಲ್ಹಣ ನೆಂಬ ಗಣೇಶ್ವರನಿಂದ × × ಯಿದಂ ಸರ್ವಂ । ಯಿಾ ಸಮಸ್ತವನು ।

ಭಕ್ತಿ ಪ್ರಮಾಣಮಿತಿ । ಭಕ್ತಿ ಪ್ರಮಾಣವೆಂದು । ಕ್ಷಮಸ್ವಾ ಕ್ಷಮಿಸು ॥
ಇತಿ ಮಲುಹಣಸ್ತೋತ್ರಂ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

ವಿಷಯ : ಶಿವನ ಸ್ತುತಿ,

ವಿಶೇಷ : ಇದೇ ಕಟ್ಟಿನಲ್ಲಿ ಮಹಿಮ್ನಸ್ತೋತ್ರದ ಟೀಕು, ನಾನಾರ್ಥ ರತ್ನಾಕರ, ಧನಂಜಯ ನಿಘಂಟು, ಸುಭಾಷಿತ ಗ್ರಂಥ ಮತ್ತು ಅಕ್ಷರಾಂಕನ ಗದ್ಯಗಳಿವೆ.

—ಜಿಜಿಎಂ

## 419

| ಕೆ. ೧೪೮/೨ | ಮಲುಹಣ ಸ್ತೋತ್ರ (ಸಟೀಕು) | ಶ್ಲೋಕ, ಟೀಕು |
|---|---|---|
| ೧೬" × ೨" | ? | ? |
| ೧೫–೨೭ ಪತ್ರ | ೮ ಪಂಕ್ತಿ | ೬೫ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮಲುಹಣ ಸ್ತೋತ್ರವ ಬರವುದಕ್ಕೆ ಶುಭಮಸ್ತು ಶೋಭನಮಸ್ತು ॥
ಚಂದ್ರಾರ್ಧಮೌಲಿಂ । ಕಾಲಾರಿಂ ಭುಜಗಾವರಿ ಭೂಷಿತಂ
ಕಂಠೇ ಕಾಲಾ ಮಹಾದೇವಂ । ನಮಾಮಿ ಗಿರಿಜಾಪತಿಂ ॥

ವೃತ್ತ ॥ ಕಾಂತಾಕಚಪ್ರಚಯ ಪುಷ್ಪಸುಗಂಧಿ ಗಂಧ
ಲುಬ್ಧ ಭ್ರಮದ್ಭ್ರಮರ ಕರ್ಬುರ ಕಂಧರಾಯಾ
ಗಂಧರ್ವ ಯಕ್ಷ ಸುರಸಿದ್ಧ ಕಿರೀಟಕೋಟಿ
ಸಂಘಟ್ಟಿ ಘೃಷ್ಟ ಚರಣಾಯ ನಮಃ ಶಿವಾಯ ॥

ಟೀ ॥ ಕಾಂತಾ ಕಚಪ್ರಚಯ ಪುಷ್ಪಸುಗಂಧಿ ಗಂಧಲುಬ್ಧ ಭ್ರಮದ್ಭ್ರಮರ ಕರ್ಬುರ ಕಂಧರಾಯ । ಕಾಂತಾ । ಪಾರ್ವತೀದೇವಿಯ । ಕಚಾ । ಕೇಶಗಳ । ಪ್ರಚಯ । ಮುಡಿಗಟ್ಟಿನಲ್ಲಿ । ಯ । ಪುಷ್ಪ ।

ಅಂತ್ಯ : ವೃತಃ । ವೃತ್ತಂಗಳಿಂದ । ಯಿದಂ ಸ್ತೋತ್ರಂ । ಯಿಾ ಗಣಭಿಧಾನವಾದ ಸ್ತೋತ್ರವು । ಕೃತಂ । ಮಾಡಲಪಟ್ಟಿತು । ಹೇ ಭಗರ್ವ । ಯಲೆ ಷಡ್ಗುಣೈಶ್ವರ್ಯಸಂಪನ್ನನಹಂತ ಶಿವನೆ । ಅತ್ರಂ । ಯಿಾ ಸ್ತೋತ್ರದಲ್ಲಿ । ಗದಿತಂ । ಯೆನ್ನಿಂದ ನುಡಿಯಲ್ಪಟ್ಟಂಥ । ಆಯಾಸಂ । ಪ್ರಯಾಸವಾಗಿ ಯಿದ್ದಂಥ । ಸರ್ವಂ । ಸಮಸ್ತವಾಗಿಯಿದ್ದಂಥ । ಯಿದಂದುರಕ್ತಂ । ಯಿಂದುರಕ್ತವು । ಭಕ್ತಿಪ್ರಮಾಣಮಿತಿ । ಭಕ್ತಿಕಾರಣವೆಂದೀ ಪ್ರಕಾರದಲ್ಲಿ ಕ್ಷಮಾ–ಸ್ಪರಿಸು ಶ್ರೀ ಶ್ರೀ.

ವಿಷಯ : ಮಲುಹಣನ ಸ್ತುತಿ.

ವಿಶೇಷ : ಇದೇ ಕಟ್ಟಿನಲ್ಲಿ ಮಹಿಮ್ನಸ್ತೋತ್ರದ ಟೀಕು ಮೊದಲಾದ ಇತರ ನಾಲ್ಕು ಕೃತಿಗಳಿವೆ.

—ವೈಸಿಬಿ

420

ಕ. ೧೮೫೩/೫ | ಮಲುಹಣ ಸ್ತೋತ್ರ (ಸಟೀಕ) | ಶ್ಲೋಕ, ಟೀಕು
೮.೮"×೨" | ? | ?
೧೫—೨೮ ಪತ್ರ | ೯ ಪಂಕ್ತಿ | ೪೨ ಅಕ್ಷರ

ಆದಿ : ಶ್ರೀ ಸರ್ವೇಶ್ವರಾಯ ನಮಃ ॥ ಮಲುಹಣ ಸ್ತೋತ್ರದ ಟೀಕು ॥
ಕಾಂತಾಕಚ ಪ್ರಚಯ ಪುಷ್ಪ ಸುಗಂಧಿಗಂಧ ।
ಲುಬ್ಧ ಭ್ರಮರದ್ಭ್ರಮರ ಕರ್ಬುರ ಕಂಧರಾಯಃ ।
ಗಂಧರ್ವ ಯಕ್ಷ ಸುರಸಿದ್ಧ ಕಿರೀಟಕೋಟಿ ಸಂಘಟ್ಟ ಘೃಷ್ಟ ಚರಣಾಯ ನಮಃ ಶಿವಾಯ ॥
ಟೀಕೂ ॥ ಕಾಂತಾ । ಸ್ತ್ರೀಯರುಗಳ । ಕಚ । ಕೇಶದ । ಪ್ರಚಯ । ಮುಡಿಕಟ್ಟಿನಲ್ಲಿಯ । ಪುಷ್ಪ । ಪುಷ್ಪಂಗಳ ಸುಗಂಧಿ । ಸಾರ ಸುಗಂಧವ ನುಳ್ಳಂಥಾ । × × × ಶಿವಾಯ । ಪರಮೇಶ್ವರಂಗೋಸ್ಕರ । ನಮಃ । ನಮಸ್ಕಾರವೂ ॥ ೧ ॥

ಅಂತ್ಯ : ಇದಂ ಸರ್ವಂ । ಯಿಾ ಸಮಸ್ತವನೂ । ಭಕ್ತಿ ಪ್ರಮಾಣಮಿತಿ । ಭಕ್ತಿ ಪ್ರಮಾಣದಿಂದೀ ಪ್ರಕಾರದಲ್ಲಿ । ಕ್ಷಮಸ್ವ । ಕ್ಷಮಸೂ ॥ ಇತಿ ಮಲ್ಹಣ ಸ್ತೋತ್ರ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಮಲುಹಣನ ಸ್ತುತಿ.

ವಿಶೇಷ : ಪ್ರತಿ ಚೆನ್ನಾಗಿದೆ. ಕೃತಿ ಸಮಗ್ರ. ಇದರೊಂದಿಗೆ 'ಅನಾಮಯ ಸ್ತೋತ್ರದ ಟೀಕು' ಮೊದಲಾದ ಕೃತಿಗಳಿವೆ.

—ಎಂಪಿಎಂ

421

ಕ. ೯೩೭/೯ | ಮಲೆಯ ಮಹಾದೇಶ್ವರನ ಅಷ್ಟಕ | ವೃತ್ತ
೮.೫"×೧.೮" | ? | ?
೨೮—೨೯ ಪತ್ರ | ೮ ಪಂಕ್ತಿ | ೬೨ ಅಕ್ಷರ

ಆದಿ : ಮಲೆಯ ಮಹಾದೇಶ್ವರನ ಅಷ್ಟಕ
ಧರೆಯು ರಥ ಕುಲಗಿರಿಯು ಚಾಪವು ನಾರಿ ಶೇಷ ವಿಶೇಷನೇ
ಶರಧಿಯು ಶರವರ ಫಣಿಹ್ಮರಥಿಕನು ಸೂರ್ಯಚಂದ್ರ ಗಾಲಿಯು

ತುರಗ ನಾಲ್ಕು ವೇದ ತೃಷ್ಟದಿ ತ್ರಿಪುರಗಳ ಸುಟ್ಟುರುಹಿದೇ
ಮರೆಯುದೆನ್ನಯ ಮನದೊಳಿರು ಗುರು ಮಲೆಯ ಮಾದ ಕೃಪಾನಿಧೀ ॥ ೧ ॥

ಅಂತ್ಯ : ನಂಬಿಜಾಮರನೊಲಿದ ದೇವನೆ ತುಂಬರನಾರದಪ್ರೀಯನೇ
ನಂಬಿದೆನು ನಾ ನಿಂಮ್ಮ ಪಾದವ ಶಂಕರ ಶಾಶ್ವತಾ
ಅಂಬಿಕಾ ಸಹ ಗಂಗೆ ಪಾರ್ವತಿ ವಂದಿತಾ ಪ್ರಿಯ ನಿರ್ಭಯಾ
ಅಂಬರಾಕೇಶ ಮಹೇಶ ಶ್ರೀ ಗುರು ಮಲೆಯ ಮಾದ ॥ ೭ ॥ ಶಂಭು

ವಿಷಯ : ಮಲೆಯ ಮಾದೇಶ್ವರ ಸ್ತುತಿ.

ವಿಶೇಷ : ಬರಹ ಸುಂದರ, ಸ್ಫುಟ. ಗ್ರಂಥ ಅಸಮಗ್ರವಾಗಿದೆ. ಶಕಟರೇಫವನ್ನು ಬಳಸಿದೆ. ಇದೇ ಕಟ್ಟಿನಲ್ಲಿ ವಟಪುರ ಸಿದ್ಧಾಂತ ಸ್ತೋತ್ರ, ಗಿರಿಜಾ ಕಲ್ಯಾಣ ದೊಳಗಣ ಪದ ಮೊದಲಾದ ಒಟ್ಟು ಒಂಬತ್ತು ಗ್ರಂಥಗಳಿವೆ.

—ಕೆಆರ್ ಎಸ್

## 422

ಕೆ. ಎ. ೫೬೭/೨೪ ಮಲೆಯ ಮಾದೇಶ್ವರನ ಅಷ್ಟಕ ವೃತ್ತ
೧೨"×೯.೮" ? ?
೧೯೫–೧೯೭ ಪುಟ ೨೪ ಪಂಕ್ತಿ ೨೪ ಅಕ್ಷರ

ಆದಿ : ಶ್ರೀ ಗುರು ವಿರೂಪಾಕ್ಷಯೇ ನಮಃ । ಮಲೆಯ ಮಾದೇಶ್ವರನ ಸ್ತೋತ್ರ ಅಕ ।
ಧರೆಯು ರಥ ಕುಲಗಿರಿಯು ಚಾಪವು ನಾರಿಶೇಷ ವಿಶೇಷನೆ
ಹರಿಯು ಶರ ವರಬ್ರಂಹ್ಮರಾದಿಕನು ಸೂರ್ಯಚಂದ್ರರಗಾಲಿಯಾ
ತುರಗ ನಾಲ್ಕು ವೇದತ್ವಷ್ಟದಿ ತ್ರಿಪುರಗಳ ಸುಟ್ಟುರುಹಿದೆ
ಮರೆಯುದೆನ್ನಯ ಮನದೊಳಿರು ಗುರು ಮಲೆಯ ಮಾದ ಕೃಪಾನಿಧೀ ॥೧॥

ಅಂತ್ಯ : ಶಂಭು ॥
ಅಷ್ಟಕವ ಕೇಳಿರ್ದ ಬಸವ ಲಿಂಗರಾಜನೊಳಿಸಲುತ
ಶ್ರೇಷ್ಟ ಮಾದೇಶ್ವರನ ದ್ರುಷ್ಟದಿವೋದಿ ಕೇಳ್ದರಿನಿಹಪರು
ಯಿಷ್ಟ ಸಿದ್ಧಿಯು ಅಷ್ಟಸಂಪಿಸಕಲ ಸುಖಪದ ನೀವನೆ
ದೃಷ್ಟಿಸೆನ್ನನು ಈಷ್ಟದೇವನೆ ಮಲೆಯ ಮಾದ ಕೃಪಾನಿಧೇ ॥ ೮ ॥
ಅಷ್ಟಕ ಸಂಪೂರ್ಣ

ವಿಷಯ : ಮಲೆಯ ಮಹದೇಶ್ವರನ ಸ್ತುತಿ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಶಿವಶರಣಾಷ್ಟಕಂ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

## 423

ಕ. ಪ. ೪೨೬/೭ | **ಮಲ್ಲಿಕಾಮಾಲೆ** | ಕಂದ

೮.೪" × ೧೨.೮" | ? | ?

೩೦–೩೨ ಪುಟ | ೨೭ ಪಂಕ್ತಿ | ೧೭ ಅಕ್ಷರ

**ಆದಿ :** ಇಂದ್ರ ಚಂದ್ರ ದಿನೇಂದ್ರ ಸರಸಿಜ ಸ್ಕಂದ ಮೊದಲಾದುಪೇಂದ್ರರೂ
ಸಂಧುಂ ನಂದ ಮುನೀಂದ್ರ ನಿರ್ಜರ ಎಂದ ವೇದ್ಯಗಣೇಂದ್ರರೂ
ತಂದ ತಂದ ರುದ್ರಪ್ರಮಥರು ಕುಂದದೋಲೈಸಿ ಕಂಡಿಹಾ
ಸಾಂದ್ರ ಮುಕ್ತಿಪಣೇಂದ್ರ ಕಂಕಣ ಚಂದ್ರಮೌಳಿಯನರ್ಚಿಪೆಂ ॥ ೧ ॥

**ಅಂತ್ಯ:** ಶಂಭು ಶಾಂತನು ಲಿಂಗಪೂಜೆಗೆ ಸಂಭ್ರಮದಿ ಮಲ್ಲಿಕಾಮಾಲೆಯು
ನೆಂಬ ಪುಣ್ಯ ಕಾದಂಬವ್ರತದ ಕುಂಬಿನೀಯೊಳವ ನಾಡದಂ
ಮುಂಬರಿದು ಬರೆನೋದಿ ಪೋಲಿಸಿ ಬೆಂಬಿಡದೆ ಪಾಠಗೆಯ್ಯಲು
ಅಂಬಕತ್ರಿನಯನವರಿಗೆ ಶಂಭರಾರಿಯು ಭಾಗ್ಯಂ ಮಲ್ಲಿಕಾಮಾಲೆ ಸಮಾಪ್ತಂ॥
ಮಲ್ಲಿಕಾಮಾಲೆ ಸಮಾಪ್ತಂ.

**ವಿಷಯ :** ಶಿವಸ್ತುತಿ,

**ವಿಶೇಷ :** ಇದೇ ಪುಸ್ತಕನಲ್ಲಿ ಗಣಸಹಸ್ರನಾಮ, ಹರಗಣಮಾಲೆ, ಸಿದ್ಧೇಶ್ವರನ ಪವಾಡದ ವಚನ, ಕಿನ್ನರಿದೇವರಂ ನಿರೂಪಿಸಿದ ವಚನ. ರಾಜಮಾತಂಗೀ ಮಂತ್ರ, ಗೌರಮ್ಮನ ತ್ರಿವಿಧಿ, ಹರಗಣಮಾಲೆ ಇವೇ ಮೊದಲಾದ ೧೯ ಕೃತಿಗಳಿವೆ.

—ವೈಸಿಬಿ

## 424

ಕ. ಪ. ೫೦೫/೬ | **ಮಲ್ಲಿಕಾಮಾಲೆ** | ವೃತ್ತ

೮.೧"×೧೨.೭" | ? | ?

೮–೯ ಪುಟ | ೨೬ ಪಂಕ್ತಿ | ೧೯ ಅಕ್ಷರ

**ಆದಿ :** ಇಂದ್ರ ಚಂದ್ರವು ನಂದ ಸರಸಿಜಸ್ಕಂದ ಮೊದಲಾದುಪೇಂದ್ರರು
ಸಿಂಧು ನಂದ ಮುನೀಂದ್ರ ನಿರ್ಜರ ವೃಂದ ವೈ... ಗಣೇಂದ್ರರು
ಚಂದ ಚಂದದ ರುದ್ರ ಪ್ರಮಥರು ಕುಂದದೋಲೈಸಿಕೊಂಡಿಹ
ಸಾಂದ್ರಮೂರ್ತಿ ಫಣೀಂದ್ರ ಕಂಕಣ ಚಂದ್ರಮೌಳಿಯನರ್ಚಿಸಿ ॥

**ಅಂತ್ಯ :** ಪೂಗಿ ಫಲದೊಳಗಾಯಿ ಪನ್ನಿಯುನಾದೊಡದ ಕಸ್ತುರಿಯು
...ಳು ಪೊರೆಯೆತ್ತಿ ಕರ್ಪುರ ಯೋಗ ಕೂಡಿದ ಚೂರ್ಣವ
...ಳಿಯ ಶುಭ್ರಪರ್ಣವನನುವಾಗಿ ಸೋಭಿಸಿ ಭಕ್ತಿಯಿಂ
...ತಾಂಬೂಲ ವಸ್ತುವ ನಾಗಭೂಷಣಗಿತ್ತಪೆಂ ॥ ೧೦ ॥
ಭಾವಿಪಡೆ ಬಾಯಿಗ... ....

**ವಿಷಯ :** ಶಿವಸ್ತುತಿ.

**ವಿಶೇಷ :** ಇದೇ ಪುಸ್ತಕದಲ್ಲಿ ಧವಳದ ಹಾಡುಗಳು, ಶಿವಲೋಕಾಸ್ಥಾನ, ಏಕೋತ್ತರ ಶತಸ್ಥಲ, ಷಟ್‌ಸ್ಥಲ ವಚನ, ವಿಶ್ರಾರ್ಪಣ ಎಂಬ ಕೃತಿಗಳಿವೆ.

—ವೈಸಿಬಿ

## 425

| ಕ. ವಿ. ೫೬೮।೫ | ಮಲ್ಲಿಕಾಮಾಲೆ | ಪತ್ರ |
|---|---|---|
| ೧೨"×೯.೮" | ? | ? |
| ೩೯–೪೧ ಪುಟ | ೨೪ ಪಂಕ್ತಿ | ೧೯ ಅಕ್ಷರ |

**ಆದಿ :** ಶ್ರೀಗಣಾಧಿಪತಯೇ ನಮಃ ಮಲ್ಲಿಕಾಮಾಲೆ
ಯಿಂದ್ರ ಚಂದ್ರ ದಿನೇಂದ್ರ ಸರಸಿಜ ಸ್ಕಂದ ಮೊದಲಾದುಪೇಂದ್ರರೂ
ಸಿಂಧು ನಂದ ಮುನಿಂದ್ರ ನಿರ್ಜರ ಉಪೇಂದ್ರ ವೇದ್ಯಗಣೇಂದ್ರರೂ
ತಂದ ......ಂದದ ರುದ್ರ ಪ್ರಮಥರೂ ಕುಂದರೋಲೈಸಿಕೊಂಡಿಹಾ
ಸಾಂದ್ರಮುಕ್ತಿ ಫಣೀಂದ್ರ ಕಂಕಣ ಚಂದ್ರಮೌಳಿಯನರ್ಚಿಪೆಂ ॥ ೧ ॥

**ಅಂತ್ಯ :** ಶಂಭು ಶಾಂತನ... ಪೂಜೆಗೆ ಸಂಭ್ರಮದಿ ಮಲ್ಲಿಕಮಾಲೆಯಾ
ನೆಂಬ ಪುಣ್ಯಕಾದಂಬಪ್ರತವ ಕುಂಭಿನಿಯೊಳಾವನಾದೊಡಂ
ಮುಂಬರಿದು ಒರದೊ ಸಿ ಬೆಂಬಿಡಡೆ ಪಾಠಗೆಯಲೂಂ
ಅಂಬಿಕಾತ್ರಯನಿವನವರಿಗೆ ಜಂಭರಾರಿಯ ಭಗ್ಯಮಂ
ಮಲ್ಲಿಕಾಮಾಲೆ ಸಮಾಪ್ತಂ ಶ್ರೀ.

**ವಿಷಯ :** ಈಶ್ವರನ ಸ್ತುತಿ.

**ವಿಶೇಷ :** ಸಮಗ್ರ, ಪ್ರತಿ ಚೆನ್ನಾಗಿದೆ. ತಪ್ಪುಗಳು ಬಹಳ. ಇದೇ ಪುಸ್ತಕದಲ್ಲಿ ಶಿವ ಶರಣಾಷ್ಟಕಂ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

## 426

ಕ. ೯೩೨/೧ ಮಲ್ಲಿಕಾರ್ಜುನ ಶತಕ ವೃತ್ತ
೧೧" × ೧.೨" ರಾಮಚಂದ್ರಕವಿ ಸು. ೧೭೦೦
೧-೨೮ ಪತ್ರ ೯ ಪಂಕ್ತಿ ೩೨ ಅಕ್ಷರ

**ಆದಿ :** ಮಲ್ಲಿಕಾರ್ಜುನ ಶತಕಕ್ಕೆ ನಿರ್ವಿಘ್ನಮಸ್ತು.
ಶ್ರೀಪತಿ ವಾಕ್ಪತಿ ಪ್ರಮುಖ ದೇವತೆಗಳ್ ಬಹುವೇದಸಾರ ವಾ
ಗ್ರೂಪಗಳಿಂದ ಕಾಣದಿಹ ಶೈವವಾಹತ್ವಮನಲ್ಪಬುದ್ಧಿಯಿಂ
ರೂಪಿಸಲಾಂ ಸಮರ್ಥನೆ ಕೃತಾರ್ಥನದೆಂತಹೆನಲ್ಲದಿರ್ಕೆ ಚಿ
ದ್ರೂಪನ ವಾಚ್ಯನಂ ನುತಿಪೆನೈ ಶಿವಪರ್ವತ ಮಲ್ಲಿಕಾರ್ಜುನಾ ॥ ೧ ॥

**ಅಂತ್ಯ :** ಪ್ರತಿ ನಿರವದ್ಯ ಪದ್ಯಮಯ ಸಂಸ್ಕೃತ ಕನ್ನಡ ಶಬ್ದಸೂಕ್ತಿಯಿಂ
ದತಿಶಯ ಮಲ್ಲಿಕಾರ್ಜುನ ಶಿವಸ್ತುತಿಯುರ್ ಶತಕಪ್ರಬಂಧಮಂ
ಕ್ಷಿತಿಸುರತಂ ಮಯಾರ್ಯಸುತನಿಂ ಶಿವ ನಿತ್ಯಕಳಾನ್ವಿತ ಪುಷ್ಪಮಾಲೆಯಂ
ಮತಿಯುಂತ ರಾಮಚಂದ್ರ ಕವಿಯಿಂದ ಶಿವಾಂಘ್ರಿಸಮರ್ಪಣಂ ಕೃತಂ ॥ ೧೦೩ ॥

...ಯಿಾ ಮಲ್ಲಿಕಾರ್ಜುನ ಶತಕಮಂ ಸಮಾಪ್ತಂ.

**ವಿಷಯ :** ಮಲ್ಲಿಕಾರ್ಜುನನ ಸ್ತುತಿ.

**ವಿಶೇಷ :** ಓಲೆಗಳು ಹುಳು ತಿಂದು ಅಲ್ಲಲ್ಲಿ ರಂಧ್ರಗಳಾಗಿವೆ. ಇದರೊಡನೆ 'ಪಾರ್ವತಿಯ ಸೋಬಾನೆ' ಎಂಬ ಮತ್ತೊಂದು ಕೃತಿಯಿದೆ.

—ಬಿಎಸ್‌ಎಸ್

## 427

ಕ. ಎ. ೫೦೨।೧ ಮಲ್ಲಿಕಾರ್ಜುನ ಶತಕ ವೃತ್ತ
೯"×೧೦.೪" ರಾಮಚಂದ್ರಕವಿ ಸು. ೧೭೦೦
೧-೨೪ ಪುಟ ೨೦ ಪಂಕ್ತಿ ೨೨ ಅಕ್ಷರ

**ಆದಿ :** ಮಲ್ಲಿಕಾರ್ಜುನ ಶತಕ ॥ × × ×
ಶ್ರೀಪತಿ ವಾಕ್ಪತಿ ಪ್ರಮುಖದೇವತೆಗಳ್ ಬಹು ವೇದ ಸಾರ ವಾ
ಗ್ರೂಪಗಳಿಂದ ಕಾಣದಿಹ ಶೈವ ಮಹತ್ವಮನಲ್ಪಬುದ್ಧಿಯಿಂ
ರೂಪಿಸಲಾಂ ಸಮರ್ಥನೆ ಕೃತಾರ್ಥನದೆಂತಹೆನಲ್ಲದಿರ್ಕೆ ಚಿ
ದ್ರೂಪನ ವಾಚ್ಯನಂ ನುತಿಪೆನೈ ಶಿವಪರ್ವತ ಮಲ್ಲಿಕಾರ್ಜುನಾ ॥ ೧ ॥

**ಅಂತ್ಯ :** ಪ್ರತಿನಿರವದ್ಯ ಪದ್ಯಮಯ ಸಂಸ್ಕೃತ ಕನ್ನಡ ಶಬ್ದಸೂಕ್ತಿಯಿಂ
ದತಿಶಯ ಮಲ್ಲಿಕಾರ್ಜುನ ಶಿವಸ್ತುತಿಯಂ ಶತಕಪ್ರಬಂಧಮಂ

ಕ್ಷಿತಿಸುರ ತಮ್ಮಯಿಶಾಯಯ್ಯಸುತನಿಂ ಶಿವ ನಿತ್ಯಕಳಾನ್ವಿತ ಪುಷ್ಪವಾಲೆಯಿಂ
ಮತಿಯುತ ರಾಮಚಂದ್ರಕವಿಯಿಂದ ಶಿವಾಂಘ್ರಿಗೆಮರ್ಪಣಾಂಕೃತಂ॥೧೦೩॥

× × ×

ಲಿಂಗಪ್ಪಯ್ಯನವರಿಗೆ ವಡ್ಡೆಥಾಳಿ ತಿರುಮಲದೇವರು ಬರದ ಮಲ್ಲಿಕಾರ್ಜುನ
ಶತಕ ॥ ಬರಶಿದಾತಗೆ ಆಯೀಶ್ವರ್ಯಮಸ್ತು

ವಿಷಯ : ಮಲ್ಲಿಕಾರ್ಜುನನ ಸ್ತುತಿ.

ವಿಶೇಷ : ಇದರೊಂದಿಗೆ ಕೆಲವು ಹಾಡುಗಳಿರುವ ಪುಸ್ತಕವಿದೆ.

—ವೈಸಿಬಿ

## 428

ಕೆ. ಎ. ೫೩೪ | ಮಲ್ಲಿಕಾರ್ಜುನ ಶತಕ | ವೃತ್ತ
೮.೯"×೧೦.೫" | ರಾಮಚಂದ್ರಕವಿ | ಸು. ೧೭೦೦
೧–೨೨ ಪುಟ | ೨೦ ಪಂಕ್ತಿ | ೨೨ ಅಕ್ಷರ

ಆದಿ : ಶ್ರೀ ರಂಗಪ್ಪನ ಪಾದಾರವಿಂದವೇ ಗತಿ ॥ ಹೇರಂಬಾಯ ನಮಃ ॥
ಮಲ್ಲಿಕಾರ್ಜುನನ ಶತಕಕ್ಕೆ ನಿರ್ವಿಘ್ನಮಸ್ತು ॥

ವೃ ॥ ಶ್ರೀಪತಿ ವಾಕ್ಪತಿ ಪ್ರಮುಖ ದೇವತೆಗಳ್ ಬಹುವೇದ ಸಾರ ವಾ
ಗ್ರೂಪಗಳಿಂದ ಕಾಣದಿಹ ಶೈವ ಮಹತ್ವಮನಲ್ಪಬುದ್ಧಿಯಿಂ
ರೂಪಿಸಲಾಂ ಸಮರ್ಥನೆ ಕೃತಾರ್ಥನದೆಂತಹೆನಲ್ಲದಿರ್ಕೆ ಚಿ
ದ್ರೂಪನ ವಾಚ್ಯನಂ ನುತಿಪೆನೈ ಶಿವಪರ್ವತ ಮಲ್ಲಿಕಾರ್ಜುನಾ ॥ ೧ ॥

ಅಂತ್ಯ : ಪ್ರತಿನಿರವದ್ಯ ಪದ್ಯಮಯ ಸಂಸ್ಕೃತ ಕನ್ನಡ ಶಬ್ದಸೂಕ್ತಿಯಿಂ
ದತಿಶಯ ಮಲ್ಲಿಕಾರ್ಜುನ ಶಿವಸ್ತುತಿಯಂನ್ ಶತಕಪ್ರಬಂಧಮಂ
ಕ್ಷಿತಿಸುರತಂ ಮಯಶಾರ್ಯಸುತನಿಂ ಶಿವನಿತ್ಯಕಳಾನ್ವಿತ ಪುಷ್ಪಮಾಲೆಯಿಂ
ಮತಿಯುತ ರಾಮಚಂದ್ರಕವಿಯಿಂದ ಶಿವಾಂಘ್ರಿ ಸಮರ್ಪಣಂ ಕೃತಂ
॥ ೧೦೩ ॥

ಸಮಾಪ್ತಂ ಶ್ರೀ.
ಕರಕೃತಮಪರಾಧಂಕ್ಷಂತುಮರ್ಹಂತಿ ಸಂತಃ ॥
ಈ ಮಲ್ಲಿಕಾರ್ಜುನ ಶತಕಮ ಲಿಂಗಪ್ಪಯ್ಯನವರಿಗೆ ವಡೆಥಾ(ಳಿ)
ತಿರುಮಲದೇವರು ಬರದ ಮಲ್ಲಿಕಾರ್ಜುನ ಶತಕ ॥ ಬರಸಿದಾತಗೆ ಐಶ್ವರ್ಯ
ಮನೋಬೀಷ್ಟಸಿದ್ಧಿಯಕ್ಕೆ.

ವಿಷಯ : ಮಲ್ಲಿಕಾರ್ಜುನನ ಸ್ತುತಿ.

ವಿಶೇಷ : ಸಮಗ್ರ. ಪ್ರತಿ ಉತ್ತಮ ಸ್ಥಿತಿಯಲ್ಲಿದೆ. 1944–45ರಲ್ಲಿ ಪ್ರತಿ ಮಾಡಲಾಗಿದೆ.

—ವೈಸಿಬಿ

429

ಕ. ೧೪೯೬ | ಮಲ್ಲಿನಾಥ ಪುರಾಣ | ಚಂಪು
೧೩.೩" × ೨.೨" | ನಾಗಚಂದ್ರ | ಸು. ೧೧೦೦
೧–೧೧೩ ಪತ್ರ | ೯ ಪಂಕ್ತಿ | ೬೪ ಅಕ್ಷರ

ಆದಿ : ಶ್ರೀಪಾದಂ ಬಾಲಚಂದ್ರೋಜ್ವಲ ತರ ಸಮನೋವರ್ಷ ....................
......................................................................
...............................................................ಷಾ
ವ್ಯಾಪಾರೋದಾರನಾದಂ ಕುಡುಗೆವಂಗೆ ಸಂಖಾವಾಪ್ತಿಯಂ ಮಲ್ಲಿನಾಥಂ ॥ ೧ ॥

× × ×

ಭರತಮಹೀಶ್ವರಂಗೆ ಮಗಧೇಶ್ವರ ಮಂಡಲಿಕಂಗೆ ತಾರ ಭೂ
ಧರ ವಿಪುಲಾದ್ರಿಯೊಳ್ ವೃಷಭಸೇನಗಣಾಗ್ರಣಿ ಗೌತಮೋತ್ತಮಂ
ಪುರ ಜಿನ ವರ್ಧಮಾನ ಗುರುಸಂನಿಧಿಯೊಳ್ತಿಳಿವಂತು ಪೇಳ್ದುದಂ
ವಿರಚಿಸುವೆಂ ಮನಂ ಬಯಸೆ ಮಲ್ಲಿಜಿನೇಂದ್ರ ಮಹಾಪ್ರಬಂಧಮಂ ॥

ಅಂತ್ಯ : ಕ್ಷಿತಿಭೃನ್ಮೂರ್ಧಾಭಿಷಿಕ್ತಂ ಬಲವೆನಿಸಿದ ಸಮ್ಮೇದ ಶೈಲೇಂದ್ರದೊಳ್ ಕ
ಲ್ಪತರುಸ್ತೋಮಂಗಳಿಂ ಮಂಡಳಿಸಿದ ಕನಕಾಂಭೋಜಷಂಡಂಗಳಿಂ ಮಂ
ಡಿತಮಾದತ್ಯಂತ ಶುದ್ಧ ಸ್ಫಟಿಕ ಮಣಿಶಿಲಾಪಟ್ಟದೊಳ್ಮಲ್ಲಿನಾಥಂ
ಪ್ರತಿಮಾಯೋಗಂ ಗುಣಭವನ ಮಣಿಸ್ತಂಭಮಿಂರ್ಪಂತಿರ್ದಂ ॥
ಅಂತಿರ್ದು ಸೂಕ್ಷ್ಮಶರೀರಯೋಗದಿಂ ಸೂ...ಘಾತಿಯೆಂಬ ಪರಮಶುಕ್ಲ
ಧ್ಯಾನದೊಳ್ನೆಲಸಿ ಲಘುಕರ್ಮ...ರಿಪಾಚನಶಕ್ತಿಪ್ರಾಪ್ತಿನಿಮಿತ್ತಂದಂ

ವಿಷಯ : ಜಿನತೀರ್ಥಂಕರ ಮಲ್ಲಿನಾಥನ ಚರಿತ್ರೆ.

ವಿಶೇಷ : ಅಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

430

ಕ. ೧೩೧೬ | ಮಲ್ಲೇಶ ಚಾರಿತ್ರ | ವಾರ್ಧಕ ಷಟ್ಪದಿ
೭.೮"×೧.೭" | ? | ?
೧-೭೦ ಪತ್ರ | ೮ ಪಂಕ್ತಿ | ೩೦ ಅಕ್ಷರ

ಆದಿ : ಶ್ರೀ ವೀರಭದ್ರಾಯ ನಮಃ ॥ × × ×

ಕಂ ॥ ಶ್ರೀ ಗುರುವರ ಕರುಣಾಭಿಯಿಂ
ಶ್ರೀ ಗುರುಭವ ಶಿವಿುರಭಾನಂ ಶ್ರೀ ಗುರುಲಿಂಗಂ
ಶ್ರೀ ಗುರುವರದಾಭಯುಕರ
ಶ್ರೀ ಗುರುವರ ಸಿದ್ಧಮಲ್ಲಿಕಾರ್ಜುನ ಪ್ರಭುವೇ ॥ ೧ ॥

**ಅಂತ್ಯ :** ಗುರು ಚನ್ನಮಲ್ಲೇಶ ಪಾರ್ವತೀಶ್ವರನ ಕಥ
ಚರಿತೆ ನಾಂದ್ಯಗಳ ಬರದೋದಿ ಪಠಿಸಿದವರ್ಗೆ
ದೊರಕುವುದು ವಿಶಿಷ್ಟಾರ್ಥ ಸಿದ್ಧಿ ಸಿದ್ಧಿಗಂಭವ ದುರಿತ ಕಂಟಕವೊಳಿವುದೂ
ಪರಮ ಪಂಚಾಕ್ಷ ಸ್ಮರಿಸುಸುತ್ತಲಾವಾಗ
...ಲಿಂಗ ಜಂಗಮದ ಪಾದತೀರ್ಥ ವ್ರತವ
ನೆರದು ರಕ್ಷಿಸುವ ಮ ..ಗುರು ಚೆನ್ನಮಲ್ಲೇಶಾ ಪಾರ್ವತೀಶಾ ॥ ೭೧ ॥
ಮಲ್ಲೇಶನ ಚಾರಿತ್ರ ಸಂಪೂರ್ಣ ಮಂಗಳ ಮಹಾ ಶ್ರೀ.
ಶಾಲಿವಾಹನ ಶಕ ವರುಷ ೧೬೭೭ ಮೇಳವೆ ಯುವ ಸಂವತ್ಸರದಾ ಕಾರ್ತೀಕ ಶು. ೧೪ಲ್ಲೂ ಶನಿವಾರದಾ ತಾಸು ೫ಕ್ಕೆ ಸಂಪೂರ್ಣವಾಗಿ ಮುಗಿದಿತ್ತು ಯಿದನೂ ಶೂಲ್ಪುಪುರದಾ ಚಿಕ್ಕವೀರ ದೇವರ ಶಿಷ್ಯರಾದಾ ಚೌಡಗಾವಿಯ ಹಂಜಿಗೆ ಬೊಮ್ಮಲಿಂಗದೇವರ ಪುತ್ರನಾದ ಕುಂಭನೆಯಲ್ಲಿಹ ಹಂಜಿಗಯ್ಯ ನವರ ರುದ್ರಾಮುನಿದೇವರು ಓದಿಕೊಂಬುದಕ್ಕೆ ಬರಕೊಂಡ ಮಲ್ಲೇಶ ನಾಂದ್ಯಕ್ಕೆ ಮಂಗಳ ಮಹಾ ಶ್ರೀ.

**ವಿಷಯ :** ಗುರು ಮಲ್ಲಿಕಾರ್ಜುನನ ಕಥೆ.

**ವಿಶೇಷ :** ಪ್ರತಿಯೊಂದು ಪತ್ರದ ಅಂಚು ಮುರಿದಿದೆ. ಇದೇ ಕಟ್ಟಿನಲ್ಲಿ ಸಂಸ್ಕೃತ ಶ್ಲೋಕವಿರುವ ಎರಡು ಪತ್ರಗಳಿವೆ.

—ವೈಸಿಬಿ

## 431

ಕ. ೧೧೩೯/೩೫ ಮಲ್ಲೇಶನ ತಾರಾವಳಿ ಹಾಡು
೭"×೨" ? ?
೧೫–೧೩೦ ಪತ್ರ ೯ ಪಂಕ್ತಿ ೩೦ ಅಕ್ಷರ

**ಆದಿ :** ಶ್ರೀ ಗುರು ಬಸವ ಲಿಂಗಾಯ ನಮಃ ಮಲ್ಲೇಶನ ತಾರಾವಳಿ ॥ ಪಲ್ಲ ॥
ಮಗಳ ತಾ ಕೊಡಹುದೆ ಮನ್ಮಥವೈರಿಗೆ
ಜಗದೊಳು ನಗುವರನರಿಯದೆ ಗಿರಿರಾಜ
ಮಗಳಾ ತಾ ಕೊಡಬಹುದೆ ಮಲ್ಲೇಶಗೆ ॥

ಪದ ॥ ಬಲು ಮುಪ್ಪ ಬಡವ ಬಾಂದುಗಳಿಲ್ಲ ನೋಡಲು
ಕುಲ ಕಾಣಬಾರದು ಕುರುಹನಾರರಿಯರು
ವಲಿದು ಹೆತ್ತವರೆಲ್ಲ ವಂದೂರೊಳಿರಲೊಲ್ಲ
ಮಲಮಕ್ಕಳಾತಂಗೆ ಮಾಡುಂಬದೊಂದೆತ್ತು
ಕೆಲಸಕ್ಕೆ ಬಾರದು ಕೇಳನೊಬ್ಬರ ಮಾತ
ಹಲವು × × ×
ಸಲೆ ಹದಿನೆಂಟು ಜಾತಿಯೊಳೊಂದಾಗಿರುವ ದೇವಾನೆ ॥ ೧ ॥

ಅಂತ್ಯ : ಕಡುಮೂರ್ಖನವನೊಬ್ಬ ಕಾರ್ಯಕಾರಣದಿಂದ
ಯಡೆಯಶಾಂತ್ರದಲಿ ಲಿಂಗವೆನೆಂದು ತಪ್ಪಿದ
ವಡೆಯಂಗೆ ಶರಣೆಂನ ವಲಿದು ಲೇಸಿಗೆ ಮುಂನ
× × ×
ಕವಿ ಚೆಂನನೊಡೆಯಾ ಶ್ರೀಗಿರಿಯ ನಿವಾಸ ಮಲ್ಲೇಸಗೆ ॥ ೫ ॥
ಮಲ್ಲೇಶನಕಾ ॥

ವಿಷಯ : ಮಲ್ಲೇಶನ ಕಥೆ.

ವಿಶೇಷ : ಈ ಕೃತಿಯೊಂದಿಗೆ 'ಗಣಂಗಳ ತಾರಾವಳಿ' ಮೊದಲಾದ ಇನ್ನೂ ೩೬ ಗ್ರಂಥಗಳಿವೆ. ಅವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳು.

—ಎಸ್‌ಬಿ

## 432

ಕೆ. ಎ. ೩೮೧ | ಮಲ್ಲೇಶ್ವರ ಸ್ತೋತ್ರ | ವಾರ್ಧಕಷಟ್ಪದಿ
೧೦.೭"×೯.೫" | ? | ?
೧–೨೪ ಪುಟ | ೨೦ ಪಂಕ್ತಿ | ೧೮ ಅಕ್ಷರ

ಆದಿ : ಮಲ್ಲೇಶ್ವರ ಸ್ತೋತ್ರಂ
ವಾರ್ಧಿ ಕಷಟ್ಪದಿ ॥
ಶ್ರೀವರಂ ಅಜ ಇಂದ್ರ ಪ್ರಮಥಗಣ ಮುಖ್ಯಮಹಾ
ದೇವಕುಲ ಮುಕುಟಮಣಿಗಣಕಿರಣಪಾದರಾ
ಜೀವ ಶಂಕರ ಶ್ರೀ ಗಿರಿಜೆಯರಸ ಭಕ್ತಜನರಘವಿಪಿನದಾವಾನಲಾ
ಆವಗಂನೆನಮಂನತ ಬಂದು ಜನವೇ ವಿಮಲ
ದೇವಗಂಪೆಯು ಪುತ್ತ ಭವನೆ ನಿಮ್ಮಯ ಗಣ ಕೃ
ಪಾವಲೋಕನದಿ ಕಡೆಹೊಯಿಸೆನ್ನ ಗುರು ಚೆನ್ನಮಲ್ಲೇಶ ಪಾರ್ವತೀಶಾ ॥೧॥

ಅಂತ್ಯ : ಮುನ್ನುಸಿವನೆನ್ನುತ ನಿಮ್ಮನರಿಯಂದಹ ಕಾರಣದಿ
ಬಿನ್ನಸಿದಿ ಬಾಯು ಬೀಗವು ಹಗ್ಗದಿಂ ತೂಗಿ

ಕನ್ನಗಳ್ಳರ ಕೊಲುವವೊಲು ಶಿವದೂಷಕರ ಕನ್ನಿಯಂದದಿ ಸುಳಿಸಿ ।
ಉನ್ನತದ ಅರ್ಥಾಭಿಮಾನಗಳ ಕಳಕೊಂಡು
ಬಿನ್ನಬಡಿಸುವ ಭವಸುಖಕು ದೈವವ ಜರಿದು
ಓನ್ನಮ ಶಿವಾಯ ಎಂಬ ಮಂತ್ರವಂ ಪಿಡಿದು ಸಾರಿದೆಂ ಮಲ್ಲೇಶ
ಪಾರ್ವತೀಶಾ ॥ ೭೦ ॥

ಮಲ್ಲೇಶಸ್ತೋತ್ರಂ ಸಮಾಪ್ತಂ.

ವಿಷಯ : ವೀರಶೈವತತ್ವದ ವಿವರಣೆ.

ವಿಶೇಷ : ಇದನ್ನು ಮದರಾಸು ಪ್ರಾಚ್ಯಕೋಶಾಗಾರದಲ್ಲಿ ಶ್ರೀ ಟಿ. ವಿ. ರಾಮಸ್ವಾಮಿ ಯವರು ಪ್ರತಿಮಾಡಿದ್ದಾರೆ.

—ಬಿಎಸ್ಎಸ್

## 433

| ಕ. ಎ. ೫೪೭/೩ | ಮಲ್ಲೇಶ್ವರ ಸ್ತೋತ್ರ | ವಾರ್ಧಕಷಟ್ಪದಿ |
|---|---|---|
| ೧೨.೩″ × ೯.೮″ | ? | ? |
| ೩೫-೫೨ ಪುಟ | ೨೪ ಪಂಕ್ತಿ | ೨೩ ಅಕ್ಷರ |

ಆದಿ : ಮಲ್ಲೇಶನ ಸ್ತೋತ್ರ ಬರೆಯುವದಕ್ಕೆ ಶುಭಮಸ್ತು ॥ ವಾರ್ಧಿಕ ಷಟ್ಪದಿ.
ಶ್ರೀವರಂ ಅಜ ಯಿಂದ್ರ ಪ್ರಥಮ ಗಣಮುಖ್ಯವಹ
ದೇವಕುಲ ಮಕುಟಮಣಿಗಣಕಿರಣಪಾದ ರಾ
ಜೀವ ಶಂಕರ ಶ್ರೀಗಿರಿಜೆಯರಸ ಭಕ್ತಜನರಘವಿಪಿನ ದಾವನವನಲಾ
ಆವಗನ್ನೆನವನತ ಬಂಧುಜನವೆ ವಿಮಲ
ದೇವಗಂಗೆಯಂ ಪೊತ್ತ ಭವನೆ ನಿಮ್ಮಯ ಗುಣ ಕೃ
ಪಾವಲೋಕನದಿ ಕಡೆಹಾಯಿಸೆನ್ನ ಗುರು ಚೆನ್ನಮಲ್ಲೇಶ
ಪಾರ್ವತೀಶಾ ॥ ೧ ॥

ಅಂತ್ಯ : ಮುನ್ನ ಶಿವನೇ ನಿಮ್ಮನರಿಯದಿಹ ಕಾರಣದಿ
ಬೆನ್ನ ಪಿಡಿ ಬಾಯಂಬೀಗವು ಹಗ್ಗದಿಂ ತೂಗಿ
ಕನ್ನಗಳ್ಳರ ಕೊಲುವವೋಲು ಶಿವದೂಷಕರ ಕುನ್ನಿಯಂದದಿ ಬಗಳಿಸಿ
ಉನ್ನತದ ಅರ್ಥಾಭಿಮಾನಿಗಳ ಕಳಕೊಂಡು
ಬನ್ನಬಡಿಸುವ ಭಣಗಂ ಕಾಕುದೈವವ ಜರಿದು
ಓಂ ನಮಃ ಶಿವಾಯಯೆಂಬ ಮಂತ್ರವಂ ಪಿಡಿದಂ ಸಾರಿದೆಂ ಮಲ್ಲೇಶ
ಪಾರ್ವತೀಶಾ ॥ ೭೧ ॥

ವಿಷಯ : ಶಿವಮಹತ್ವ.

ವಿಶೇಷ : ಸಮಗ್ರ (?). ಬರಹ ಚೆನ್ನಾಗಿದೆ. ಪ್ರತಿಯೊಂದು ಪದ್ಯವೂ 'ಮಲ್ಲೇಶ ಪಾರ್ವತೀಶಾ' ಎಂಬ ಅಂಕಿತದಿಂದ ಮುಗಿಯುತ್ತದೆ. ಇದೇ ಪುಸ್ತಕದಲ್ಲಿ ಜಿನವಚನಾಮೃತಶರಧಿ, ವಿರೂಪಾಕ್ಷಸ್ತೋತ್ರ, ಸುಭಾಷಿತ ಗ್ರಂಥಗಳೂ ಇವೆ.

—ಕೆಆರ್ ಎಸ್

## 434

ಕೆ. ೧೫೪೩/೧೭ ಮಹಂತಯ್ಯನವರ ನಾಂದ್ಯ ಭಾಮಿನೀ ಷಟ್ಪದಿ
೧೧."೨×೧.೯" ಮಹಂತಸ್ವಾಮಿ ?
೫೧-೫೩ ಪತ್ರ ೯ ಪಂಕ್ತಿ ೫೬ ಅಕ್ಷರ

ಆದಿ : ಮಹಂತೈಯ್ಯನವರು ಮಾಡಿದ ನಾಂದ್ಯ ॥ ಭಾಮಿನಿ ॥
ಶ್ರೀಮದನುಪಮ ಸತ್ಯನಿರ್ಮ್ಮಲ
ಸೋಮಶೇಖರ ಕಾಮಸಂಹ್ಹರ
ಶ್ವಾಮಿ ಶಾಷ್ವತ ಶರಣಜನ ಸತ್ಪ್ರೇಮ ಗುಣಧಾಮಾ
ಹೇಮಗಿರಿ ನಿಜವಾಸ ಶಂಕರ
ನಾಮ ಕರುಣಸಾರ ಕೋವಿದ
ರಾಮಣೀಯಕ ಶಾಂತವಿರಚಿಪಂಗ ಪಾಲಿಪುದು ॥ ೧ ॥

ಅಂತ್ಯ : ಯಿಂತು ನಿಂಮಯ ಮಹಿಮೆಯನು
ಸಂತಸಂ ಬರದೋದಿದವರುಂ
ಚಿಂತಿಯುಳಿದುಂನತದ ಮುಕ್ತಿಯನೆಯ್ದಿ ನಿಜಪಡರುಂ
ಅಂತುಮಲ್ಲದೆ ಸಕಲಸಿದ್ಧಿಯು
ಸಂತಸದೊಳೆಯಿತಂದು ಪಡವರು
ಶಾಂತ ಮುರಿಗೆಯ ಶಾಂತವೀರ ನಿಜೇಶ ರಕ್ಷಿಪುದು ॥ ೨೫ ॥

ವಿಷಯ : ಸ್ತುತಿ (ನಾಂದ್ಯದ ಪದ್ಯಗಳು).

ವಿಶೇಷ : ಇದರಲ್ಲಿ ೨೫ ಪದ್ಯಗಳಿದ್ದು ಶಾಂತಿವೀರೇಶ ಎಂಬ ಅಂಕಿತವಿದೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ನೀಲಾಂಬಿಕಾ ಲಲಿತಸ್ತೋತ್ರ, ಬಸವೇಶ್ವರ ಪುರಾಣದ ನಾಂದ್ಯ ಮೊದಲಾಗಿ ೩೧ ಕೃತಿಗಳಿವೆ.

—ಕೆಆರ್ ಎಸ್

## 435

ಕ. ೯೯೪/೨೨ — **ಮಹತ್ವದ ತಿಲಕ** — ವಾರ್ಧಕ ಷಟ್ಪದಿ

೮" × ೨.೨" — ? — ?

೧೨೭–೧೨೮ ಪತ್ರ — ೧೧ ಪಂಕ್ತಿ — ೪೦ ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ಮಹತ್ವದ ತಿಲಕ ॥ ರಾಗ ವಾರ್ಧಿಕ ॥
ಶ್ರೀ ವೇದಜಹರಿ ಪುರಂದರ ಮುಖ್ಯ ಸುಮನಸು
ಸ್ತೋಮ ನವರತ್ನ ವೇಕುಟಾಂಶು ಮಂಡಿತಪಾದ
ಸೋಮಶೇಕರನಧಿಕನೆಂದರಿದು ದೂಷಿಸುವ ವಾದಿ ನೀ ಕೇಳು ಪೇಳ್ವೆ ॥
ಭೃಗುಮುನಿಯ ಶಾಪವಿಡಿದಚ್ಯುತನು ದಶಭವದೊ
ಳೊಗೆದು ಲಿಂಗಾರ್ಚನೆಯ ಮಾಡಿ ದುರಿತವ ಗೆಲಿದ
ಬಗೆಗೆ ರವಿ ಕೂರ್ಮಪೌರಾಣವಿರೆ ಸಾಕ್ಷಿಯದುನಲ್ಲದೆಯುಂ ಕೇಳು ನಿಂಮ
ಖಗಗಮನನಂ ಕಾಣೆ ಶನಿತ್ರಯೋದಸೆಯೊಳಗೆ
ನೆಗಳ್ದ ಮುಂನಿನ ತಮ್ಮ ದ್ವಾದಸಾಬ್ದದ ಪುಣ್ಯ
ವಿಗತವೆಂಬುದಕೆ ಸ್ಕಂದ ಲೈಂಗ್ಯ ಬ್ರಹ್ಮಾಂಡವಿರಲಿಕೀ ದ್ವೇಷ ನಿನಗೆ ॥ ೧ ॥

**ಅಂತ್ಯ :** ಯಿಂತಖಿಳ ಶಾಸ್ತ್ರೋಕ್ತಸಾಕ್ಷಿಸಂನ್ನುತವಾಗಿ
ಕಂತುಪಿತ ಕೃತಕಳತ್ರಯನಧಿಕವೆಂದರಿದು
ಸಂತತ ಮಹಾತಿಲಕದೊಳೊಂದು ಪದಗೇಳ್ದಡೆ ಸರ್ವನಿಧಿಯಹುದು
ಯಿಂತೆನಲು ತ್ರೈದಸಪದಂಗಳಿವನೆಲ್ಲವಂ
ಸಂತಸದಿ ಬರದೋದಿ ಕೇಳಿಯುತ್ಪೈಸಿದರೆ
ಅಂತದರ ಫಲವರಿದು ಕರುಣಸಿಧಿ ಸೋಮಶೇಖರ ಬಿಡದೆ ಪೊರೆವನವರಂ
॥ ೧೩ ॥

ಶ್ರೀ ಶ್ರೀ.

**ವಿಷಯ :** ಶಿವಮಾಹಾತ್ಮ್ಯ.

**ವಿಶೇಷ :** ಇದೇ ಕಟ್ಟಿನಲ್ಲಿ ಬಸವ ತ್ರಿವಿಧಿಯೇ ಮೊದಲಾದ ೨೭ ಕೃತಿಗಳಿವೆ.

—ಜಿಜಿಎಂ

## 436

ಕ. ೧೭೭೦ — **ಮಹದೇಶ್ವರನ ಸಾಂಗತ್ಯ** — ಸಾಂಗತ್ಯ

೭.೨" × ೧.೩" — ಗುರುಸಿದ್ಧಪ್ಪ — ಸು. ೧೭೫೦

೧–೭೩ ಪತ್ರ — ೪ ಪಂಕ್ತಿ — ೨೬ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ ॥ ಶ್ರೀ ಶಾರದಾಂಬಾ......

ಶ್ರೀ ಮಾದೇಶ್ವರಸ್ವಾಮಿ ಶಿವಸಂಗೀತ ಬರೆಯುವದಕ್ಕೆ ಆಯು ... ...
ಐಶ್ವರ್ಯಾಭಿವೃದ್ಧಿರಸ್ತು ॥

ರಾಗ ॥ ......ವರ್ಸ್ ॥ ಶುಭಮಸ್ತು .....
ಶ್ರೀ ಗುರು ...... ಶಾನೇ
ಸಾಗರಶಯನನಮಿತಾನೇ
ಯೋಗೀಶ್ವರ ಜನ ...
..... ಕೊಡೆನಗೆ ಮತಿಗಳನೂ ।

ಅಂತ್ಯ : ಈ ಶಿವಸಂಗೀತವ ಕೇಳಿದ ಜನರಿಗೆ
ಪಾಪನಾಶನ ನಿಮಿಷದಲಿ
ಈಶನು ಕೈಲಾಸಪದವಿಯನೀವ
ವಿಲಾಸದ ಮೂರನೆ ಸಂಧಿ ಪೂರಾಯಿಶಾ ॥ ೧೨೩ ॥
ಅಂತು ಸಂಧಿ ೩ಕ್ಕಂ ಪದನು ೩೭೨ಕ್ಕಂ ಜಯ ಮಂಗಳ ಮಹಾ × × ×
ವಿಭವನಾಮ ಸಂವತ್ಸರದ ಆಷಾಡ ಶು. ೫ ಭಾರ್ಗವಾರ ಬರೆದು ಹೆಚ್ಚಿತು
ಬರೆದಾತನು ಶಿಲಾಪುರಿಯಲ್ಲಿ ಯಿರುವಂತಾ ವುಪಾದ್ಯ ಸಂದ್ಯಪ್ಪೈಯ್ಯನವರ
ಮಗ ಸುಬರಾಯನು ಶ್ರೀ ಮಾದೇಶ್ವರಸ್ವಾಮಿ ಸಂಗೀತವನ್ನು ಬರೆದು
ಹೆಚ್ಚಿದಂತಾ ಪುಸ್ತಕವನ್ನು ಮಾದೇಶ್ವರಬೆಟ್ಟದಲ್ಲಿ ಯಿರುವ ಪುಟ್ಟು ಮಾದ
ಮ್ಮಡಿ ಮಕ್ಕಳು ಹಲಗೆ ವೀರತಮ್ಮಡಿ ಮಾದತಮ್ಮಡಿಗೆ ಸಹಾ ಪುತ್ರ ಮಿತ್ರ
ಕಳತ್ರ ಭೋಗ ಭಾಗ್ಯ ಧನಕನಕ ವಸ್ತುವಾಹನವಾಗಿ ಬಾಳಲಿಯೆಂದು
ಆಚಂದ್ರತಾರಾರ್ಕ ಅಭಿವೃದ್ಧಿಯಾಗಿ ಶ್ರೀ ಮಾದೇಶ್ವರಸ್ವಾಮಿಯವರ
ಕರುಣಾಕಟಾಕ್ಷವಾಗಿ ಬಾಳಲಿಯೆಂದು ಹರಸಿಕೊಟ್ಟಂತಾ ಮಾದೇಶ್ವರ
ಸ್ವಾಮಿಯವರ ಸಂಗೀತದ ಪುಸ್ತಕಕ್ಕೆ ಜಯಮಂಗಳ ಮಹಾ ಶ್ರೀ.

ವಿಷಯ : ಮಹದೇಶ್ವರಸ್ವಾಮಿಯ ಮಹಿಮೆ.

ವಿಶೇಷ : ಶಿಥಿಲ ಪ್ರತಿ. ಕೆಲವು ಪತ್ರಗಳು ಮುರಿದುಹೋಗಿ ಗ್ರಂಥ ಲುಪ್ತ.

—ವೈಸಿಬಿ

## 437

| ಕೆ. ೧೭೭೧ | ಮಹದೇಶ್ವರನ ಸಾಂಗತ್ಯ | ಸಾಂಗತ್ಯ |
| --- | --- | --- |
| ೮" × ೧.೧" | ಗುರುಸಿದ್ಧಪ್ಪ | ಸು. ೧೭೫೦ |
| ೬_೭೪ ಪತ್ರ | ■ ಪಂಕ್ತಿ | ೨೩ ಅಕ್ಷರ |

ಆದಿ : ...............
.............
......ನಾಳುವ ದೊರೆಗಳು

ಯಾ ... ನಿರ್ಪರು ಭುಜಕೀರ್ತಿಯಿಂದ ೩೧
ಕನ್ನಡ ದೇಶದಿ ವೆರತಿರಾಧಿ
ಪೊನ್ನ ..ದೊತ್ತಿನಲಿ ಪುಡವಿ
ಗುನ್ನತವಾಗಿ......

ಅಂತ್ಯ : ಧರೆಯೊಳಗಧಿಕ ಮಾದೇಶನ ಚರಿತ್ರೆಯಂ
ಏದು ರಚಿಸಿದನಾ ಗುರುಶಿದ್ಧ
ಗುರುಲಿಂಗ ಜಂಗಮ ಭಕ್ತಿಯಲ್ಲಿ ಮತ್ತೆ
......ತೋರುವೆನಲಿ ೧೩

× × ×

ಕಾಳಿಗೆತಾರ ಶ್ರೀಶೈಲರಾಮೇಶ್ವರ

ವಿಷಯ : ಮಹದೇಶ್ವರಸ್ವಾಮಿಯ ಮಹಿಮೆ.

ವಿಶೇಷ : ಶಿಥಿಲಪ್ರತಿ. ಅಸಮಗ್ರ. ಕೆಲವು ಪತ್ರಗಳ ಓಲೆ ಮುರಿದು ಗ್ರಂಥ ಲುಪ್ತ.

—ವೈಸಿಬಿ

## 438

ಕೆ. ೬೬೪/೧೮ ಮಹದೈಪುರೀಶ್ವರ ಶತಕ ವೃತ್ತ
೯.೫" × ೨.೪" ಮಗ್ಗೆಯ ಮಾಯಿದೇವ ಸು. ೧೬೩೦
೭ ಪತ್ರ ೧೨ ಪಂಕ್ತಿ ೭೨ ಅಕ್ಷರ

ಆದಿ : ಶ್ರೀ ಮದಪಾರಸಾರ ಕರುಣಾಮೃತಸಾಗರ ಭಕ್ತಲೋಕ ಚಿಂ ।
ತಾಮಳ ನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗುಣೇಂದ್ರ ದಿವ್ಯ ತೇ ।
ಜೋಮಯ ಮೌಳಿಮಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ ।
ಸ್ಸೀಮ ಧೃತೇಂದು ಸೋಮ ಪರಮಪ್ರಭುವೇ ಮಹಾದೈಪುರೀಶ್ವರ ॥ ೧ ॥

ಅಂತ್ಯ : ಅಪ್ರತಿಮ ಪ್ರತಿಷ್ಠ ಪರಿಪೂರ್ನ ಪರಾನುಭವ ಪ್ರಭಾವ ಭ
ವ್ಯ ಪ್ರತಿಧಿತಾರ್ಥಮಾದ ಪದಬಂಧಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂಕ್ತಿ ಮತ ..ದ್ಭವಿಂದೀ ಶತಕಕ್ಕೆ ಮಾಯಿದೇ
ವ ಪ್ರಭುವೀಗ ಕರ್ತೃ ಪರಮಪ್ರಭುವೆ ಮಹದೈಪುರೀಶ್ವರಾ ॥ ೧೧೩ ॥

ವಿಷಯ : ಭಕ್ತಿ ಜ್ಞಾನ ವೈರಾಗ್ಯಗಳ ನಿರೂಪಣೆ.

ವಿಶೇಷ : ಪತ್ರಗಳ ಕ್ರಮಸಂಖ್ಯೆಯಿಲ್ಲ. ೫೩ನೆಯ ಪತ್ರದ ಒಂದು ಕಡೆ ಅಂಚು ಸ್ವಲ್ಪ ಮುರಿದು ಲುಪ್ತವಾಗಿದೆ. ಪ್ರತಿ ಪದ್ಯವೂ 'ಪರಮಂ ಪ್ರಭುವೇ ಮಹದೈಪುರೀಶ್ವರಾ' ಎಂದು ಮುಗಿಯುತ್ತದೆ. ಈ ಕಟ್ಟಿನಲ್ಲಿ ಈ ಕೃತಿ

ಯಲ್ಲದೆ ಶಿವಾವಲ್ಲಭ ಶತಕಾದಿ ೧೭ ಗ್ರಂಥಗಳೂ, ಶಿವಕವಚಾದಿ ೧೬ ಸಂಸ್ಕೃತಗ್ರಂಥಗಳೂ ಒಂದು ತೆಲುಗು ಕೃತಿಯೂ ಇವೆ.

—ಎಸ್‌ಬಿ

## 439

ಕೆ. ೭೬೭/೩ | ಮಹದ್ಯೆಪುರೀಶ್ವರ ಶತಕ | ವೃತ್ತ
೧೩'' × ೨'' | ಮಗ್ಗೆಯ ಮಾಯಿದೇವ | ಸು. ೧೪೩೦
೧೨–೧೭ ಪತ್ರ | ೧೨ ಪಂಕ್ತಿ | ೯೩ ಅಕ್ಷರ

ಆದಿ : ಶ್ರೀಮದಪಾರಸಾರ ಕರುಣಾಮೃತಸಾಗರ ಭಕ್ತಲೋಕ ಚಿಂ
ತಾಮಳ ನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯ ಮೌಳಿಮಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ಧೃತೇಂದುನೇಮ ಪರಮಪ್ರಭುವೆ ಮಹದ್ಯೆಪುರೀಶ್ವರ ॥ ೧ ॥

ಅಂತ್ಯ : ಅಪ್ರತಿಮಪ್ರತಿಷ್ಠ ಪರಿಪೂರ್ಣಪರಾನುಭವ ಪ್ರಭಾನಘ
ವ್ಯ ಪ್ರತ್ಥಿತಾರ್ಥವಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೋಕ್ತಿ ಮತಸಿದ್ಧಿವಿದೀ ಶತಕಕ್ಕೆ ಮಾಯಿದೇ
ವಪ್ರಭುವೀಗ ಕರ್ತೃ ಪರಮಪ್ರಭುವೆ ಮಹದ್ಯೆಪುರೀಶ್ವರ ॥ ೧೧೩ ॥
ಮಹದ್ಯೆಪುರೀಶ್ವರ ಶತಕ ಸಮಾಪ್ತಂ । ಅಂತು ಶತಕ ಮೂರಕ್ಕೆ ॥ಪವನ॥
೩೧೭ಕ್ಕಂ ಮಂಗಳ ಮಹಾಶ್ರೀ ಶ್ರೀ ಶ್ರೀ.

ವಿಷಯ : ವೀರಶೈವ ಸಿದ್ಧಾಂತಾನುಸಾರ ಭಕ್ತಿಜ್ಞಾನ ವೈರಾಗ್ಯಗಳು.

ವಿಶೇಷ : ಗ್ರಂಥ ಸಮಗ್ರ. ಅಕ್ಷರಗಳು ಸಣ್ಣಗಿದ್ದರೂ ಸ್ಫುಟವಾಗಿವೆ. ಪ್ರತಿಯೊಂದು ಪದ್ಯವೂ 'ಪರಮ ಪ್ರಭುವೆ ಮಹದ್ಯೆಪುರೀಶ್ವರಾ' ಎಂದು ಮುಗಿಯುತ್ತದೆ. ಇದಲ್ಲದೆ ಇದೇ ಕಟ್ಟಿನಲ್ಲಿ ಶಿವಾಧವ ಮೊದಲಾದ ೧೯ ಶತಕಗಳಿವೆ.

—ಎಸ್‌ಬಿ

## 440

ಕೆ. ೯೯೪/೧೭ | ಮಹದ್ಯೆಪುರೀಶ್ವರ ಶತಕ | ವೃತ್ತ
೮'' × ೨.೨'' | ಮಗ್ಗೆಯ ಮಾಯಿದೇವ | ಸು. ೧೪೩೦
೭೪–೮೩ ಪತ್ರ | ೧೧ ಪಂಕ್ತಿ | ೩೮ ಅಕ್ಷರ

ಆದಿ : ಗುರುಬಸವಲಿಂಗಾಯ ನಮಃ ಮಹದ್ಯೆಪುರೀಶ್ವರ ಶತಕ ಉತ್ಪಲಮಾಲಾ ವೃತ್ತ ॥
ಶ್ರೀಮದಪಾರಸಾರ ಕರುಣಾಮೃತ ಸಾಗರ ಭಕ್ತಲೋಕ ಚಿಂ
ತಾಮಳ ನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ

ಜೋಮಯ ಮೌಳಿಪಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮದ್ಯುತೇಂದುನೇಮ ಪರಮಪ್ರಭುವೆ ಮಹದೈಪುರೀಶ್ವರಾ ‖ ೧ ‖

**ಅಂತ್ಯ :** ಅಪ್ರತಿಮ ಪ್ರತಿಷ್ಠ ಪರಿಪೂರ್ಣ ಪರಾನುಭವ ಪ್ರಭಾವ ಭ
ಪ್ರವ್ಯದೀತಾರ್ಥವಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂಕ್ತಿಮಂತಸಿದ್ಧಿವೀ ಶತಕಕ್ಕೆ ಮಾಯಿಂದೇ
ವಪ್ರಭುಯಾಗ ಕರ್ತೃ ಪರಮಪ್ರಭುವೇ ಮಹದೈಪುರೀಶ್ವರಾ ‖ ೧೧೩ ‖
ಮಹದೈಪುರೀಶ್ವರಾ ಶತಕ ಸಮಾಪ್ತ ಮಂಗಳ ಮಹ ಶ್ರೀ ಶ್ರೀ.

**ವಿಷಯ :** ಭಕ್ತಿ ಜ್ಞಾನ ವೈರಾಗ್ಯಗಳ ನಿರೂಪಣೆ.

**ವಿಶೇಷ :** ಬಸವ ತ್ರಿಪಧಿ ಮೊದಲಾದ ೨೭ ಕೃತಿಗಳಿವೆ. ೮೪–೧೧೦ ಪತ್ರಗಳಿಲ್ಲ.

—ಜಿಜಿಎಂ

## 441

| ಕ. ೧೧೨೦/೩ | **ಮಹದೈಪುರೀಶ್ವರ ಶತಕ** | ವೃತ್ತ |
|---|---|---|
| ೮.೨"×೨.೨" | ಮಗ್ಗೆಯ ಮಾಯಿದೇವ | ಸು. ೧೪೩೦ |
| ೧೩೩–೧೪೨ ಪತ್ರ | ೧೩ ಪಂಕ್ತಿ | ೪೨ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ‖ ಮಹದೈಪುರೀಶ್ವರ ಶತಕಂ ‖
ಶ್ರೀಮದಪಾರಸಾರ ಕರುಣಾಮೃತಸಾಗರ ಭಕ್ತಲೋಕ ಚಿಂ
ತಾಮಣಿ ನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯಮೌಳಿಮಂಡಿತಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ಧೃತೇಂದೂ ನೇಮ ಪರಮಪ್ರಭುವೆ ಮಹದೈಪುರೀಶ್ವರಾ ‖ ೧ ‖

**ಅಂತ್ಯ :** ಅಪ್ರತಿಮ ಪ್ರತಿಷ್ಠ ಪರಿಪೂರ್ನ ಪರಾನುಭವ ಪ್ರಭಾವಂ ಭ
ವ್ಯ ಪ್ರಥಿತಾರ್ಥವಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂತ್ತಮತ ಸಿದ್ಧಮಿದೀ ಶತಕಕ್ಕೆ ಮಾಯಿದೇ
ವ ಪ್ರಭುವೀಗ ಕರ್ತೃ ಪರಮಪ್ರಭುವೆ ಮಹದೈಪುರೀಶ್ವರಾ ‖ ೧೧೩ ‖
ಮಹದೈಪುರೀಶ್ವರಿಶತಕ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

**ವಿಷಯ :** ಭಕ್ತಿ ಜ್ಞಾನ ವೈರಾಗ್ಯಗಳ ನಿರೂಪಣೆ.

**ವಿಶೇಷ :** ಇದೇ ಕಟ್ಟಿನಲ್ಲಿ ಶಿವಾಧವ ಶತಕ, ಶಿವಾವಲ್ಲಭ ಶತಕ, ಶಿವಕಾರುಣ್ಯಾಹ್ವಾನ ಶತಕ ಇತ್ಯಾದಿ ೨೨ ಕೃತಿಗಳಿವೆ.

—ಜಿಜಿಎಂ

## 442

ಕೆ. ೧೧೩೯/೯ ಮಹದೈಪುರೀಶ್ವರ ಶತಕ ವೃತ್ತ
೭"x೨" ಮಗ್ಗಿಯ ಮಾಯಿದೇವ ಸು. ೧೪೩೦
೧೨೪–೧೩೫ ಪತ್ರ ೧೧ ಪಂಕ್ತಿ ೩೫ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮಹದೈಪುರೀಶ್ವರಶತಕ ॥
ಶ್ರೀಮದಪಾರಸಾರ ಕರುಣಾಮೃತಸಾಗರ ಭಕ್ತಲೋಕ ಚಿಂ
ತಾಮಳ ನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯ ಮೌಳಿಮಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ದ್ಯುತೇಂದು ನೇಮ ಪರಮ ಪ್ರಭುವೆ ಮಹಾದೈಪುರೀಶ್ವರಾ ॥೧॥

ಅಂತ್ಯ : ಅಪ್ರತಿಮಪ್ರತಿಷ್ಠ ಪರಿಪೂರ್ಣ ಪರಾನುಭವ ಪ್ರಭಾವ ಭ
ವ್ಯ ಪ್ರತಿತಾರ್ಥವಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂಕ್ತಿ ಮತಸಿದ್ಧಿಮಿದೀ ಶತಕಕ್ಕೆ ಮಾಯಿದೇ
ವ ಪ್ರಭುವೀಗ ಕರ್ತೃ ಪರಮಪ್ರಭುವೆ ಮಹದೈಪುರೀಶ್ವರಾ ॥ ೧೩೧ ॥
ಮಹದೈಪುರೀಶ್ವರಶತಕ ಸಂಪೂರ್ನ್ನ ಮಂಗಳ ಮಹಾಶ್ರೀ ಶ್ರೀ ಅಂತು
ಮೂರು ಶತಕಕ್ಕೆ ಸೇರಿದ ವೃತ್ತ ॥ ೩೧೭ ॥

ವಿಷಯ : ವೀರಶೈವ ಸಿದ್ಧಾಂತಕ್ಕೆ ಅನುಗುಣವಾಗಿ ಭಕ್ತಿ ಜ್ಞಾನ ವೈರಾಗ್ಯಗಳ ವಿವರಣೆ.

ವಿಶೇಷ : ಪ್ರತಿ ಪದ್ಯವೂ 'ಪರಮಪ್ರಭುವೇ ಮಹದೈಪುರೀಶ್ವರಾ' ಎಂದು ಮುಗಿಯುತ್ತದೆ. ಈ ಕೃತಿಯಲ್ಲದೆ ಇದರೊಂದಿಗೆ ಶಿವಾವಲ್ಲಭ ಶತಕಾದಿ ೩೭ ಗ್ರಂಥಗಳಿವೆ. ಇವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳೂ ಇವೆ.

—ಎಸ್‌ಬಿ

## 443

ಕೆ. ೧೧೫೧/೪ ಮಹದೈಪುರೀಶ್ವರ ಶತಕ ವೃತ್ತ
೭.೩''x೩'' ಮಗ್ಗಿಯ ಮಾಯಿದೇವ ಸು. ೧೪೩೦
೨೫–೩೮ಪತ್ರ ೧೦ ಪಂಕ್ತಿ ೨೨ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಲಿಂಗಮೂರ್ತಿದೇವರ ಪಾದವೇಗತಿ ॥
ಕೃತಿಯಲ್ಲಿ ಮಹಾದೈಪುರೀಶ್ವರಶತಕ ॥
ಶ್ರೀಮದಪಾರಸಾರ ಕರುಣಾಮೃತಸಾಗರ ಭಕ್ತಿಲೋಕ ಚಿಂ
ತಾಮಳನೂತರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯಮೌಳಿಪಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ದ್ಯುತೇಂದುನೇಮ ಪರಮಪ್ರಭುವೇ ಮಹದೈಪುರೀಶ್ವರಾ ॥ ೧ ॥

ಅಂತ್ಯ : ಅಪ್ರತಿಮ ಪ್ರತಿಷ್ಠ ಪರಿಪೂರ್ಣ ಪರಾನುಭವ ಪ್ರಭಾವಭ
ದ್ವೈಪ್ರತಿಥಿತಾರ್ಥವಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂಕ್ತಿಮತಸಿದ್ಧವಿದೀ ಶತಕಕ್ಕೆ ವಹಾಯಿದೇ
ವಪ್ರಭುವೀಗ ಕರ್ತೃ ಪರಮಪ್ರಭುವೇ ಮಹದೈಪುರೀಶ್ವರಾ ॥ ೧೧೩ ॥
ಮೊಗ್ಗೆಮಾಯಿದೇವಯ್ಯಗಳು ನಿರೂಪಿಸಿದ ಮಹದೈಪುರೀಶ್ವರ ಶತಕ ಸಮಾಪ್ತ ಮಂಗಳ ಮಹಾಶ್ರೀ.

ವಿಷಯ : ಭಕ್ತಿ. ಜ್ಞಾನ, ವೈರಾಗ್ಯಗಳ ನಿರೂಪಣೆ.

ವಿಶೇಷ : ಇದೇ ಕಟ್ಟಿನಲ್ಲಿ ದಾರಿದ್ರ್ಯವಿದ್ರಾವಣಾರಿ ಶತಕ, ಶಿವಮಹಿಮಾ ಶತಕ ಮುಂತಾದ ಕೃತಿಗಳಿವೆ.

—ವೈಸಿಬಿ

## 444

| ಕೆ. ೧೯೪-೧೧ | ಮಹದೈಪುರೀಶ್ವರ ಶತಕ | ವೃತ್ತ |
|---|---|---|
| ೭.೨″ × ೧.೭″ | ಮಗ್ಗೆಯ ಮಾಯಿದೇವ | ಸು. ೧೪೩೦ |
| ೧೦೬-೧೯೯ ಪತ್ರ | ೯ ಪಂಕ್ತಿ | ೩೨ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಮಹದೈಪುರೀಶ್ವರ ಶತಕ ॥

ವೃ ॥ ಶ್ರೀ ಮದಪಾರಸಾರ ಕರುಣಾಮೃತಸಾಗರ ಭಕ್ತಲೋಕ ಚಿಂ
ತಾಮಳ ನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯ ಮೌಳಿಮಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ಧೃತೇಂದು ನೇಮ ಪರಮಪ್ರಭುವೇ ಮಹಾದೈಪುರೀಶ್ವರಾ ॥ ೧ ॥

ಅಂತ್ಯ : ಅಪ್ರತಿಯ ಪ್ರತಿಷ್ಠ ಪರಿಪೂರ್ನ ಪರಾನುಭವ ಪ್ರಭಾವ ಭ
ವ್ಯಪ್ರಥಿತಾರ್ಥಮಾದದೀ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂಕ್ತಿ ಮತಸಿದ್ಧವಿದೀ ಶತಕಕ್ಕೆ ಮಾಯಿದೇ
ವ ಪ್ರಭುವೀಗ ಕರ್ತೃ ಪರಮಪ್ರಭುವೆ ಮಹದೈಪುರೀಶ್ವರಾ ॥ ೧೧೩ ॥
ಮೊಗ್ಗೆಯ ಮಾಯಿದೇವಯ್ಯಗಳು ನಿರೂಪಿಸಿದ ಮಹದೈಪುರೀಶ್ವರ ಶತಕ ಮಂಗಳ ಮಹಾ ಶ್ರೀ ॥

ವಿಷಯ : ಭಕ್ತಿ, ಜ್ಞಾನ, ವೈರಾಗ್ಯಗಳ ನಿರೂಪಣೆ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಬಸವಸ್ತೋತ್ರದ ತ್ರಿವಿಧಿ, ಅಕ್ಷರಮಾಲಿಕಾ ಗದ್ಯ, ಷಡಕ್ಷರಿಯ ಕಂದ, ಶಿವಾಧವ ಶತಕ ಮೊದಲಾದ ಕೃತಿಗಳಿವೆ.

—ವೈಸಿಬಿ

## 445

ಕೆ. ೧೨೬೦/೧೯ ಮಹದೈಪುರೀಶ್ವರ ಶತಕ ವೃತ್ತ
೧೦"×೨.೧" ಮಗ್ಗೆಯ ಮಾಯಿದೇವ ಸು. ೧೪೩೦
೧೪೭-೧೫೭ ಪತ್ರ ೧೧ ಪಂಕ್ತಿ ೫೦ ಅಕ್ಷರ

ಆದಿ : ಮಹದೈಪುರೀಶ್ವರಶತಕ ॥ ಚಂಪಕ ವೃತ್ತ ॥
ಶ್ರೀಮದಪಾರಸಾರ ಕರುಣಾಂಮೃತಸಾಗರ ಭಕ್ತಲೋಕ ಚಿಂ
ತಾಮಳ ನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯ ಮೌಳಿಮಂಡಿತ ಪಾದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ಧೃತೇಂದು ನೇಮ ಪರಮ ಪ್ರಭುವೆ ಮಹದೈಪುರೀಶ್ವರಾ ॥ ೧ ॥

ಅಂತ್ಯ : ಅಪ್ರತಿಮ ಪ್ರತಿಷ್ಠ ಪರಿಪೂರ್ನ ಪರಾನುಭವ ಪ್ರಭಾವ ಸಂ
ವ್ಯ ಪ್ರತಿತಾರ್ಥವಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯದ ಸದ್ಗುರೂಕ್ತಿ ಮದಸಿದ್ಧವಿದೀ ಶತಕಕ್ಕೆ ಮಾಯಿದೇ
ವ ಪ್ರಭುವೀಗ ಕರ್ತೃ ಪರಮಪ್ರಭುವೇ ಮಹದೈಪುರೀಶ್ವರಾ ॥ ೧೧೩ ॥
ಮಹದೈಪುರೀಶ್ವರಶತಕ ಸಮಾಪ್ತ ಮಂಗಳ ಮಹಾಶ್ರೀ.

ವಿಷಯ : ಭಕ್ತಿ, ಜ್ಞಾನ, ವೈರಾಗ್ಯಗಳ ನಿರೂಪಣೆ.

ವಿಶೇಷ : ಸಮಗ್ರ ಬರಹ ಸುಂದರವಾಗಿದೆ. ಶಕಟರೇಫವಿದೆ. ಈ ಗ್ರಂಥದ ಪದ್ಯವು ಉತ್ಪಲಮಾಲಾ ವೃತ್ತವಾಗಿದ್ದೂ ಚಂಪಕವೃತ್ತವೆಂದು ತಪ್ಪಾಗಿ ಬರೆಯಲಾಗಿದೆ. ಇದೇ ಕಟ್ಟಿನಲ್ಲಿ ಉದ್ಭಟದೇವರ ರಗಳೆ ಮೊದಲಾಗಿ ೧೩ ರಗಳೆಗಳು, ಬಸವಸ್ತೋತ್ರದ ತ್ರಿವಿಧಿ, ಶಂಕರದೇವರ ಕಂದ, ಅಕ್ಷರಾಂಕನ ಗದ್ಯ ಇತ್ಯಾದಿ ೬೬ ಕೃತಿಗಳಿವೆ. ಇವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳು.

—ಕೆಆರ್‌ಎಸ್

## 446

ಕೆ. ೧೩೬೧/೬ ಮಹದೈಪುರೀಶ್ವರ ಶತಕ ವೃತ್ತ
೬.೬" × ೧.೮" ಮಗ್ಗೆಯ ಮಾಯಿದೇವ ಸು ೧೪೩೦
೧೧೫-೧೨೭ ಪತ್ರ ೧೩ ಪಂಕ್ತಿ ೪೨ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮಹದೈಪುರೀಶ್ವರಶತಕ ॥
ಶ್ರೀಮದಪಾರಸಾರ ಕರುಣಾಮೃತಸಾಗರ ಭಕ್ತಲೋಕ ಚಿಂ
ತಾಮಳ ನೂಂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯ ಮೌಳಿಮಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ಧೃತೇಂದು ನೇಮ ಪ್ರರಮಪ್ರಭುವೇ ಮಾದೈಪುರೀಶ್ವರ ॥ ೧ ॥

ಅಂತ್ಯ : ಅಪ್ರತಿಮಂ ಪ್ರತಿಷ್ಠ ಪರಿಪೂರ್ನ್ನ ಪರಾನುಭವ ಪ್ರಭಾವ ಭ
ವ್ಯ ಪ್ರಥಿತಾರ್ತ್ಥಮಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯ ಪ್ರದ ಸದ್ಗುರೂಕ್ತಿ ಮತಸಿದ್ಧಮಿದೀ ಶತಕಕ್ಕೆ ಮಾಯಿದೇ
ವ ಪ್ರಭುವೀಗ ಕರ್ತೃ ಪರಮಪ್ರಭುವೆ ಮಹಾದೈಪುರೀಶ್ವರಾ ॥ ೧೧೩ ॥
ಮಹದೈಪುರೀಶ್ವರ ಶತಕ ಮಂಗಳ ಮಹಾ ಶ್ರೀ ॥

ವಿಷಯ : ಭಕ್ತಿ ಜ್ಞಾನ ವೈರಾಗ್ಯಗಳ ನಿರೂಪಣೆ.

ವಿಶೇಷ : ಕೆಲವು ಗರಿಗಳು ಶಿಥಿಲವಾಗಿವೆ. ಬರವಣಿಗೆ ಸುಂದರವಾಗಿದೆ. ಶಕಟರೇಫದ ಬಳಕೆಯಿದೆ. ಈ ಕಟ್ಟಿನಲ್ಲಿ 'ಶಿವಾವಲ್ಲಭ ಶತಕ' ಮುಂತಾದ ಇತರ ೫ ಕೃತಿಗಳಿವೆ.

—ಎಂಪಿಎಂ

## 447

ಕೆ.೧೬೬೪/೬ ಮಹದೈಪುರೀಶ್ವರ ಶತಕ ವೃತ್ತ
೧೨.೯"×೧.೭" ಮುಗ್ಗೆಯ ಮಾಯಿದೇವ ಸು. ೧೪೩೦
೧೯೫–೨೦೦ ಪತ್ರ ೧೧ ಪಂಕ್ತಿ ೮೪ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮುಂದೆ ಮಹದೈಪುರೀಶ್ವರ ಶತಕ ॥
ಶ್ರೀಮದಪಾರಸಾರ ಕರುಣಾಂಮೃತಸಾಗರ ಭಕ್ತಲೋಕ ಚಿಂ
ಚಿಂತಾಮಳ ನೂತ್ನರತ್ನ ದಿವಿಜೇಂದ್ರ ದಿವ್ಯ ತೇ
ಜೋಮಯ ಮೌಳಿಮಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ಧೃತೇಂದುನೇಮ ಪರಮಪ್ರಭುವೆ ಮಹಾದೈಪುರೀಶ್ವರಾ ॥ ೧ ॥

ಅಂತ್ಯ : ಅಪ್ರತಿಮ ಪ್ರತಿಷ್ಟ ಪರಿಪೂರ್ನ್ನ ಪರಾನುಭವ ಪ್ರಭಾವ ಭ
ವ್ಯ ಪ್ರದೀತಾರ್ತ್ಥಮಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂಕ್ತಿ ಮತಸಿದ್ಧಮಿದೀ ಶತಕಕ್ಕೆ ಮಾಯಿದೇ
ವಪ್ರಭುವೀಗ ಕರ್ತ್ರು ಪರಮಪ್ರಭುವೆ ಮಹಾದೈಪುರೀಶ್ವರಾ ॥ ೧೧೩ ॥
ಮಹದೈಪುರೀಶ್ವರ ಶತಕ ಸಂಪೂರ್ಣ ಮಂಗಳ ಮಹಾಶ್ರೀ
ಶ್ರೀ ಷಟ್ಸ್ಥಲಬ್ರಂಹಿಗಳಾದ ಗುರುಲಿಂಗದೇವರು ಒರದ ಪುಸ್ತಕರ್ಕೆ ನಿರ್ವಿಗ್ನಮಸ್ತು ಮಂಗಳ ಮಹಾಶ್ರೀ

ವಿಷಯ : ಭಕ್ತಿ ಜ್ಞಾನ ವೈರಾಗ್ಯಗಳ ನಿರೂಪಣೆ.

ವಿಶೇಷ : ಇದೇ ಕಟ್ಟಿನಲ್ಲಿ ಪ್ರಭುದೇವರ ಪುರಾಣ, ಷಟ್ಸ್ಥಲಜ್ಞಾನಸಾರ, ಲಿಂಗ ಸ್ತೋತ್ರದ ಷಟ್ಪದಿ, ಶಿವಾಧವ ಶತಕ ಮತ್ತು ಶಿವಾವಲ್ಲಭ ಶತಕ ಎಂಬ ಗ್ರಂಥಗಳಿವೆ.

—ವೈಸಿಬಿ

## 448

ಕೆ. ೧೭೫೦/೨೦ | ಮಹದ್ಯೈಪುರೀಶ್ವರ ಶತಕ | ವೃತ್ತ
೧೦.೨"×೧.೯" | ಮಗ್ಗೆಯ ಮಾಯಿದೇವ | ಸು. ೧೪೩೦
೯೫-೧೦೨ ಪತ್ರ | ೧೦ ಪಂಕ್ತಿ | ೫೦ ಅಕ್ಷರ

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ॥ ಮಹದ್ಯೈಪುರೀಶ್ವರ ಶತಕ ॥
ಶ್ರೀಮಂದಪಾರಸಾರ ಕರುಣಾಮೃತಸಾಗರ ಭಕ್ತಲೋಕ ಚಿಂ
ತಾಮಳನೂತ್ನರತ್ನ ದಿವಿಜೇಂದ್ರ ಮುನೀಂದ್ರ ಗಣೇಂದ್ರ ದಿವ್ಯ ತೇ
ಜೋಮಯ ಮೌಳಿಮಂಡಿತ ಪದಾಂಬುಜ ಸರ್ವಗುಣಾಭಿರಾಮ ನಿ
ಸ್ಸೀಮ ದ್ರುತೇಂದು ನೇಮ ಪರಮಪ್ರಭುವೇ ಮಹದ್ಯೈಪುರೀಶ್ವರಾ ॥

**ಅಂತ್ಯ :** ಅಪ್ರತಿಮ ಪ್ರತಿಷ್ಠ ಪರಿಪೂರ್ನ್ನ ಪರಾನುಭವ ಪ್ರಭಾವ ಭ
ವ್ಯಪ್ರತಿತಾರ್ತ್ಥಮಾದ ಪದಬಂಧ ಪದೋತ್ತರ ಭಕ್ತಿಯೋಗ ಸೌ
ಖ್ಯಪ್ರದ ಸದ್ಗುರೂಕ್ತಿ ಮತಸಿದ್ಧಮಿದೀ ಶತಕಕ್ಕೆ ಮಾಯಿದೇ
ವಪ್ರಭುವೀಗ ಕರ್ತೃ ಪರಮಪ್ರಭುವೇ ಮಹದ್ಯೈಪುರೀಶ್ವರಾ ॥೧೧೩ ॥
ಮಹದ್ಯೈಪುರೀಶ್ವರ ಶತಕ ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ಭಕ್ತಿ ಜ್ಞಾನ ವೈರಾಗ್ಯಗಳ ನಿರೂಪಣೆ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಬಸವಸ್ತೋತ್ರದ ತ್ರಿವಿಧಿ. ಶಂಕರದೇವರ ಕಂದ. ಮರುಳದೇವರ ಕಂದ ಇವೇ ಮೊದಲಾದ ೨೮ ಕೃತಿಗಳಿವೆ.

—ವೈಸಿಬಿ

## 449

ಕೆ. ೭೭೬/೩ | ಮಹದ್ಯೈಪುರೀಶ್ವರ ಶತಕ (ಸಟೀಕು) | ವೃತ್ತ, ಟೀಕು
೮.೫"×೧.೮" | ತೋಂಟದಸಿದ್ಧಲಿಂಗ | ಸು. ೧೪೭೦
೧೨೫-೧೭೭ ಪತ್ರ | ೯ ಪಂಕ್ತಿ | ೪೨ ಅಕ್ಷರ

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ।

ಕಂದ ॥ ತನುಕರಣೇಂದ್ರಿಯ × × × ಗುರುಸಿರಂಜನಲಿಂಗಂ ॥ ಯಿಂತು ಆಚಾರ್ಯ್ಯಂ ಶತಕದ್ವಯದಲ್ಲಿ ಭಕ್ತಿ ಜ್ಞಾನಗಳಂ ಪ್ರತಿಪಾದಿಸಿ । ಆ ಭಕ್ತಿ ಜ್ಞಾನಂಗಳು ವೈರಾಗ್ಯವಿಲ್ಲದೆ । ದೊಱಕೊಳ್ಳದಾಗಿ । ಮೂಱನೆಯ ಶತಕದಲ್ಲಿ ವೈರಾಗ್ಯಮಂ ಪೇಳಲುದ್ಯುಕ್ತನಾಗಿ × × × ಶ್ರೀ ಮಂದ ಪಾರಸಾರ ಕರುಣಾ × × × ಮಹದ್ಯೈಪುರೀಶ್ವರಾ ॥

ಟೀಕು ॥ ಶ್ರೀಮಂದಪಾರಸಾರ ಕರುಣಾಮೃತಸಾಗರ । ಶ್ರೀಮತ್ । ಮೊಪ್ಪುತ್ತಿರ್ದ್ದ । ಅಪಾರಾ ಕಡೆಯಿಲ್ಲದಿರ್ಪ । ಸಾರ ಶ್ರೇಷ್ಠವಾದ । ಕರುಣ। ಕಾರುಂಣ್ಯಕ್ಕೆ ।

ಅಮೃತಸಾಗರ। ಕ್ಷೀರಸಮುದ್ರವಾದಾತನೆ × × × ಅಯಿಪುಜೀ ಶ್ವರ। ಜ್ಞಾನವೆಂಬ ಪಟ್ಟಕ್ಕಧೀಶ್ವರನಾದ ಯೆಲೆ ಸೋಮೇಶ್ವರನೆ। ಜಯು। ಸರ್ವೋತ್ಕೃಷ್ಟನಾಗೂ। ಯಿಲ್ಲಿ ಜಯುಯೆಂಬ ಕ್ರಿಯಾಧ್ಯಾ ಹಾರವಂ ಹತ್ತೂ ಪದ್ಯಂಗಳೆಯು। ಮಾಡಿಕೊಂಬುಳ್ವದೂ ॥ ೧ ॥

ಅಂತ್ಯ : ॥ ೧೧೨ ॥ ಅಪ್ರತಿಮ ಪ್ರತಿಷ್ಠಾಪ × × × ಈ ಶತಕಕ್ಕೆ। ಈನಾರು ಪದ್ಯಂಗಳನುಳ್ಳ ಪ್ರಬಂಧಕ್ಕೆ। ಮಾಯಿದೇವ ಪ್ರಭುವೀಗ ಕರ್ತೃ ಮಾಯಿ ದೇವ ಪ್ರಭುವೆಂಬಾಚಾರ್ಯನೆ ಕರ್ತೃನು

ಗದ್ಯ ॥ ಯಿದು ಸಮಸ್ತ ಶಿವಯೋಗಿ ಜನ × × × ತೋಂಟದ ಸಿದ್ಧಲಿಂಗ ದೇಸಿಕನಿಂ ವಿರಚಿತಮಪ್ಪ × × × ಶತಕತ್ರಯು ಮಹಾ ವ್ಯಾಖ್ಯಾನ ದೊಳ್। ವೈರಾಗ್ಯ ಪ್ರತಿಪಾದಕ ಶತಕಂ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಭಕ್ತಿಜ್ಞಾನ ವೈರಾಗ್ಯಗಳ ನಿರೂಪಣೆ.

ವಿಶೇಷ : ಗ್ರಂಥ ಸಮಗ್ರ. ಈ ಕಟ್ಟಿನಲ್ಲಿ ಶಿವಾಧವ, ಶಿವಾವಲ್ಲಭ ಶತಕಗಳ ಟೀಕು ಗಳಿವೆ. ಗ್ರಂಥದ ಕೊನೆಯಲ್ಲಿ ಶುಕ್ಲ ಸಂವತ್ಸರದ ಶ್ರಾವಣ ಶುದ್ಧ ೧೧ಯಲ್ಲು ಸೋಮವಾರ ತಾಸು ೪ಕ್ಕೆ ಶತಕತ್ರಯಂಗಳ ವ್ಯಾಖ್ಯಾನ ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ ಶ್ರೀ. ಎಂದಿದೆ. ೧ ನೆಯ ಪತ್ರ ದಿಂದ ೧೭೭ ಪತ್ರ ಅಂಚಿನಲ್ಲಿ ಸ್ವಲ್ಪ ತ್ರುಟಿತ.

—ಎಸ್‌ಬಿ

## 450

| ಕೆ. ೧೧೨೦/೨೩ | ಮಹದೈಪುರೀಶ್ವರ ಶತಕ (ಸಟೀಕು) | ವೃತ್ತ, ಟೀಕು |
|---|---|---|
| ೮"×೨" | ತೋಂಟದ ಸಿದ್ಧಲಿಂಗ | ಸು. ೧೪೭೦ |
| ೧೦ ಪತ್ರ | ೯ ಪಂಕ್ತಿ | ೪೨ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಕಂದ
ತನುಕರಣೇಂದ್ರಿಯ ಸುಖಿಗಳ
ನನವರತಂ ಬಿಡದ ಮನದ ಭ್ರಾಂತಿಯನಡಗಿಪ
ಘನ ವೈರಾಗ್ಯವನೊಲವಿಂ
ದೆನಗಿತ್ತೋವುದು ಗುರು ನಿಂಜನ ಲಿಂಗಾ ॥ ೧ ॥

ಇಂತು ಆಚಾರ್ಯಂ ಶತಕದ್ವಯದಲ್ಲಿ ಭಕ್ತಿಜ್ಞಾನಂಗಳಂ ಪ್ರತಿಪಾದಿಸಿ ಆ ಭಕ್ತಿಜ್ಞಾನಂಗಳು ವೈರಾಗ್ಯವಿಲ್ಲದೆ ದೂರಕೊಳ್ಳವಾಗಿ ಮೂರನೆಯ ಶತಕ ದಲಿ ವೈರಾಗ್ಯಮಂ ಪೇಳಲುದ್ಯುಕ್ತನಾಗಿ ಆದಿಯಲ್ಲಿ ಹತ್ತುಪದ್ಯಂಗಳಿಂ ಸ್ವಯಿಷ್ಟದೇವತೆಯಪ್ಪ ಐಪುರದ ಸೋಮೇಶ್ವರನಂ ಸ್ತುತಿಸುತ್ತಿರ್ದಪಂ ॥

ಅಂತ್ಯ : ಅಭಿಮತ ಸಿದ್ಧಿ ದಾನ ಪರನೆಂದು ಕೃಪಾಮೃತ ಸಿಂಧುವೆಂದು ಗ
ರ್ಭ ಭವಜರಾಮೃತಿ ದ್ರಭ್ರಕಿದುರ್ಭಯು ಸಂಹರನೆಂದು ಚಿತ್ಕಳಾ
ವಿಭು ಗುರುನಾಥ ನಿನ್ನ ನಿರದಿತ್ತನಿದೇಂದಯೆಗೆಯ್ಯಲೊಲ್ಲೆ ಪೇ
ಳ್ತ್ರಿಭುವನ ಮೂಲಲಿಂಗ ಪರಮ ಪ್ರಭುವೆ ಮಹದೈಪುರೀಶ್ವರಾ ॥

ಟೀಕು ॥ ತ್ರಿಭುವನಮೂಲಲಿಂಗ ಎನುತ ತನುತ್ರಯಂಗಳಿಗೆ ಕಾರಣವಾದ ಪರಮಾತ್ಮ
ಲಿಂಗವೆ ನಿನ್ನಂ ನಿನ್ನನು × × × ಶೀಘ್ರವಾಗಿ ಕೊಟ್ಟನು ಇದೇಂ
ದಯುಗೆಯ್ಯಲೊಲ್ಲೆ ಪೇಳ್ ಇದೇನು ಕರುಣಂಗೆಯ್ಯಲೊಲ್ಲೆ ನಿರೂಪಿಸು
॥ ೧೪ ॥

ವಿಷಯ : ವೈರಾಗ್ಯಪ್ರತಿಪಾದನೆ.

ವಿಶೇಷ : ಇದೇ ಕಟ್ಟಿನಲ್ಲಿ ಮಗ್ಗೆಯ ಮಾಯಿದೇವನ ಶತಕತ್ರಯ. ಶಿವಮಹಿಮಾ ಶತಕ, ಅರ್ಚಾಶತಕ, ಕೀರ್ತ್ಯಾಶತಕ, ಲಿಂಗಸ್ತೋತ್ರ ಷಟ್ಪದಿ ಇತ್ಯಾದಿ ೨೨ ಕೃತಿಗಳಿವೆ.

—ಜಿಜಿಎಂ

## 451

| ಕೆ. ೬೧೭/೨ | ಮಹಲಿಂಗ ಶತಕ | ಕಂದ |
|---|---|---|
| ೮.೨"×೫.೯" | ಅಳಿಯ ಲಿಂಗರಾಜ | ೧೮೫೦ |
| ೧೫–೨೩ ಪತ್ರ | ೧೫ ಪಂಕ್ತಿ | ೨೨ ಅಕ್ಷರ |

ಆದಿ : ಮಹಲಿಂಗ ಶತಕ ॥ ಶ್ರೀ ರ–
ಶ್ರೀಯೆಂಸೀಯಂಲಿ ವಿರಹಿತ
ಮಾಯುಂ ಸುರಗೆಯುನಪ್ರಮೇಯುಂ ಸ್ಫಟಿಕ
ಛಾಯಂ ಭೂಧರ ಜಾವರ
ಕಾಯಶಾಶ್ರಯನೊಲಿಯುತೆನಗೆ ಶ್ರೀ ಮಹಲಿಂಗಾ ॥ ೧ ॥

ಅಂತ್ಯ : ಕ್ಷಿತಿಪತಿ ಕೃಷ್ಣನೃಪಾಲನಿ
ಗತಿಹಿತಕರ ಪತ್ನಿಯಾದ ಲಿಂಗಾಂಬೆಯು ಸಂ
ನುತ ಪಾದಂಗಳಂ ಭಜಿಸೀ
ಶತಕವನಿವರಳಿಯಃ ಲಿಂಗರಾಜನು ಪೇಳ್ದಂ ॥ ೧೦೨ ॥

ಗದ್ಯ ॥ ಇದು ದಕ್ಷ ಶಿಕ್ಷಣ ವಿಚಕ್ಷಣ ಲೋಕರಕ್ಷಣ ದಕ್ಷನಾಗಿ × × × ಶ್ರೀಕೃಷ್ಣರಾಜಸಾರ್ವಭೌಮಂಗೆ ಪ್ರೇಮಾಸ್ಪದ ಜಾಮಾತನಾಗಿ ಅಂಗಜ ನಂಗವ ನರುಹಿದನ ದಯಾಪಾಂಗಾಲಿಂಗಿತನಪ್ಪ ಲಿಂಗರಾಜ ಧರ್ಮದಾರ ಕೆಂಪದೇವಾಂಬೆಯು ಗರ್ಭದುಗ್ಧಾಂಬುಧಿಗೆ ಪೂರ್ಣಕಲಾನ್ವಿತ ಕಲಾನಿಧಿ

ಯೆಂದು ಪೊಗಳ್ತೆಯಾಂತು ಕಾವ್ಯ ಕಲಾಕಲಾಪತೋಷಿತಾಂತ ರಂಗನಾದ ಲಿಂಗರಾಜನಿಂ ನಿರ್ಮಿತವಾದ ಶ್ರೀ ಮಹಲಿಂಗ ಶತಕಂ ಸಂಪೂರ್ಣಂ ಶ್ರೀ.

ಕಂ ॥ ಅಂಗಜಹರ ಮಹಲಿಂಗದ
ಮಂಗಳಕರ ಶತಕವಂನು ಪೇಳಿದೆನಿದರೊಳ್
ಸಂಗತದೋಷವು ತಿದ್ದಿ ಮ
ನಂಗೊಳುವಂತಧಿಕ ಬುಧರು ಪಾಳ್ಪುದು ದಯೆಯಿಂ ॥ ॥ ಶ್ರೀ ॥

ವಿಷಯ : ಲೋಕಾನುಭವವನ್ನೊಳಗೊಂಡ ನೀತಿಪದ್ಯಗಳು.

ವಿಶೇಷ : ಸಮಗ್ರವಾಗಿದೆ. ಅಕ್ಷರವು ಸ್ಫುಟ. ಪತ್ರದ ಎರಡೂ ಕಡೆಗಳಲ್ಲಿಯೂ ಬರಹವಿದೆ. ಇದೇ ಪುಸ್ತಕದಲ್ಲಿ ವೀರಭದ್ರಶತಕ, ವೀರೇಶತಾರಾವಳಿ ನವರತ್ನಮಾಲಿಕಾ, ಅಂಬಾನವರತ್ನಮಾಲಿಕಾ (ಸಂ. ಆರ್ಯಾಪಂಚಕ (ಸಂ) ಗಿರಿಜಾಕಲ್ಯಾಣ, ಗೋಪಿಕಾಗೀತೆಯು ಟೀಕು ಮತ್ತು ಮೂರು ಶುದ್ಧ ಪತ್ರಗಳಾದ ಅನಂತರ ವೀರಭದ್ರಾಷ್ಟಕ, ವೀರೇಶಾಷ್ಟಕವೆಂಬ ಕೃತಿಗಳಿವೆ.

—ಕೆಆರ್‌ಎಸ್

## 452

| ಕೆ. ಬಿ. ೬೪೦ | ಮಹಾಕೂಟ ಮಹತ್ವ | ಭಾಮಿನೀಷಟ್ಪದಿ |
|---|---|---|
| ೮.೧″ x ೬.೪″ | ಚನ್ನಬಸವ | ೧೮೬೪ |
| ೧–೩೩ ಪತ್ರ | ೨೦ ಪಂಕ್ತಿ | ೨೮ ಅಕ್ಷರ |

ಆದಿ : ಭಾಮಿನಿ ಷಟ್ಪದಿ ॥ ಸೂಚನಾ ॥
ಒಂದು ದಿನದಲಿ ಮುನಿಗಳ್ಳೆತಂ
ದಿಂದು ಚೂಡಕ್ಷೇತ್ರ ಮಹಿಮೆಯ
ನಂದು ಕೇಳಲ್ಸೂತನೊರೆದಂ ತಾಪಸೋತ್ಕರಕೆ ॥

ಪದ ॥ ಶ್ರೀಮದಖಿಲ ನಿಲಿಂಪನಾಥ
ಸ್ತೋಮ ಮಕುಟ ತಟವಿಘಟಿತ ಮಣಿ
ಧಾಮ ತರಣಿರುಚಿ ಪ್ರಭಾಸಿತ ಪಾದ ಪಂಕೇಜ
ಕಾಮಿತಾರ್ಥ ಸುರಾವ ನೀರುಹ
ಸಾಮಗಾನ ಪ್ರೀತ ಶಾಶ್ವತ
ಧಾಮ ಶಂಕರ ಪಾಲಿಸೆಂನನುದಾರ ಕರುಣದೊಳು ॥ ೧ ॥

ಅಂತ್ಯ : ಯಿಾ ಮಹಾಕೂಟದ ಮಹತ್ವವ
ನಾ ಮಹಾತ್ಮರು ಪೇಳಿದಂತು
ದ್ದಾಮಮಾದಾಸ್ಕಂದ ಪೌರಾಣೋಕ್ತಿಯಿದ್ದಂತೇ

ತಾಮಸ ಪ್ರಜ್ಞೆಯೊಳು ಪೇಳ್ದಂ
ಭೂಮಹಿತ ಶಿವಶಾಸ್ತ್ರ ಸದ್ಗುಣ
ಧಾಮಕಿನಿಪುತ್ತ್ರ ಕವಿಗಳಾಲಿಪುದು ಪದುಳದೊಳು ॥ ೮೫ ॥
ರಸವಸು ತುರಂಗೇಂದು ಗಣನೆಯೊ
ಳೆಸೆವ ಶಾಲಿವಾಹ ಶಕದೊಳು
ಪಸರಿಸಿದ ರಕ್ತಾಕ್ಷಿ ಹಾಯನ ಮಾಘ ಮಾಸದೊಳು
ವಿಶದ ಪಕ್ಷ ದ್ವಾದಶೀಧರ
ಣಿಸುತವಾರದೊಳಾಯ್ತು ಪೂರ್ಣಂ
ಬಸವಕೃಪೆಯಿಂ ವರಮಹಾಕೂಟದ ಚರಿತ್ರಮಿದು ॥ ೮೬ ॥
ಇತೀ ಸಪ್ತಮ ಸಂಧಿಸ್ಸಮಾಪ್ತ :
ಅಂತು ಸಂಧಿ ೭ಕ್ಕಂ ಪದನು ೪೨೮ಕ್ಕಂ ಮಂಗಳಮಸ್ತು. ಶ್ರೀ.

ವಿಷಯ : ಮಹಾಕೂಟದ ಮಹಿಮೆಯನ್ನು ಸೂತಮುನಿಗಳು ತಾಪಸರಿಗೆ ಹೇಳಿದ ವಿವರ.

ವಿಶೇಷ : ಸಮಗ್ರವಾಗಿದೆ. ಪತ್ರದ ಎರಡು ಕಡೆಗಳಲ್ಲಿಯೂ ಬರಹವಿದೆ. ಅಕ್ಷರವು ಚೆನ್ನಾಗಿದೆ.

—ಕೆಆರ್ಎಸ್

## 453

| ಕೆ. ೭೭೩/೧೨ | ಮಹಾದೇವ ರಗಳೆ | ರಗಳೆ |
|---|---|---|
| ೬.೬″ × ೧.೮″ | ತ್ರಿಭುವನತಾತ | ಸು. ೧೧೬೫ |
| ೯೯–೧೦೫ ಪತ್ರ | ೮ ಪಂಕ್ತಿ | ೨೪ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ । ಮಹಾದೇವ ರಗಳೆ ॥

ಕಂದ ॥ ನರಜನ್ಮವೆಂಬುದತಿಸಯ
ಹರಭಕ್ತಿಯೊಳಧಿಕವದರೊಳರಿವಾಗಮಮಂ
ಕರಭ್ರಾಂತನಾಗೆ ಪೋಗದೆ
ಪರಮಾದ ಕೀರ್ತ್ತಿ ಮನು ಮೆರವೆ ಗುರು ವಿಶ್ವೇಶ

ರಗಳೆ ॥ ಶ್ರೀ ಸಮಸ್ತ ಲೋಕಜೀವ ಭವಭರಿತ ಮಹಾದೇವ ॥ ೧ ॥
ಯಿಾಸ ನೀನೆ ಭಕ್ತಿರತಿಯ ಬೆರಸಿ ಬೆಳದೆ ಮಹಾದೇವ ॥ ೨ ॥

ಅಂತ್ಯ : ಶಿವಶಿವ ಮಹಾದೇವ ಹರಹರ ಮಹಾದೇವ ॥ ೯೯ ॥
ಜಯಜಯ ಮಹಾದೇವ ಜಯಜಯ ಮಹಾದೇವ ॥ ೧೦೦ ॥
ಜಯಜಯ ನಮಸ್ತೆ ನಮಸ್ತೆ ನಮಹ ॥

ಕಂದ॥ ಮಹಾದೇವನೆಂದ ಅವನಂ
ಮಹಿಮೆಯೊಳಾಗ ನನವರಥ ಬರದೋಟ ಕೀರ್ತಿಪ ಮನುಜಂ
ಮಹಿಮೆಯೊಳದಗದಿತನಾಗಿಹ
ಅಹಿಭೂಷಣನಿವಂ ಕಾವಂ ಗುರು ವಿಶ್ವೇಶಾ ॥
ಮಹಾದೇವರ ರಗಳೆ ಸಮಾಪ್ತ ಮಂಗಳ ಮಹಾಶ್ರೀ ॥

ವಿಷಯ : ಮಹಾದೇವಸ್ತುತಿ,

ವಿಶೇಷ : ಕೃತಿ ಸಮಗ್ರ. ಇದರೊಡನೆ ಗುರು ರಗಳೆ, ಷಡಕ್ಷರಿಯ ರಗಳೆ, ಶರಣು ಬಸವ ರಗಳೆ, ವೀರಶೈವ ರಗಳೆ, ಭೀಮಕವೀಶ್ವರ ರಗಳೆ, ಸದ್ಗುರು ರಗಳೆ, ಮನೋವಿಕಾರ ರಗಳೆ, ಗುರುಬೋಧಾಮೃತ ರಗಳೆ, ಬಸವರಾಜ ರಗಳೆ, ಲಿಂಗಾರ್ಚನೆ ರಗಳೆ, ಬಸವೇಶ್ವರನ ಪವಾಡದ ರಗಳೆ, ಭಕ್ತಿಬಿನ್ನಹ ರಗಳೆ, ಮಂಗಳಾಷ್ಟಕ (ಶತಗಣನಾಮಸ್ತೋತ್ರ), ಅಷ್ಟಾವರಣದ ಮಂಗಳಾಷ್ಟಕ, ಇಪ್ಪತ್ಮೂರು ಮಂಗಳಾಷ್ಟಕಗಳು, ದೇವೀಸ್ತೋತ್ರ ಇತ್ಯಾದಿಗಳಿವೆ.

—ಎಸ್‌ಎನ್‌ಕೆ

454

| ಕೆ. ೧೪೦೩/೫ | ಮಹಾದೇವ ರಗಳೆ | ರಗಳೆ |
|---|---|---|
| ೮.೭"×೧.೩" | ತ್ರಿಭುವನತಾತ | ಸು. ೧೧೬೫ |
| ೩೨–೪೦ ಪತ್ರ | ೫ ಪಂಕ್ತಿ | ೨೫ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮಹಾದೇವರ ರಗಳೆ ॥ ಕಂದ ॥
ನರಬಲ್ಮೆಯೆಂಬುದು ಅತಿಸಯ
ಹರಭಕ್ತಿ ಆಧಿಕ ನಾದಯೊಳರಿವಾಗವಂ
ಕರಭ್ರಾಂತನಾಗಿ ಹೋಗದೆ
ಪರಮನ ಕೀರ್ತಿಯನೆ ಮೆರವ ಗುರುವಿಶ್ವೇಶಾ ॥ ಕಂದ ॥
ರಗಳೆ ॥
ಶ್ರೀ ಸಮಸ್ತ ಲೋಕ ಜೀವಭಾವಭರಿತ ಮಹಾದೇವ
ಈಶ ನೀನೆ ಭಕ್ತಿರತಿಯು ಬೆರಸಿ ಬೆಳದೆ ಮಹಾದೇವ ॥ ೨ ॥

ಅಂತ್ಯ ಕಂದ ॥
ಮಹಾದೇವರೆಂಬುವವುರ್ವಿಯೊಳು
ನವರಥ ಬಂದೆ ಪೂಜಿಸಿದ ಮರ್ತ್ಯನಹಿಮೆಗ
ಳಿಗೆ ದಿಕ್ಕಣಗಿಹಾ ಗುರುವಿಶ್ವೇಶಾ ॥ ೧ ॥
ಮಹಾದೇವರ ರಗಳೆ ಸಂಪೂರ್ನ ಮಂಗಳ ಮಹಾಶ್ರೀ ಶ್ರೀ,

ವಿಷಯ : ಈಶ್ವರನಸ್ತುತಿ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೦ ಕೃತಿಗಳಿವೆ.

—ಜಿಜಿಎಂ

455

ಕೆ. ಎ. ೫೬೮/೬ ಮಹಾದೇವ ರಗಳೆ ರಗಳೆ

೧೨"×೯.೮" ತ್ರಿಭುವನತಾತ ಸು. ೧೧೬೫

೪೫-೪೮ ಪುಟ ೨೪ ಪಂಕ್ತಿ ೧೯ ಅಕ್ಷರ

ಆದಿ : ಶ್ರೀ ಗಣಾಧಿಪತಯೇ ನಮಃ । ಮಹಾದೇವ ರಗಳೆ ॥

ಕಂದ ॥ ನರಜನದಂಬುದತಿಶಯು
ಹರಭಕ್ತಿಯೊಳಧಿಕವಾದ ಅರಿವಾಗವುಂ
ಕ್ಕರ ಭ್ರಾಂತನಾಗಿ ಪೋಗದೆ
ಪರಮನ ಕೀರ್ತಿಯುನು ಮೆರೆದ ಗುರುವಿಶೆ...ಶಯುರಗಳೆ ॥
ಈಶಾನಿಸುಭಕ್ತಿ ರವಿಯೊಳ್ಬೆರಶಿ ಬೆಳವ ಮಹಾದೇವ
ಉಪಮಿಶಿತನಗ್ರಗಣ್ಯ ಆದಿಲಿಂಗ ಮಹಾದೇವ ॥

ಅಂತ್ಯ : ದೇವ ನಿಮ್ಮ ಮಹಿಮೆಯು ನಾಮುಸ್ಥಳವಿಟ್ಟು ಭವವ ಕಾಣಲಹುದೆ
ಅವಾವಾ ಮನಕೆ ಗೋಚರದೇವ ರಕ್ಷಿಪುದೆನ್ನ ಗುರು ವಿಶ್ವೇಶಂ ॥
ಮಹದೇವನಾ ರಗಳೆ ಸಂಪೂರ್ಣಂ ಮಹಾ ಶ್ರೀ ಶ್ರೀ.

ವಿಷಯ : ಈಶ್ವರನ ಸ್ತುತಿ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಶಿವಶರಣಾಷ್ಟಕಂ ಮೊದಲಾದ ೨೪ ಕೃತಿಗಳಿವೆ.

—ಜಿಜಿಎಂ

456

ಕೆ. ಎ. ೪೨೩/೯ ಮಹಾದೇವ ರಗಳೆ ರಗಳೆ

೮.೪" × ೧೨.೮" ತ್ರಿಭುವನತಾತ ಸು. ೧೧೬೫

೪೦-೪೪ ಪುಟ ೨೬ ಪಂಕ್ತಿ ೧೭ ಅಕ್ಷರ

ಆದಿ : ನರಜಲ್ಮದಂಬುಂದತ್ತತಿಶಯು
ಹರಭಕ್ತಿಯೊಳಧಿಕವಾದ
ಅರಿವಾಗ ವಂಂತರ ಭುಂತನಾಗಿ ಮೊಗದೆ
ನರಮನ ಕೀರ್ತಿಯುನಂ ಮೆರದ ಗುರುಂ ವಿಶ್ವೇಶ ॥

ರಗಳೆ ॥ ಶ್ರೀ ಮಸ್ತು ಲೋಕಜೀವ ಭಾವ ಭರಿತ ಮಹದೇವಾ
ಈಶಾನಿ ಭಕ್ತಿ ರವಿಯೊಳ್ಬೆರಸಿ ಬೆಳವೆ ಮಹದೇವಾ ॥

ಅಂತ್ಯ : ಗುರುವೆ ಪರವೆ ಪರವೆ ಶಿವನೆ ಹರನೆ ಹರನೆ ಮಹದೇವ ಜಯತು ಜಯತು ಮಹದೇವ ಜಯಉನ್ನತ ಮಹದೇವ ದೇವ ನಿಮ್ಮಯ ಮಹಿಮೆಯ ನಾವಂಸ್ಥಳ ವೀರ ಭ. ಣಲಹುದೆ ಆವ ವಾ ಮನಕೆ ಗೋಚರ ದೇವ ರಕ್ಷೆಹುದೆನ್ನ ಗುರುವೆ ಶ್ರೀಕಂಠ ॥

—ಮಹದೇವ ರಗಳೆ ಸಂಪೂರ್ಣಂ—

ವಿಷಯ : ಈಶ್ವರನ ಸ್ತುತಿ

ವಿಶೇಷ : ಇದೇ ಪುಸ್ತಕದಲ್ಲಿ ಗುರುಪಂಚವಿಂಶತಿ, ಗಣಸಹಸ್ರನಾಮ, ಹರಗಣಮಾಲೆ, ಮಲ್ಲಿಕಾಮಾಲೆ, ಸಿದ್ಧೇಶ್ವರನ ಪವಾಡದ ವಚನ—ಇವೇ ಮೊದಲಾದ ೧೯ ಕೃತಿಗಳಿವೆ.

—ವೈಸಿಬಿ

## 457

ಕೆ. ೧೨೦೧/೩ | ಮಹಾದೇವಿಯಕ್ಕಗಳ ಸೃಷ್ಟಿಯ ವಚನ | ವಚನ
೧೭.೩" × ೧.೭" | ಮಹಾದೇವಿಯಕ್ಕ | ಸು. ೧೧೬೦
೮-೯ ಪತ್ರ | ೮ ಪಂಕ್ತಿ | ೭೬ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಅಕ್ಕಗಳು ನಿರೂಪಿಸಿದ ಸೃಷ್ಟಿಯ ವಚನಾ ।
ಆದಿಯನಾದಿಯ ನಿತ್ಯಾನಿತ್ಯವ ತಿಳಿಯಲಱಿಯದೆ । ವಾಯಂಕ್ಕೆ ಪರ ಬ್ರಹ್ಮವ ನುಡಿವ ವಾಯು ಪ್ರಾಣಿಗಳವರೆತ್ತ ಬಲ್ಲರೊ । ಆ ಪರಬ್ರಹ್ಮದ ನಿಜದ ನಿಲವೆಂತೆಂಡೆ । ಆದಿಯೆ ದೇಹ ಅನಾದಿಯೆ ನಿರ್ದೇಹ ಆದಿಯೆ ಸಕಲ ಅನಾದಿಯೆ ನಿಷ್ಕಲ ಆದಿಯೆ ಜಡ ಅನಾದಿಯೆ ಅಜಡ ಆದಿಯ ಕಾರ್ಯ ಅನಾದಿಯೆ ಪ್ರಾಣ

ಅಂತ್ಯ : ಅಜ್ಞಾನಿ ಮುನ್ನವೆ ಅಲ್ಲ ಶೂನ್ಯನಲ್ಲ ನಿಃಶೂನ್ಯ ಮುನ್ನವೇಯಲ್ಲ । ದ್ವೈತಿಯಲ್ಲ ಅದ್ವೈತಿ ಮುನ್ನವೆ ಅಲ್ಲ । ಯಿಂತೀ ಉಭಯಾತ್ಮಕ ನಾನೆಯಾನಿದ ಕಾರಣ ಇದಱಾಗು । ಹೋಗು ಸಕಲ ಸಂಬಂಧವ ಚಂನಮಲ್ಲಿಕಾರ್ಜುನಯ್ಯಾ ನಿಂಮ ಶರಣರೆ ಬಲ್ಲರು । ಅಕ್ಕಗಳು ನಿರೂಪಿಸಿದ ಸೃಷ್ಟಿಯ ವಚನ ಸಂಪೂರ್ಣ ಮಂಗಳ ಮಹಾಶ್ರೀ.

ವಿಷಯ : ಜಗತ್ಸೃಷ್ಟಿಯ ವಿವರಣೆ.

ವಿಶೇಷ : ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಪದಮಂತ್ರಗೋಪ್ಯ, ಹಿರಿಯ ಮಂತ್ರಗೋಪ್ಯ, ಏಕೋತ್ತರ ಶತಸ್ಥಲ, ಪ್ರಭುದೇವರ ಸೃಷ್ಟಿಯ ವಚನ, ಪಂಚೀಕರಣದ ಪದಗಳು, ಕರಣಹಸಿಗೆ ಎಂಬ ಗ್ರಂಥಗಳಿವೆ.

—ವೈಶಿಬಿ

## 458

| ೧೨೦೩/೫ | ಮಹಾದೇವಿಯಕ್ಕಗಳ ಸೃಷ್ಟಿಯ ವಚನ | ವಚನ |
|---|---|---|
| ೧೪.೬" x ೨" | ಮಹಾದೇವಿಯಕ್ಕ | ಸು. ೧೧೬೦ |
| ೮೬–೮೯ ಪತ್ರ | ೧೪ ಪಂಕ್ತಿ | ೮೭ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಅಕ್ಕಗಳು ನಿರೂಪಿಸಿದ ಸೃಷ್ಟಿಯ ವಚನ । ಅಕ್ಕಗಳು । ಉಡುತಡಿಯೆಂಬ ಪಟ್ಟಣದಲ್ಲಿ ನಿರ್ಮಲ ಸುಮತಿಯ ರೆಂಬ ಶಿವಭಕ್ತರ ಗರ್ಭದಲ್ಲಿ ಹುಟ್ಟಿ ತನಗೆ ಮತ್ರಾನವಿಟ್ಟ ಭವಿಯಾದ ಕೌಶಿಕರಾಯನಂ ತ್ಯಜಿಸಿ ವೈರಾಗ್ಯದಿಂದ ನಿರ್ವಾಣಗುಣ ಶೀಲೆಯರಾಗಿ ಕಲ್ಯಾಣ ಪಟ್ಟಣಕ್ಕೆ ಬಂದು ಅಲ್ಲಿ ಬಸವಾದಿ ಪ್ರಮಥ ಗಣಂಗಳ ದರುಶನ ವಾಗಿ । ಅಲ್ಲಿಂದ ಶ್ರಿಶೈಲಕ್ಕೆ ಬಂದು ಚೆನ್ನಮಲ್ಲಿಕಾರ್ಜುನ ಲಿಂಗದ ಕರುಣವ ಪಡೆದು । ಅಲ್ಲಿಂದ ಅಲ್ಲಮಪ್ರಭುಸ್ವಾಮಿಗಳೆಂಬ ಕದಳಿಯಲ್ಲಿ ನಿರ್ವಯಲಾಗಿ ಹೋದ ಮಹಾದೇವಿಯಕ್ಕಗಳೆಂಬ ಚಿತ್ಕೃತಿಯರು । ನಿರೂಪಿಸಿದ ।

ಅಂತ್ಯ : ನಿಮ್ಮ ಭಕ್ತರಾದ ಈ ಮೂವರ ಅಭಿದಾರಸದಿಂದ ಕರಸಿಕೊಂಬಂಥ ಎಲೆ ಲಿಂಗವೆ । ನಿಮ್ಮ ಸ್ವಾಮಿಗಳಪರಾವತಾರ ಮೂರ್ತಿಗಳಾದ । ಶರಣರೆ । ಶಿವಶರಣರೆ । ಬಲ್ಲರು । ತಿಳಿದಪ್ಪರಲ್ಲದೆ । ಮಿಕ್ಕಿನ ಅಜ್ಞಾನ ಜೀವರು ಗಳೊಳಗೆ ಪಾರ್ವತಿಗು ತಿಳಿಯಬಾರದು ಎಂಬುದರ್ಥ । ಅಕ್ಕಗಳು ನಿರೂಪಿ ಸಿದ ಸೃಷ್ಟಿಯ ವಚನ ಸಮಾಪ್ತ ಮಂಗಳ ಮಹಾಶ್ರೀ.

ವಿಷಯ : ಜಗತ್ಸೃಷ್ಟಿಯ ವಿವರಣೆ.

ವಿಶೇಷ : ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಪ್ರಭುದೇವರ ಸೃಷ್ಟಿಯ ವಚನ, ಪಂಚೀಕರಣ, ಕರಣಹಸಿಗೆ, ಏಕೋತ್ತರ ಶತಸ್ಥಲ, ಹಿರಿಯ ಮಂತ್ರಗೋಪ್ಯ ಎಂಬ ಕೃತಿಗಳಿವೆ.

—ವೈಶಿಬಿ

## 459

| ಕೆ. ೧೪೩೫/೬ | ಮಹಾದೇವಿಯಕ್ಕಗಳ ಸೃಷ್ಟಿಯ ವಚನ | ವಚನ |
|---|---|---|
| ೯.೨" x ೨.೨" | ಮಹಾದೇವಿಯಕ್ಕ | ಸು. ೧೧೬೦ |
| ೮೦–೮೨ ಪತ್ರ | ೧೫ ಪಂಕ್ತಿ | ೪೩ ಅಕ್ಷರ |

ಆದಿ : ಶ್ರೀ ಗುರುಮನುಬ್ರಹ್ಮಣೇ ನಮಃ ॥ ಅಕ್ಕಗಳ ಸೃಷ್ಟಿ ಬರೆಯುವದಕ್ಕೆ

ಶುಭಮಸ್ತು ॥ ಆದಿಯನಾದಿ ನಿತ್ಯನಿತ್ಯವನರಿಯಂತಿಳಿಯಲರಿಯದೆ ವಾಯುಕೆ ಪರಬ್ರಹ್ಮವ ನುಡಿವ। ವಾಯು ಪ್ರಾಣಿಗಳವರೆತ್ತ ಬಲ್ಲರೊ। ಆ ಪರ ಬ್ರಹ್ಮದ ನಿಜದ ನಿಲವೆಂತೆಂದಡೆ। ಆದಿಯೆ ದೇಹಾ। ಅನಾದಿಯೇ। ನಿರ್ದೇಹಾ। ಅದಿಯೆ ಸಕಲ। ಅನಾದಿಯೆ ನಿಃಕ್ಕಲ। ಆದಿಯೇ ಜಡ। ಅನಾದಿಯೆ ಅಜಡ। ಆದಿಯೆ ಕಾಯ। ಅನಾದಿಯೆ ಪ್ರಾಣ ಯಿಾ ಯೆರಡರ ಯೋಗವ ಭೇದಿಸಿ ತನ್ನಿಂದ ತಾನೆ ತಿಳಿದು ನೋಡಲು। ಆದಿ ಸರ್ವ್ವದವಪ್ಪ ಭೂತಂಗಳು ತಾನಲ್ಲ। ದಶವಿದೇಂದ್ರಿಯಂಗಳು ನಾನಲ್ಲ। ದಶವಾಯುಗಳು ನಾನಲ್ಲ। ಅಷ್ಟ ಪದಂಗಳು। ಅಷ್ಟ ಷಡ್ವರ್ಗಂಗಳು। ಷಡೂರ್ಮೆಗಳೂ । ಷಡ್ಭ್ರಮೆಗಳು। ಷಡ್ಭಾವ ವಿಕಾರಂಗಳು। ಷಡ್ಕರ್ಮಂಗಳು। ಷಡ್ಸ್ಥಾತುಗಳು।

ಅಂತ್ಯ : ಗುರುವಿನಲ್ಲಿ ಬುಧಪ್ರಸಾದ। ಲಿಂಗದಲ್ಲಿ ಸಿದ್ಧಪ್ರಸಾದಾ। ಜಂಗಮದಲ್ಲಿ ಪ್ರಸಿದ ಪ್ರಸಾದಾ। ಯಿಂತೀ ತ್ರಿವಿಧ ಪ್ರಸಾದವು ಯೇಕಾರ್ತವಾಗಿ। ಮಹಘನ ಪರಿಪೂರ್ನ ಪ್ರಸಾದವಳವಲ್ಲಿ ಶರಣ ಜ್ಞಾನಿಯಲಾ। ಅಗ್ನಾನಿ ಮುನ್ನವೆ ಅಲ್ಲಾ ಬುನ್ನಸಲ್ಲಾ ನೀಬ್ಬುನ್ನಸಲ್ಲಾ ದ್ವೇತಿಯಲ್ಲಾ ಅದ್ವೆಯಿತಿ ಮುನ್ನವೆ ಅಲ್ಲಾ। ಯಿಂತ್ರಿವುಭಯಾತ್ಮಕ ತಾನೆಯಾಗಿಬಾದೂ ಕಾರಣ ಯಿದಾರಿಗು ಹೋಗು ಸಕೀಲ ಸಮ್ಮದವ ಚೆನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರೆ ಬಲ್ಲರೂ ಅಕ್ಕಳ ಸೃಷ್ಟಿ ಸಮಾಪ್ತ ಮಂಗಳ ಮಹಾಶ್ರೀ.

ವಿಷಯ : ಜಗತ್ಸೃಷ್ಟಿಯ ವಿವರಣೆ.

ವಿಶೇಷ : ಇದೇ ಕಟ್ಟಿನಲ್ಲಿ ಮಂತ್ರಗೋಪ್ಯ, ಸಿದ್ಧಲಿಂಗೇಶ್ವರಶತಕ, ಪ್ರಭುದೇವರ ಸೃಷ್ಟಿಯ ವಚನ ಮೊದಲಾದ ಇತರ ೧೦ ಕೃತಿಗಳಿವೆ.

—ವೈಸಿಬಿ

## 460

ಕ. ೧೬೬೧/೫ ಮಹಾದೇವಿಯಕ್ಕಗಳ ಸೃಷ್ಟಿಯ ವಚನ ವಚನ

೯.೪''×೨.೭'' ಮಹಾದೇವಿಯಕ್ಕ ಸು. ೧೧೬೦

೪೨–೪೩ ಪತ್ರ ೯ ಪಂಕ್ತಿ ೪೩ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಅಕ್ಕಗಳು ನಿರೂಪಿಸಿದ ಶೃಷ್ಟಿಯ ವಚನ। ಆದಿ ಅನಾದಿಯ ನಿತ್ಯ ನಿತ್ಯವ ತಿಳಿಯಲಱಿಯದೆ ವಾಯುಕ್ಕೆ ಪರಬ್ರಹ್ಮವನು ನುಡಿವ। ವಾಯು ಪ್ರಾಣಿಗಳವರೆತ್ತ ಬಲ್ಲರೊ। ಅವರ ಬ್ರಹ್ಮದ ನಿಜದ ನಿಲವೆಂತೆಂದೊಡೆ ಆದಿಯೆದೇಹ॥ ಅನಾದಿಯೆ। ನಿರ್ದೇಹ। ಆದಿಯೇ ಸಕಲ। ಅನಾದಿಯೆ ನಿಃಕಲ। ಆದಿಯೆ ಜಡ।

ಅನಾದಿಯೆಂ ಅಜಡ। ಆದಿಯೆ ಕಾಮ। ಅನಾದಿಯೆ ಪ್ರಾಣ। ಈ ಯೆರಡಱ ಯೋಗವ ಭೇದಿಸಿ ತಂನಿಂದ ತಿಳಿದು ನೋಡಲು ಆದಿ ಸಂಬಂಧವಪ್ಪ ಭೂತಂಗಳು ನಾನಲ್ಲ। ದಶವಿದೇಂದ್ರಿಯಂಗಳು ನಾನಲ್ಲ। ದಶವಾಯುಗಳು ನಾನಲ್ಲ। ಅಷ್ಟಮದಂಗಳು ಅರಿಷಡ್ವರ್ಗಂಗಳು।

ಅಂತ್ಯ : ಯಿಂತೀ ತ್ರಿವಿಧ ಪ್ರಸಾದವು ಯೇಕಾರ್ತವಾಗಿ ಮಹಾಘನ ಪರಿಪೂರ್ನ ಪ್ರಸಾದವಳವಟ್ಟ ಶರಣಾಜ್ಞಾನಿಯಲ್ಲ ಅಜ್ಞಾನಿ ಮುನ್ನವೆ ಅಲ್ಲ ಭಾನ್ಯ ನಲ್ಲ, ನಿಂಭಾನ್ಯಮಂನವೆ ಅಲ್ಲ। ದ್ವೈತಿಮಲ್ಲ ಅದ್ವೈತಿ ಮುಂನವೆ ಅಲ್ಲ। ಯಿಂತೀ ವುಭಯಾತ್ಮಕ ತಾನೆಯಾಗಿ। ಇದು ಕಾರಣ ಇದಱಗು ಹೋಗು ಸಕೀಲ ಸಂಬಂಧವ ಚೆಂನಮಲ್ಲಿಕಾರ್ಜುನಯ್ಯ ನಿಂಮ ಶರಣರೆ ಬಲ್ಲರೂ॥ ಶ್ರೀ ಶ್ರೀ ಅಕ್ಕಗಳು ನಿರೂಪಿಸಿದ ಶ್ರುಷ್ಟಿಯ ವಚನ ಸಮಾಪ್ತ ಮಂಗಳ ಮಹಾ ಶ್ರೀ.

ವಿಷಯ : ಜಗತ್ಸೃಷ್ಟಿಯ ವಿವರಣೆ.

ವಿಶೇಷ : ಶಕಟರೇಫದ ಪ್ರಯೋಗವಿದೆ. ಇದೇ ಕಟ್ಟಿನಲ್ಲಿ ಮಂತ್ರಗೋಪ್ಯ, ಪದ ಮಂತ್ರಗೋಪ್ಯ, ಆಚರಣೆಯ ವಚನ, ಸಂಬಂಧದ ವಚನಗಳು ಇವೇ ಮೊದಲಾದ ೧೫ ಕೃತಿಗಳಿವೆ. ಮತ್ತು ಗುರುತಿಸಲಾಗದ ಕೆಲವು ಪತ್ರಗಳಿವೆ.

—ವೈಸಿಬಿ

## 461

| ಕೆ. ಎ. ೩೫೩ | ಮಹಾದೇವಿಯಕ್ಕನ ಪುರಾಣ | ವಿವಿಧ ಷಟ್ಪದಿ |
|---|---|---|
| ೧೩.೧″ × ೮.೩″ | ಚೆನ್ನಬಸವಾಂಕ | ಸು. ೧೫೫೦ |
| ೧–೪೭೮ ಪುಟ | ೨೦ ಪಂಕ್ತಿ | ೧೬ ಅಕ್ಷರ |

ಆದಿ : ಶ್ರೀಮಹಾದೇವಿಯ ಅಕ್ಕನ ಪುರಾಣ
ವಾರ್ಧಕ ಷಟ್ಪದಿ :

ಸೂಚನೆ॥ ಅಂಬಿಕೆಯ ಪತಿಯ ಬೆಸನಿಂಗುಪ್ತಗಣನಾಥ
ನಂಬಿಕಾಸ್ಥಾನ ಕೈದಲ್ಕರಿದು ಚಿತ್ಕಲೆಯಂ
ನಂಬಿಕೆ ಕಳುಪಿದಳ್ವೈರಾಗ್ಯ ಲೀಲೆಯ ಕೂಡಿ ವಿಧಿಸಲೆಂದೂ

ಪದ॥ ಶ್ರೀಗುರುವೆ ನಿಖಿಳ ನಿಗಮಾಗಮ ಸ್ತುತ್ಯಭವ
ಸಾಗರೋತ್ತರಣ ಸಂಚಿತ ಚಿದಾಭರಣ ಸಿತ
ಭೋಗೀಂದ್ರ ಕಟಕ ನಿರುಪಮ ಶುದ್ಧ ಸ್ಫಟಿಕ ಸಂಕಾಶ ಕೀನಾಶನಾಶ
ಯೋಗಿಚಯ ಹೃನ್ನಿಲಯ ಮದನಮದ

ನಾಗದಾನವಶಿಕ್ಷ ನಮಿತಜನ ಪಕ್ಷ ಯಮ
ನೀಗೆ ಮಹಾದೇವಿಯಕ್ಕನಕೃತಿಯನೊರೆವ ಮಲಮತಿಯ ಚಿದ್ಯುತಿಯ
ಧೃತಿಯ

× × × ×

(೩ನೆಯ ಪುಟ)
ಪರಮಪಾವನ ಮಹಾದೇವಿಯಕ್ಕನ ಚಾರು
ಚರಿತೆಯಂ ಪೇಳ್ದ ಹಂಪೆಯ ಹರೀಶ್ವರ ನಿದು
ಗರಿವ ರಘಟಾ ಪ್ರಬಂಧದೊಳು ತತ್ಕಾವ್ಯಮ ನಾರಡಿಗಳಿಂದ ಖಿಳರು
ಅರಿದೆ ನಲ್ಪೇಳೆಂದು ಪೇಳಿಸಿದ ತರುಣ ಹಿಮ
ಕಿರಣಧರನ ಪರಾವತಾರ ವ್ಯಾಘ್ರಾಜಿನಾಂ
ಬರದ ಮದ್ಗುರು ಬಸವರಾಜ ನಾನಾತ ಕಲ್ಪ ಭೂಜಭವ
ನಳಿನರಾಜಾ ॥ ೧೯ ॥

ಕೃತಿಯ ನಾಮಂ ಮಹಾದೇವಿಯ ಪುರಾಣವೀ
ಕೃತಿಗರಸಿಯಾ ಮಹಾದೇವಿಯಕ್ಕಂ ವಿನುತ
ಕೃತಿಗೆ ತೆತ್ತಿಗರಿಳೆಯ ಸದ್ಭಕ್ತಮಾಹೇಶ್ವರರ್ ಪೇಳ್ದ ಕವಿಕಪರ್ದಿ
ಪ್ರತಿಮ ವ್ಯಾಘ್ರಾಜಿನಾಂಬರದ ಕಂಥೆಯ ಚಿದಾನಂದ
ಯತಿಪ ಶ್ರೀ ಗುರು ಬಸವರಾಜನ ಮಳಿನ ಹಸ್ತ
ಶತದೊಳುದ್ಭವ ಚನ್ನಬಸವಾಂಕ ಪಾವನ ಕಳಂಕ ಶಿವಶರಣಲಿಂಕಾ ॥ ೨೦ ॥

ಅಂತ್ಯ : ಶಿವನನಲ್ಲದನಜಸಂಪೆರತವರಿಯದಾ
ಶಿವಧರ್ಮನಿರುತ ಬಸವಾಂಕಗಾ ಗಾಂಬೆಯರ
ಪ್ರವಿಮಳಾತ್ಮಾಬ್ಜ ಸಂಭವ ರುದ್ರಕವಿ ನಾಗಭೂಷಣಾಚಾರ್ಯರಾತ್ಮಾ
ಜೀವ ಜಾತ ಜಾತ ಶಿವಕವಿ ಚನ್ನಬಸವಾಂಕ
ನವಿರಳಾನಂದ ಸದ್ಭಕ್ತಿಯಿಂ ಪೇಳ್ದ ಮಾ
ಶಿವಕಲ್ಪನ ಮೆನಿಪ್ಪ ಕಲ್ಪಾಂಘ್ರಿಪಂ ಪರ್ವಿಪಲ್ಲವಿಸುತಿಕ್ಕೆಯೊಳೂ ॥ ೪೨ ॥

ಅಂತು ಸ್ಥಲ ೩೩ಕ್ಕಂ ಪದ ೧೬೦೪ಕ್ಕಂ ಮಂಗಳಂ.
ಮಹಾದೇವಿ ಅಕ್ಕನ ಪುರಾಣಂ ಸಮಾಪ್ತಂ.

ವಿಷಯ : ಶಿವಶರಣೆ ಅಕ್ಕಮಹಾದೇವಿಯ ಚರಿತ್ರೆ.

ವಿಶೇಷ : ಬರಹವು ಸುಂದರ, ೧೧೧ನೆಯ ಪುಟದವರೆಗೆ ಪಾಠಗಳನ್ನು ಗುರುತಿಸಿದೆ ; ಆದರೆ ಯಾವ ಪ್ರತಿಯಿಂದ ಎಂಬುದು ತಿಳಿಯುವುದಿಲ್ಲ.

—ಕೆಆರ್‌ಎಸ್

## 462

ಕೆ. ೧೪೧೨/೨ ಮಹಾನವಮಿ ಪದಗಳು ಚೌಪದ

೧೩.೨"×೧.೩" ? ?

೩ ಪತ್ರ ೫ ಪಂಕ್ತಿ ೪೨ ಅಕ್ಷರ

ಆದಿ : ಶ್ರೀ ಗಣಾಧಿಪತಯೇ ನಮಃ । ಚಉಪದ ಬರಉವಕ್ಕೆ ಶುಭಮಸ್ತು

ಆಶ್ವೀಜ ಶುದ್ಧ ಮಹಾನರ್ನೇಮಿ ಬರಲೆಂದೂ

ಲೇಸಾಗಿಹಂಶಿದೆ ಉಬಾಲಕರು ಬಂದೂ

ಬಾಲಕರ ಹರಕೆಯು೦ ಕೇಳಿ ಲಾಲಿಪುದೂ

ಬಾಲರೆಲ್ಲರು ಬಂದು ಸಂತೋಷಬಹದೂ

ಶೂಲಿಮಾರ್ತಂಡ್ಯಯಿಂಗಿತವರಲು ನಿಮಗೆ

ಭೂಲೋಕದಲಿ ಕೊಡುವ ಭಾಗ್ಯವು ನಿಮಗೆ

ಮಳಿ ಬಂದು ಬೆಳ ಬೆಳದುಯಿಳಿ ದಣಿಯಲೆಂದು

ಅಂತ್ಯ : ಸ್ವಸ್ತಿರ್ಶ್ಯಮಸ್ತು ಸಕಲೈಶ್ವರ್ಯಮಸ್ತು

ಅಸ್ತು ವಾಹನ ಕೋಟಿ ಸಾಂಬ್ರಾಜ್ಯಮಸ್ತು

ಅಸು ಅನವರತ ಕಂಠಾಭರಣಮಸ್ತು

ಅಸ್ತು ನಿಂಮೆಲ್ಲರಿಗೆ ದೀರ್ಘಾಯುಮಸ್ತು

ಮುಖಕಮಲದಲಿ ನೆಲಸಿಹ ಭಾಗ್ಯಲಕ್ಷ್ಮಿ

ಅಖಿಳಾಂತಕ ತೀರದ ಮೇಲಿಪ್ಪ ವರಲಕ್ಷ್ಮಿ

ಸಕಲ ಭಾಗ್ಯವ ಕೊಡುವ ಶ್ರೀ ಮಹಾಲಕ್ಷ್ಮಿ ಶ್ರೀ ಶ್ರೀ.

ವಿಷಯ : ಬಾಲಕರು ಹರಸುವ ಪದಗಳು.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಚೂಡಾಮಣಿಪ್ರಸಂಗ ಎನ್ನುವ ಕೃತಿಯೂ ಇದೆ.

—ಜಿಜಿಎಂ

## 463

ಕೆ. ೧೮೦೪।೩ ಮಹಾನವಮಿ ಪದಗಳು ಚೌಪದ

೧೭.೩"×೨.೧" ? ?

೧೧ ಪತ್ರ ೮ ಪಂಕ್ತಿ ೨೫ ಅಕ್ಷರ

ಆದಿ : ಶ್ರೀ ವೀತರಾಗಾಯೇಂ ನಮಃ ॥

ವಿಘ್ನಧ್ವಾಂತ ನಿವಾರಣೈಕ ತರಣೀ ವಿಘ್ನಾಟವೀಹವ್ಯವಾಟ್

ವಿಘ್ನವ್ಯಾಳ ಕುಲೋಪಮತ್ತ ಗರುಡೋ ವಿಘ್ನೇಶ ಪಂಚಾನನಾ

ವಿಘ್ನೋತ್ತುಂಗ ಗಿರಿ ಪ್ರಭೇದನ ಪವಿರ್ವಿಗ್ನಾಬ್ಧಿ ಕುಂಭೋದ್ಭವಾ
ವಿಘ್ನಾಗೌಗಗನ ಪ್ರಚಂಡಪವನೋ ವಿಘ್ನೇಶ್ವರ ಪಾತು ಮಾಂ ॥
...... .....
ಸಂಗ್ರಾಮಧನಂಜಯ ಸಾಹಸ ವಿಕ್ರಮಾರ್ಕ ಹರಿ ಕಟಕ ಸಮರ
ಭೇರುಂಡಾ ವೈಯಾಳಿ ಕೋಲಾಹಲಗಗನ ಪ್ರಚಂಡ .. ರಿಪುಧರಣಿ
ಮಂಡಲೇಶ್ವರಾ .....
ಗಜಮುಖನೆ ತ್ರಿಜಗವಂದಿತನೆ ಸರ್ವೇಶಾ
ಭುಜಗಭೂಷಣ ನಂಮ ಸಲಹು ವಿಘ್ನೇಶಾ
ತರಣಿ ಶತಕಿರಣ ಮಣಿಭರಣ ಗಜವದನಾ
ಕರದ ಮೋದಕದ ಬಿದಿಗೆಯ ಚಂದ್ರ ಧರನಾ ...

ಅಂತ್ಯ : ಮುಕುರಕಮಲದಲ್ಲಿ ನೆಲಸಿದ ಭಾಗ್ಯಲಕ್ಷ್ಮಿ
ಅಕಲಂಕ ಬುಜದ ಮೇಲಿಪ್ಪ ಜಯಲಕ್ಷ್ಮಿ
ಸುಖತರದ ಸಿರಿಯೂ ಸಾಮ್ರಾಜ್ಯ ಸಿರಿಲಕ್ಷ್ಮಿ
ಸಕಲ ಭಾಗ್ಯವ ಕೊಡುವ ಶ್ರೀ ಮಹಾಲಕ್ಷ್ಮಿ ॥ ೧೭ ॥

ವಿಷಯ : ಮಹಾನವಮಿಯಲ್ಲಿ ಬಾಲಕರು ಮನೆಗಳ ಮುಂದೆ ಹಾಡುವ ಪದ್ಯಗಳು.

ವಿಶೇಷ : ಸಮಗ್ರ. ಇಲ್ಲಿ ದೇವರುಗಳ ಮೇಲೆ, ಅಧಿಕಾರಿಗಳ ಮೇಲೆ, ಹೆಂಗಸರಮೇಲೆ ಹೀಗೆ ಅನೇಕ ಪದ್ಯಗಳಿವೆ. ಈ ಮಹನೌಮಿ ಪದ, ತೋವಿನಕೆರೆಯಂಕರಿ ತಿರುಮಲೇಶಾ ಎಂದು ೨ನೆಯ ಪತ್ರದಲ್ಲಿ ದೊರೆಯುವ ಉಲ್ಲೇಖದಿಂದ ತೋವಿನಕೆರೆಯ ಪ್ರಾಂತಕ್ಕೆ ಸೇರಿದುದು. ಇದರ ಜೊತೆಗೆ ವಾಗಟೆಪದ ಮುಂತಾದ ೮ ಕೃತಿಗಳಿವೆ.

—ಜಿಜಿಎಂ

## 464

| ಕೆ. ೧೨೩೭ | ಮಹಾಭಿಷೇಕಪೂಜೆ | ಗದ್ಯ, ಪದ್ಯ |
|---|---|---|
| ೧೦.೭''×೧.೨'' | ನೇಮಿಚಂದ್ರ | ಸು. ೧೬೦೦ |
| ೧–೬೧ ಪತ್ರ | ೮ ಪಂಕ್ತಿ | ೪೫ ಅಕ್ಷರ |

ಆದಿ : ಆದಿನಾಥಾಯ ನಮಃ ಸುಭಮಸ್ತು ನಿರ್ವಿಗ್ನಮಸ್ತು ಆಯುರಾರೋಗ್ಯಮಸ್ತು ಅಯಿಶ್ವರ್ಯಾಭಿವೃದ್ಧಿರಸ್ತು ಮಹಾಭಿಷೇಕ ಶುಭಮಸ್ತು ॥
ಶ್ರೀ ಮತ್ರೈಲೋಕ್ಯನಾಥೋ ಜಿನಪತಿಸವನೇ ಮೋಕ್ಷಲಕ್ಷ್ಮಿಕರ ಶ್ರೀ
ರಮರೇಂದ್ರೋನರ ನಾಗವಂದಿತ ಮಹಾ ಶ್ರೀಪಾದ ಪೂಜಾಕ್ರಮಃ ।
ಸಂಮೇರೋವರಸಿಂಹ ಪಿಠರಚಿತಂ ಕಾರುಣ್ಯಯೆರೇತ್ರೈ ಸ್ವರ
ಭವ್ಯನರ್ತತಾಜಿನ ಜಿನಪತಿ ಸರ್ವಜ್ಞ ಸಮನೋತ್ಸವೇ ॥

ಅಂತ್ಯ : ಶ್ರೀಮಂದಮರೇಂದ್ರವಂದಿತ ॥
ಜ್ಞಾನಸಾಗರ ಪೂರ್ಣ ॥ ಜಾತಿಜರೇ ಮರಣಂ ॥
ಕಳಗೆ ಕುಚದ ಸೆಕಾರಿ ॥
ಮೊಗ್ಗೆ ಪಾಣದಮೊ ।
ಪದ್ಮರಾಗ ಗ್ರೀ=
ಕ್ಷೀರಪುರದೋ ॥

ವಿಷಯ : ದೇವೇಂದ್ರನು ಜಿನಶಿಶುವಿಗೆ ಅಭಿಷೇಕವನ್ನು ಮಾಡುವ ವಿಧಿವಿಧಾನ.

ವಿಶೇಷ : ಅಕ್ಷರ ಚೆನ್ನಾಗಿದೆ. ಅಶುದ್ಧ. ಅಪೂರ್ಣ ಗ್ರಂಥವಾಗಿದೆ.

—ಎಂಸಿಪಿ

## 465

| ಕ. ೧೨೩೮ | ಮಹಾಭಿಷೇಕ ಪೂಜೆ | ಶ್ಲೋಕ, ವೃತ್ತ |
|---|---|---|
| ೮″ × ೧.೫″ | ನೇಮಿಚಂದ್ರ | ಸು. ೧೬೦೦ |
| ೧–೮೧ ಪತ್ರ | ೭ ಪಂಕ್ತಿ | ೨೮ ಅಕ್ಷರ |

ಆದಿ : ಶ್ರೀ ಮತ್ಪಂಚಗುರುಭ್ಯೋ ನಮಃ ಶಾರದಾತಾಯೇ ನಮಃ ನಿರ್ವಿಘ್ನ ಮಸ್ತು ಪೂಜೆ ಮಂತ್ರ ॥
ಶ್ರೀಮತ್ಪರಮಗಂಭೀರ
ಸ್ಯಾದ್ವಾದಮೋಘಲಾಂಛನಂ ।
ಜಾಯಾತ್ತ್ರೈಲೋಕ್ಯನಾಥಸ್ಯ
ಶಾಸನಂ ಜಿನಶಾಸನಂ ॥ ೧ ॥
ಯಮೋಪಗಾದ್ಯೋತ್ತಮ ತೀರ್ಥವಾರಾ
ಧಾರಾವರಾಭೋಜಪ್ರರಾಗಸಾರಾ
ತೀರ್ಥಂಕರಾಣಾಮಹಪೀಠಿಕಾಗ್ರೇ
ಸ್ವಯಂರಲ್ಪಟ್ಟಿತ್ವತ್ರಿ ಜಗತ್ಪರಾತು ॥
ಓಂ ಹ್ರೀಂ ನಮಃ ಪರಮಬ್ರಹ್ಮಣೇ ಅನಂತಾನಂತ ಜ್ಞಾನಶಕ್ತಯೇ ಜಲಂ ನಿರ್ವಪಾಮಿಸ್ವಾಮಿ ॥

ಅಂತ್ಯ : ಸರ್ವಗ್ರಾಮ ನಗರ ಖರ್ವಡ ಮಡಂಬ ಪತ್ತನ ದ್ರೋಣಮುಖ ಸಿಂಹಾನಂದಂ ಕುರು—ಸರ್ವನಂದಂ ಕುರು—ಸರ್ವಲೋಕಸತ್ವವಶಂ ಕುರು—ಹನ— ಪಚ—ತಾಪ್ಸಿಂ ಸರ್ವಮಾಸಯ ಓಂ ಫಟ್ ಸ್ವಾಹಾ ॥

ವಿಷಯ : ಮಹಾಭಿಷೇಕ ಪೂಜೆ.

ವಿಶೇಷ : ಅಕ್ಷರ ಚೆನ್ನಾಗಿದೆ. ಶುದ್ಧ ಸಾಮಾನ್ಯ. ಪ್ರಾರಂಭದಲ್ಲಿ ಸರಸ್ವತಿಸ್ತೋತ್ರ

ವಿರುವ ಒಂದು ಓಲೆ ಮಾತ್ರವಿದೆ. ೯, ೩೫, ೫೪ ೧೦೮ ಕಲಶ ಅಭಿಷೇಕದ ಸಾಮಾನಿನ ವಿವರ ಬರೆಯಲಾಗಿದೆ.

—ಎಂಸಿಪಿ

## 466

| ಕೆ. ೧೧೮೨/೭ | ಮಹಾಮೇರುವಿನ ಸ್ವರ | ಗದ್ಯ |
|---|---|---|
| ೧೦.೨"×೧.೩" | ? | ? |
| ೨೭–೨೯ ಪತ್ರ | ೫ ಪಂಕ್ತಿ | ೨೮ ಅಕ್ಷರ |

**ಆದಿ :** ಸಿವಾಯೆಂ ನಮಃ ಮಹಂ ಮೇರುವೆ ವಿಸ್ತರ ॥
ಅಂಡಜ । ಪಿಂಡಜ । ಉದ್ಭುಜ । ತಮಂದ । ತಾರಜ । ಬೀನಜ । ಬಿಂಬಯುಕ್ತ । ಅವೆಯಿಕ್ತ । ಆಮದಯಿಕ್ತ । ಮಣಿರಾ । ಮೇನರಣ । ವಿಶ್ವವನು । ಅಲಾಂಕೃತಿ । ಕೃತಿಯುಗ । ತ್ರೇತಯುಗ । ದ್ವೀವರ । ಕಲಿಯುಗ । ಯಿತ್ರಿ । ಹದಿಯೆಂಟು ।

**ಅಂತ್ಯ :** ಅಂತ ಗಲುದ । ಯೆರಡು ಕೋಟಿ । ಯೇವತುತೊ ಮುಂಬಾಕಂ । ಲಕ್ಷಾದ್ಯ । ತೊಂಬಾತು ಯೆಟು ಸಾವಿರ ವರಿಷ ಮಣಮಾಹ ಮೇರುವೆ । ಆಮುಂ ಮೇರುವೆ ಮೇಲೆ । ಬ್ರಹ್ಮ ವಿಷ್ಣು ರುದ್ರಾ ಆನಂತೆ ತಾ ವೃತಾ ಗಣಗಳುನುರದಿಂ ರಾಜ್ಯವ ಗೆವುತಿದರು ॥ ೧ ॥

**ವಿಷಯ :** ಮಹಾ ಮೇರುವಿನ ವಿವರ.

**ವಿಶೇಷ :** ಅಶುದ್ಧ, ಅಸಮಗ್ರ ಪ್ರತಿ. ಇದೇ ಕಟ್ಟಿನಲ್ಲಿ ಸಂಸ್ಕೃತ ಶ್ಲೋಕಗಳು, ಶಿವನ ಕುರಿತ ಹಾಡುಗಳು, ಅಷ್ಟಕಗಳು, ಉರಿಲಿಂಗಪೆದ್ದಿಯ ವಚನ, ಶಿವ ಸ್ತುತಿ ಈ ಗ್ರಂಥಗಳಿವೆ.

—ವೈಸಿಬಿ

## 467

| ಕೆ. ೧೧೩೯/೨೭ | ಮಹಿಮಾ ಶತಕ | ವೃತ್ತ |
|---|---|---|
| ೭"×೨" | ? | ? |
| ೩೮–೫೧ ಪತ್ರ | ೧೧ ಪಂಕ್ತಿ | ೪೦ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ಮಹಿಮಾಶತಕ ॥
ಶ್ರೀಮತ್ಪರ್ವ್ವತ ಕನ್ಯ ಕಾಥ ವಸುರಾಮಾಸಾದ್ರಿ ಕೋದಂಡ ಪೌ
ಲೋಮಿಾವಲ್ಲಭ ವಿಷ್ಣುಕಂಜ ಜನತ ಶ್ರೀಪಾದಪಂಕೇಜ ಭೂ
ವ್ಯೋ ಮಾರ್ಕ್ಕಾನಲ ಗಂಧವಾಹ ಶಶಿತೋಯಾತ್ಮಾಂಗ ಸರ್ವ್ವಜ್ಞ ನಿಃ
ಕಾವಹಾನಿಸಿರದೆಂನ ರಕ್ಷಿಸಮಲ ಶ್ರೀಕಂಠ ಸೋಮೇಶ್ವರಾ ॥ ೧ ॥

ಅಂತ್ಯ : ದಕ್ಷೋದಕ್ಷಮುಖಕ್ಷಯೇ ಕ್ಷಿತಿಲಸಲ್ಲಕ್ಷ್ಮೀಶ ಲಕ್ಷ್ಮಕ್ರುತೋ
ಕರ್ತ್ಯಾ ಕೃಂತನ ಮುತ್ತಮಸ್ಯಮ ಶಿರಃ ಸದ್ವ ಹ್ನಿ ಜಿಂಹ್ವಾಹರಃ
ವಾಣೀ ಘ್ರೂಣ ವಿನಾಶರೋ ಭಗ ರವೇಃ ಪೂಷ್ಣಾಕ್ಷಿ ದಂತಕ್ಷತಿಂ ।
ಭದ್ರೋ ರುದ್ರ ಶತೇಸ್ವರೋ ವಿಜಯತೇ ಶ್ರೀ ವೀರಭದ್ರೇಶ್ವರಃ
॥ ೧೧೧ ॥

ಮಹಿಮಾಶತಕ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಶಿವಮಹಿಮೆ.

ವಿಶೇಷ : ಶಿವಮಹಿಮೆಯನ್ನು ಕುರಿತು ಬರೆದಿರುವ ಈ ಪದ್ಯಗಳನ್ನು ಅನೇಕ ಶತಕಗಳಿಂದ ಸಂಗ್ರಹಿಸಿದ್ದಾನೆ. ಕೃತಿ ಸಮಗ್ರ. ಈ ಗ್ರಂಥವಲ್ಲದೆ ಇದರೊಂದಿಗೆ ಇನ್ನೂ ೩೩ ಗ್ರಂಥಗಳಿವೆ. ಅವುಗಳಲ್ಲಿ ಕೆಲವು ಸಂಸ್ಕೃತ ಗ್ರಂಥಗಳು.

—ಎಸ್‌ಬಿ

## 468

| ಕೆ. ೧೦೦೯/೬ | ಮಹಿಮಾ ಶತಕ | ವೃತ್ತ |
|---|---|---|
| ೧೪.೨" × ೨.೯" | ? | ? |
| ೬೪–೭೩ ಪತ್ರ | ೮ ಪಂಕ್ತಿ | ೬೦ ಅಕ್ಷರ |

ಆದಿ : ಮಹಿಮಾಶತಕ ॥ ಶಾರ್ದೂಲ ವೃತ್ತ ॥
ಶ್ರೀಮತ್ಪದ್ಮ ಜಪ ಪದ್ಮನಾಭ ವಿನುತ ಶ್ರೀಪಾದ ಪದ್ಮ ದ್ವಯಾ
ಕಾಮೋದ್ಗರ್ವ ತಮಃ ಪ್ರಚತರ ಮಾರ್ತಾಂಡ ಪ್ರಶಸ್ತವೃತೀ
ಸ್ತೋಮಂ ಸ್ವಾಂತ ನಿಶಾಂತ ನಿರುಪಾದಿ ಜ್ಯೋತಿ ಮೋಕ್ಷ ಪ್ರದಾ
ಸ್ವಾಮಿ ಶ್ರೀ ಗಿರಿನಾಥ ರಕ್ಷಿಸೊಲವಿಂ ಶ್ರೀ ಚಂನ ಮಲ್ಲೇಶ್ವರಾ ॥ ೧ ॥

ಅಂತ್ಯ : ಸ್ತುತಿಯಂ ಗುರುಕರುಣದಿಂದೆ ಪೇಳ್ದಂ ಸ್ವಯು ಸೋ
ಜಿತ ಮಲ್ಲಿಕಾರ್ಜುನಂ ಪರಿಹೃತ ಪರಮತ ಚಂನಮಲ್ಲಿಕಾರ್ಜುನದೇವಂ
॥ ೧೦೪ ॥

ಶಿವ ಮಹಿಮಾಶತಕಂ ವೈ
ಷ್ಣವ ವಾಗದ್ವೈತಿಕ ಕರ್ಮಿಗಳ ಹೃತ್ಸಲ್ಯಂ
ಪ್ರವರ ಶಿವಭಕ್ತ ಪರೀಷದ
ಭವರನ ದೊಳೆಯು ಬೇಳ್ಪರಲ್ಲೆ ದೀಪ್ತಕೆಯೆನಿಕ್ಕುಂ ॥ ೧೦೫ ॥
ಶ್ರೀಮಹಿಮ ಶತಕಂ ಸಂಪೂರ್ಣಂ ಮಂಗಳ ಮಹಾ ಶ್ರೀ.

ವಿಷಯ : ಶಿವ ಮಹಿಮೆ.

ವಿಶೇಷ : ಸಮಗ್ರ, ಶಕಟರೇಫವನ್ನು ಕೃತಿಯಲ್ಲಿ ಬಳಸಿದೆ. ಪ್ರತಿಯೊಂದು ವೃತ್ತವೂ

'ಶ್ರೀ ಚನ್ನಮಲ್ಲಿಕಾರ್ಜುನಾ' ಎಂಬ ಅಂಕಿತದಲ್ಲಿ ಕೊನೆಯಾಗುತ್ತದೆ. ಇದೇ ಕಟ್ಟಿನಲ್ಲಿ ವೈರಾಗ್ಯಷಟ್ಪದಿ, ಶಿವಲಿಂಗಷಟ್ಪದ ಲಿಂಗಸ್ತೋತ್ರದ ಷಟ್ಪದ ಇತ್ಯಾದಿ ಒಟ್ಟು ೯ ಕೃತಿಗಳಿವೆ.

—ಕೆಎಲ್‌ಎಸ್

## 469

ಕೆ. ೧೭೫೦।೨೧ ಮಹಿಮಾ ಶತಕ ವೃತ್ತ
೧೦.೨"×೧.೯" ? ?
೧೦೨–೧೧೧ ಪತ್ರ ೧೦ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀ ಗುರುಬಸವಲಿಂಗಾಯನಮಃ। ಮಹಿಮಾಶತಕವ ಬರವುದಕ್ಕೆ ಶುಭಮಸ್ತು ॥

ಶ್ರೀಮತ್ಪದ್ಮಜ ಪದ್ಮನಾಭ ವಿನುತು ಶ್ರೀಪಾದಪದ್ಮದ್ವಯಂ
ಕಾಮೋದ್ಗರ್ವತಮಃ ಪ್ರಚಂಡತರ ಮಾರ್ತಂಡ ಪ್ರಶಸ್ತವ್ರತೆ
ಸ್ತೋಮಸ್ವಾಂತ ನಿಶಾಂತಕಾಂತ ನಿರುಪಾದಿಜ್ಯೋತಿ ಮೋಕ್ಷಪ್ರದಾ
ಶ್ವಾಮಿ ಶ್ರೀಗಿರಿನಾಥ ರಕ್ಷಿಸೊಲವಿಂ ಶ್ರೀಚೆನಮಲ್ಲೇಶ್ವರಾ ॥ ೧ ॥

**ಅಂತ್ಯ:** ಶ್ರುತಿಸೂಕ್ತಿರತ್ನಮಾಲಾ
ಸ್ತುತಿಯಂಗರುಣದಿಂದೆ ಪೇಳ್ದಂ ಸ್ವಯಶೋ
ರ್ಜಿತ ಮಲ್ಲಿಕಾರ್ಜುನ ಪರಿ
ಹೃತ ಪರವಂತ ಚೆನಮಲ್ಲಿಕಾರ್ಜುನ ದೇವಂ ॥ ೧೧೪ ॥
ಶಿವಮಹಿಮಾಶತಕಂ ವೈ
ಷ್ಣವವಾಗದ್ವೈತಿ ಕರ್ಮಿಗಳ ಹೃತ್ಸಲ್ಯಂ
ಪ್ರವರ ಶಿವಭಕ್ತಪರಿಷಂ
ದ್ಭುವನದೊಳಿದು ಬೇಳ್ವರ ಕೈದೀಪಿಕೆಯೆನಿಕುಂ ॥ ೧೧೫ ॥

**ವಿಷಯ :** ಶಿವಮಹಿಮೆ.

**ವಿಶೇಷ :** ಇದೇ ಕಟ್ಟಿನಲ್ಲಿ ಬಸವಸ್ತೋತ್ರದ ತ್ರಿವಿಧಿ, ಶಂಕರದೇವರ ಕಂದ, ಮರುಳ ದೇವರ ಕಂದ, ಮಹದೈಪುರೀಶ್ವರಶತಕ ಮೊದಲಾದ ೨೮ ಕೃತಿಗಳಿವೆ.

—ವೈಸಿಬಿ

## 470

ಕೆ. ೧೧೫೮/೧ ಮಹಿಮ್ನ ಸ್ತೋತ್ರ (ಸಟೀಕು) ಶ್ಲೋಕ, ಟೀಕು
೧೬"×೨" ಗುರುದೇವ ಸು. ೧೩೫೦
೧–೧೫ ಪತ್ರ ೮ ಪಂಕ್ತಿ ೬೫ ಅಕ್ಷರ

**ಆದಿ:** ಶ್ರೀ ಗುರುಭ್ಯೋಂ ನಮಃ। ಶ್ರೀ ಗುರುಬಸವಲಿಂಗಾಯ ನಮಃ......

೦ಬಿ ಸಂವತ್ಸರದ ಕಾರ್ತೀಕ ಬಹುಳ ೭ಯಲ್ಲು ಗುರುವಾರ ಪುಷ್ಯ ನಕ್ಷತ್ರದ
......ವಂದೇವೇಶಂ ಭಕ್ತಾನಾಂ। ಭೋಗ ಮೋಕ್ಷದಂ। ತತ್ವಾವೇಶಂ
ತತ್ವಸಂಸ್ಥನ್ನಮಾಮಿ ಶುಭದಂ ಶಿವಂ

ವೃತ್ತ ॥ ಮಹಿಮ್ನಃ ಪಾರಂತೇ ಪರಮ ವಿದ್ಯುಷೋಯಂದ್ಯ ಸದೃಶೀ
ಸ್ತುತಿ ಬ್ರಹ್ಮಾದಿನಾಮ ಪಿತದವ ಸಂನಾಸ್ವ್ತಯಿಗಿರಃ
ಅತವಾಚ್ಯ ಸರ್ವ ಸ್ವಮತಿ ಪರಿಣೀಮಾವ ದಿಗ್ರುಣನ್
ಮಮಾಪ್ಯೇಷ ಸ್ತೋತ್ರೆ ಹರ ನಿರಪವಾದಃ ಪರಿಕರಃ

ಟೀಕು ॥ ಭೋಹರಃ—ಯೆಲೆ ಭಕ್ತರುಗಳ ದುರಿತಹರವೆ ತೆ—ನಿನ್ನ ಮಹಿಮ್ನ—
ಮಹತ್ವದ

ಅಂತ್ಯ : ವೃತ್ತ ॥ ಅಸಿತಗಿರಿ ಸಮಂ ಸ್ಯಾತ್ಕಜ್ಜಲಂ ಸಿಂಧುಪಾತ್ರೇ
ಸುರ ತರುವರ ಶಾಖಾ ಲೇಖಿನೀ ಪ. ಮುರ್ವೀ ......
ಗಣವಂದು ಬಾಗೆಯುನೆಯ್ದುಲಂ। ನಾರ್ಹಂತಿ। ...... ॥ ೩೮ ॥ ಯಿತೀ
ಶ್ರೀಮದ್ವೇದಾಗಮೋಪ ನಿಷತ್ಪುರಾಣೋಕ್ತ ಮಾರ್ಗಪ್ರವರ್ತನ ಪ್ರವೀಣ
ಪಂಡಿತಾರಾಧ್ಯದೇವ ನಾಮಾಚಾರ್ಯವರ್ಯ ತ ಭವ ಗುರುಲಿಂಗದೇವ
ನಾಮಧೇಯ ದೇಶೀಕೇಂದ್ರ ಪ್ರತೀಕೋದ್ಭವ ಗುರುದೇವಾಖ್ಯೇನ ಕರ್ನಾಟ
ಭಾಷಾಕೃತ ಮಹಿಸ್ತವ ಟೀಕಾ ಪರಿಸಮಾಪ್ತಃ ಶ್ರೀ ಶ್ರೀ.

ವಿಷಯ : ಶಿವಮಹಿಮೆ.

ವಿಶೇಷ : ೧ ಮತ್ತು ೨ನೆಯ ಓಲೆಗಳು ಮುರಿದಿವೆ. ೧೪ನೆಯ ಓಲೆ ಇಲ್ಲ. ಇದೇ
ಕೃತಿಯಲ್ಲಿ ಮಲುಹಣ ಸ್ತೋತ್ರದ ಟೀಕು ಮೊದಲಾದ ಇತರ ನಾಲ್ಕು
ಕೃತಿಗಳಿವೆ.

—ವೈಸಿಬಿ

## 471

| ಕೆ. ೧೧೭೨/೧ | ಮಹಿಮ್ನಸ್ತೋತ್ರ (ಸಟೀಕು) | ಶ್ಲೋಕ, ಟೀಕು |
|---|---|---|
| ೮"×೨" | ಗುರುದೇವ | ಸು. ೧೩೫೦ |
| ೧–೯೧ ಪತ್ರ | ೧೧ ಪಂಕ್ತಿ | ೩೫ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ಸ್ತೋತ್ರರತ್ನಾಕರಕ್ಕೆ ಶುಭಮಸ್ತು
ಮಹ್ನಿಮಸ್ತೋತ್ರದ ಟೀಕು.
ದೇವಾದಿದೇವಂ ದೇವೇಂಶಂ ಭಕ್ತಾನಾಂ ಭೋಗಮೋಕ್ಷದಂ
ತತ್ವಾತಿತಂ ತತ್ವಸಂಸ್ಥಂ ನಮಾಮಿ ಶುಭವಂ ಶಿವಂ ॥ ೧ ॥

ಅಂತ್ಯ : ಇತಿ ಶ್ರೀಮದ್ವೇದಾಗಮೋಪನಿಷತ್ಪುರಾಣೋಕ್ತ ಮಾರ್ಗ ಪ್ರವರ್ತನ ಪ್ರವೀಣ ಪಂತಾರಾಧ್ಯದೇವನಾಮಾಚಾರ್ಯವರ್ಯ ತನೂ ನವಗುರು ಲಿಂಗದೇವನಾಮಧೇಯ ದೇಶಿಕೇಂದ್ರ ಪ್ರತಿಕೋದ್ಭವ ಗುರುದೇವಾ ಖ್ಯೇನಾ ಕರ್ನಾಟಕ ಭಾಷಾಕೃತಂ ಮಹಿಮ್ನಸ್ತವ ಟೀಕ ಪರಿಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ.

ವಿಷಯ : ಶಿವನ ಸ್ತೋತ್ರ.

ವಿಶೇಷ : ಇದರ ಜೊತೆಯಲ್ಲಿ ಮಲ್ಹಣಸ್ತೋತ್ರ ಟೀಕು, ಹಲಾಯುಧಸ್ತೋತ್ರ ಟೀಕುಗಳಿವೆ. ಅಕ್ಷರ ಚೆನ್ನಾಗಿದೆ. ಶುದ್ಧವಾಗಿದೆ.

—ಎಂಸಿಪಿ

## 472

ಕೆ. ೧೮೫೭/೪ ಮಹಿಮ್ನಸ್ತೋತ್ರ (ಸಟೀಕು) ಶ್ಲೋಕ, ಗದ್ಯ
೮.೮″ × ೨″ ಗುರುದೇವ ಸು. ೧೬೫೦
೧–೧೫ ಪತ್ರ ೯ ಪಂಕ್ತಿ ೪೨ ಅಕ್ಷರ

ಆದಿ : ಶ್ರೀಮತ್ಸಂಖ್ಯಾತ ಗಣೇಶ್ವರಾಯ ನಮಃ ॥
ಮಹಿಮ್ನಸ್ತೋತ್ರದ ಟೀಕು ।
ಮಹಿಮ್ನಾ ಪಾರಂ ಪರಮ ವಿದುಷಾ......
ಶಿ ಸ್ತುತಿರ್ಬ್ರಹ್ಮಾದಿ ನಾಮ ಪಿದವ ನಿಂ ನಾಸ್ತಿ ಯಿನಿ...

× × × ×

ಟೀಕು ॥ ಹೇ ಹರನೆ । ಎಲೇ ಸದಾಶಿವನೆ । ತೆ । ನಿಂನ । ಮಹಿಮ್ನಾಃ । ಮಹತ್ವದ ಪಾರಂ । ಸ್ತೋತ್ರೆ ಹರನಿರುಪ ವಾದಂಷಃ ॥ ಅಳಿಯದಿದ್ದಂಥಾ । ಮಮ । ನನಗೆ । ಸ್ತುತಿಃ । ಸ್ತೋತ್ರವ ಮಾಡುವ ಹತನವು ॥

ಅಂತ್ಯ : ದಿಕ್ಷ ಧ್ಯನಂತಪಸ್ತಿರ್ಥಂದಾನಂ ಯಾಜ್ಞಾದಿಕಾ ಕ್ರಿಯಾಃ । ಮಹಿಮ್ನ ಸ್ತವ ಪಾಠಸ್ಯ ಕಲಾನಾರ್ಹಂತಿ ಶೋಡಶಿಂ ॥ ಮಹೇಶಾನ್ನಾಪರೊ ದೇವೊ ಮಹೀಮ್ನೋ ನಾಪರಸ್ತವಃ । ಅಘೋರಾನ್ನಾ ಪರೋ ಮಂತ್ರೋ ನಾಸ್ತಿ ತತ್ವಂ ಗುರೋ ಪರಃ । ॥ ೩೭ ॥ ಇತಿ ಮಹಿಮ್ನಸ್ತೋತ್ರ ಸಮಾಪ್ತಂ ಮಂಗಲ ಮಹಾ ಶ್ರೀ ಶ್ರೀ

ವಿಷಯ : ಶಿವನ ಸ್ತೋತ್ರ.

ವಿಶೇಷ : ಸಮಗ್ರ ಕೃತಿ. ಸುಂದರ ಬರವಣಿಗೆ. ಇದರೊಂದಿಗೆ 'ಶ್ರೀ ರುದ್ರ ಭಾಷ್ಯ' ಮುಂತಾದ ಕೃತಿಗಳಿವೆ.

—ಎಂಪಿಎಂ

473

ಕೆ. ಎ. ೪೮೭ ಮಹಿಮ್ನಸ್ತೋತ್ರ (ಸಟೀಕು) ಶ್ಲೋಕ, ಟೀಕು
೧೨.೧"×೯.೭" ಗುರುದೇವ ಸು. ೧೩೫೦
೧–೩೩ ಪುಟ ೨೪ ಪಂಕ್ತಿ ೨೬ ಅಕ್ಷರ

ಆದಿ : ನುತ ಪಂಚಾಕ್ಷರೀ ಮಂತ್ರಹೃದ್ಯಾಯಿಹಾಮಲ ಚೇತಸೇ
ನಮಚ್ಛನ್ನಿಮದಯೇ ಚೋಳ ಮಲ್ಲಿಕಾರ್ಜುನಯೋಗಿನೇ
ದೇವಾದಿದೇವಂ ದೇವೇಶಂ ಭಕ್ತಾನಾಂ ಭೋಗ ಮೋಕ್ಷದಂ
ತತ್ವಾತತಂ ತತ್ವಸಂಸ್ಥಂ ನಮಾಮಿ ಶುಭದಂ ಶಿವಂ
ಶ್ರೀಮದುಮಾಕಾಂತನನು ಸ್ತೋತ್ರವ ಮಾಡಲು ಪ್ರಾರಂಭಿಸುತ್ತಿದ್ದಂಥಾ ಸ್ತೋತ್ರ ಕರ್ತೃವು ಆ ಪರಮೇಶ್ವರನ ಮಹತ್ವದ ಪೌರತ್ವದಿಂದ ಸ್ತುತಿ ಪ್ರವೃತ್ತಿಯು
ಸಂಭವದಿಂದಾಕ್ಷೇಪಿಸಿ ಸ್ತೋತ್ರವನ್ನು ಮಾಡುತಿರ್ದಪಂ
ಮಹಿಮ್ನಃ ಪಾರಂ ತೇ ಪರಮವಿದುಷೋ ಯದ್ಯಸದೃಶೀ
ಸ್ತುತಿರ್ಬ್ರಹ್ಮಾದಿನಾಮಪಿ ತದವಸನ್ನಾಸ್ತ್ವಯಿ ಗಿರಃ
ಅಥಾ ವಾಚ್ಯಃ ಸರ್ವಃ ಸ್ವಮತಿ ಪರಿಣಾಮಾವದಿ ಗೃಣನ್
ಮಮಾಪ್ಯೇಷಃ ಸ್ತೋತ್ರೇ ಹರ ನಿರಪವಾದಃ ಪರಿಕರಃ

× × × ×

ಈ ಪ್ರಕಾರವಾಗಿ ಪರಮೇಶ್ವರನ ಮಹತ್ವವು ವಾಚಾಮಗೋಚರವಾದ ಕಾರಣಸ್ತುತಿ ನಿರರ್ಥಕದಿಂದ ಶಂಕಿಸಿ ಸಮ್ಯಕ್ಕಾಗಿ ಹೇಳುತಿರ್ದಪಂ

ಅಂತ್ಯ : ದೀಕ್ಷಾದಾನತಹಸ್ತಿರ್ಥಂ ಹೋಮಯಜ್ಞಾದಿಕಾಃ ಕ್ರಿಯಾಃ
ಮಹಿಮ್ನಸ್ತವ ಪಾಠಸ್ಯ ಕಲಾಂ ನಾರ್ಹಂತಿ ಷೋಡಶೀಂ
ದೀಕ್ಷಾ ದೀಕ್ಷೆಯು ದಾನದಾನಂಗಳು ತಪಃ ತಪಸ್ಸುಗಳು ತೀರ್ಥಂ ತೀರ್ಥಂಗಳು ಹೋಮ ಹೋಮಂಗಳು ಯಜ್ಞಾದಿಕಾಃ ಕ್ರಿಯಾಃ ಯಜ್ಞಾದಿ ಕ್ರಿಯೆಗಳು ಮಹಿಮ್ನಸ್ತವ ಪಾಠಸ್ಯ ಮಹಿಮ್ನಸ್ತೋತ್ರ ಪಾಠಕನ ಷೋಡಶೀಂ ಕಲಾಂ ಹದಿನಾರನೆಯ ಭಾಗದೊಳಗಣ ಒಂದು ಭಾಗವನ್ನು ಹೊಂದಲು ನಾರ್ಹಂತಿ ಸಮರ್ಥವಾಗುವುದಿಲ್ಲ.
ಇತಿ ಶ್ರೀಮದ್ವೇದಾಗಲೋಪನಿಷತ್ ಪುರಾಣೋಕ್ತ ಮಾರ್ಗಪ್ರವರ್ತನ ಪಂಡಿತಾರಾಧ್ಯದೇವನಾಮಾಚಾರ್ಯವರ್ಯ ತನುಭವ ಗುರುಲಿಂಗ ನಾಮಧೇಯ ದೇಶಿಕೇಂದ್ರ ವ್ರತಿಕೋದ್ಭೂತ ಗುರುದೇವಾಖ್ಯೇನ ಕರ್ಣಾಟಕ ಭಾಷಾಕೃತ ಮಹಿಮ್ನಸ್ತವ ಟೀಕು ಸಮಾಪ್ತಃ ಮಂಗಳಂ ಶ್ರೀ.

ವಿಷಯ : ಶಿವಸ್ತುತಿ ಹಾಗೂ ಮಹಿಮೆ.

ವಿಶೇಷ : ಬರಹವು ಸುಂದರವಾಗಿದ್ದು ಗ್ರಂಥವು ಸಮಗ್ರವಾಗಿದೆ. ನಾಲ್ಕೈದು ಕಡೆ ಗಳಲ್ಲಿ ಪದಗಳು ಲುಪ್ತವಾಗಿವೆ. ಮದರಾಸಿನ ಪ್ರಾಚ್ಯಕೋಶಾಗಾರಕ್ಕೆ ಎರವಲು ಬಂದಿದ್ದ ಹಸ್ತಪ್ರತಿಯ ನಕಲನ್ನು ಶ್ರೀ ಶ್ರೀರಮಣಾಚಾರ್ಯರು ೧೯೫೦ರಲ್ಲಿ ಮಾಡಿದ್ದಾರೆ. "Transcribed from the Ms got on loan from Jnaniyar mutt Cudalor".

—ಕೆಆರ್‌ಎಸ್

## 474

ಕೆ. ೧೪೫೦/೨ ಮಹಿಮ್ನಸ್ತೋತ್ರ (ಸಟೀಕು) ಶ್ಲೋಕ, ಟೀಕು

೧೦.೩"×೨.೧" ? ?

೮೦–೯೦ ಪತ್ರ ೮ ಪಂಕ್ತಿ ३८ ಅಕ್ಷರ

ಆದಿ : ಶ್ರೀ ಗುರು ಮಹಾಲಿಂಗಾಯ ನಮಃ ॥ ಮಹಿಮ್ನ ಸ್ತೋತ್ರಂ ॥ ಮಹಿಮ್ನಪಾರಂತೆ ಪರಮವಿದುಷೋ ಯದ್ಯಸದೃಶಿಸ್ತುತಿ ಬ್ರಹ್ಮಾದಿನಾಮಪಿತದವಸ ನ್ನಾಸಯಿನಿರ ॥ ಅಥವಾಚ್ಯಃ ಸರ್ವಃ ಸ್ವಮತಿ ಪರಿಣಾಮವಧಿ ಗೃಣ್ ಮಮಾಪ್ಯೇಷ ಸ್ತೋತ್ರೆ ಹರನಿರಪವಾದ ಪರಿಕರ ॥ ಟೀಕೂ ॥ ಹರ–ಎಲೆ ಸಂಹಾರವ ಮಾಡುವಾತನೆ। ತೆ। ನಿನ್ನ ಮಹಿಮ್ನಃ। ಮಹತ್ವದ

ಅಂತ್ಯ : ಮಹೇಶಾನಾಪ। ದೇವೋ ಮಹಿಮ್ನೋನಾಪರ ಸ್ತವಃ। ಅಘೋರಾನ್ನಾಪ ಮಂತ್ರಂ ನಾಸ್ತಿ ತತ್ವಂ ಗುರೋಃ ಪರಂ ॥३६॥ ದೀಕ್ಷಾದಾನಂ ತಪಸ್ತೀರ್ಥಂ ಹೋಮಯಜ್ಞಾದಿಕಾಃ ಕ್ರಿಯಾಃ॥ ಮಹಿಮ್ನಃ ಸ್ತವ ಪಾಠಸ್ಯಕನಾರ್ಹಂತಿ ಷೋಡಶಿಂ ಶ್ರೀ ಗುರು ಮಹಾಲಿಂಗಾಯ ನಮಃ ಶ್ರೀ ಶ್ರೀ.

ವಿಷಯ : ಈಶ್ವರ ಸ್ತುತಿ.

ವಿಶೇಷ : ಸಮಗ್ರ, ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಭೈರವೇಶ್ವರ ಕಾವ್ಯವೂ ಇದೆ. ಗುರುತಿಸಲಾಗದ ಕೃತಿಯ ಎರಡು ಪತ್ರಗಳಿವೆ.

—ಜಿಜಿಎಂ

## 475

ಕೆ. ೧೧೦೨/೧ ಮಹಿಮ್ನಸ್ತೋತ್ರ (ಸಟೀಕು) ಶ್ಲೋಕ, ಟೀಕು

೧೨.೬"×೨.೪" ? ?

೧–೧೧ ಪತ್ರ ೯ ಪಂಕ್ತಿ [illegible] ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮಹಿಮ್ನಸ್ತೋತ್ರ ಲಿಖ್ಯತೆ ॥ ಅಲಘುವೃತ್ತ ॥

ಆಚರಣೆಯ ವಚನ ಇವೇ ಮೊದಲಾದ ೧೫ ಕೃತಿಗಳಿವೆ ಮತ್ತು ಗುರುತಿಸ ಲಾರದ ಕೆಲವು ಪತ್ರಗಳಿವೆ.

—ವೈಸಿಬಿ

## 529

| ಕೆ. ೧೭೫೧/೨ | ಮಿಶ್ರಾರ್ಪಣ | ಗದ್ಯ |
|---|---|---|
| ೧೩.೮"×೨.೨" | ಚೆನ್ನಬಸವಣ್ಣ | ಸು. ೧೧೬೦ |
| ೮-೧೧ ಪತ್ರ | ೯ ಪಂಕ್ತಿ | ೫೨ ಅಕ್ಷರ |

ಆದಿ : ಶ್ರೀ ಗುರು ಚನ್ನವೀರೇಭ್ಯೋ ನಮಃ ॥ ಚಂನಬಸವೇಶ್ವರ ದೇವರು ನಿರೂಪಿಸಿದ ಮಿಶ್ರಾರ್ಪಣದ ವಚನಗಳಂ ವಟ್ಸ್ಥಲಬ್ರಹ್ಮವನೊಡಗೂಡಿಹೆನೆಂಡಡೆ ಆದಾರಿಗೆ ನಿಲುಕುವದೈಯ್ಯಾ ಅರ್ಪಿತ ಅನಾರ್ಪಿತವೆಂದುವಪ್ಪಕ್ಕೆ ನುಡಿಯುಬಹುದಲ್ಲದೆ ಅರ್ಪಣದೊಳ ಗಣ ಅರ್ಪಣದ ಭೇದವನರಿದು ಸೊಪ್ಪಡಗಿದ ಸಿಃಪತಿನಿಜಲಿಂಗೈಕ್ಯದಿರವು ಆದೆಂತೈಯ್ಯಯುಂದಡೆ ಕಾಯದ ಕೈಮುಟ್ಟಿ ಕ್ರಿಯಾರ್ಪಣವ ಮಾಡಂವಲ್ಲಿ.

ಅಂತ್ಯ : ಯಿಂತಪ್ಪ, ದಿವ್ಯ ಶಿವಯೋಗಿ ಮಹಾಶರಣ ಪ್ರಭುದೇವರ ಬಸವಂಣನ ಕರುಣದಿಂದ ಆನಂ ಬದುಕಿದೆನೈಯ್ಯಾ ಕೂಡಲ ಚೆನ್ನ ಸಂಗಮದೇವ ॥ ಚೆನ್ನಬಸವೇಶ್ವರ ದೇವರು ನಿರೂಪಿಸಿದ ಮಿಶ್ರಾರ್ಪಣ ವಚನ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಪಂಚೀಕರಣದ ಪದ ಮೊದಲಾದ ಇತರ ೮ ಕೃತಿಗಳಿವೆ.

—ಜಿಜಿಎಂ

## 530

| ಕೆ. ೧೭೭೯/೩ | ಮಿಶ್ರಾರ್ಪಣ (ಸಟೀಕು) | ವಚನ (ಟೀಕು) |
|---|---|---|
| ೯.೯" × ೩.೭" | ಚೆನ್ನಬಸವಣ್ಣ | ಸು. ೧೧೬೦ |
| ೪೪-೭೨ ಪತ್ರ | ೯ ಪಂಕ್ತಿ | ೭೨ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಚನ್ನಬಸವದೇವರು ನಿರೂಪಿಸಿದ ಮಿಂಶ್ರಾರ್ಪಣ ॥ ಆಕರ ॥ ಕರಣಹಸಿಗೆಯಲ್ಲಿ ಹೇಳಲ್ಪಟ್ಟ ತತ್ವಂಗಳೆಲ್ಲವು ಎಲ್ಲಾ ದೇಹಿಗಳಲ್ಲಿಯೂ ಸಮನಾಗಿಪ್ಪವು ಗುರುಕರುಣವ ಪಡದು ಲಿಂಗಾಂಗ ಸಂಬಂಧಿಗಳಾದ ಶರಣ ಜನರಲ್ಲಿ ಆ ಕರಣಂಗಳೆಲ್ಲವು ಮಂತ್ರ ತತ್ವರೂಪವಾಗಿ ಲಿಂಗಾರ್ಪಿತಕ್ಕೆ ಬೇಕಾದ ಪದಾರ್ಥಗಳಾಗಿಪ್ಪವು ಕಾಯಾ

ರ್ಪಣ ಕರಣಾರ್ಪಣ ಭಾವಾರ್ಪಣ ಪರಿಪೂರ್ಣಾರ್ಪಣಂಗಳನು ಹೇಳು ವಾಗ ಮಿಶ್ರಾರ್ಪಣವೆಂಬ ಶಾಸ್ತ್ರಉ.

**ಅಂತ್ಯ :** ಇಂತಪ್ಪ ದಿವ್ಯ ಶಿವಯೋಗಿ ಯಿಾ ಪ್ರಕಾರವಾದ ದಿವ್ಯ ಮನೋಹರವಾದ ಶಿವಯೋಗಿ......ಸಮಾದಿಯೆಂಬ ಶಿವಯೋಗ ಸಂಪನ್ನನಾದ ಮಹಾ ಶರಣ ಶರಣಪತಿ ಲಿಂಗ ಪತಿತ್ವದ ಆಚರಣೆಯುನ್ನುಳ್ಳ ಪ್ರಭುದೇವರ ಮಹಾನುಭಾವ ಮೂರ್ತಿ... ನ ಸದ್ಭಕ್ತಿ ಮೂರ್ತಿಯಹಾದ ಬಸವೇಶ್ವರನ ಕರುಣದಿಂದ ಭಕ್ತಿ ಜ್ಞಾನ ವೈರಾಗ್ಯವೆಂಬ ಕರುಣದಿಂದ ಪ್ರಸಾದದಿಂದ ಯಾನು ಬದುಕಿದೆನಯ್ಯ ಕೂಡಲ ಚನ್ನಸಂಗಮದೇವ. ದಿವ್ಯಜ್ಞಾನ ಸ್ವರೂಪವಾದ ಚಂನ್ನಬಸವಣ್ಣನು ಜನನ ಮರಣಂಗಳನಳಿದು ನಿತ್ಯ ಸ್ವರೂಪನಾದನೆಂದು......ಉ ಸವಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ವೀರಶೈವ ತತ್ವ.

**ವಿಶೇಷ :** ಸಮಗ್ರ, ಶಿಥಿಲ. ಇದರೊಂದಿಗೆ ಕರಣಹಸಿಗೆ, ಏಕೋತ್ತರ ಶತಸ್ಥಲ ಕೃತಿ ಗಳಿವೆ.

—ಹಕರಾ

## 531

| ಕೆ. ಎ. ೫೦೫/೫ | ಮಿಶ್ರಾರ್ಪಣ | ಗದ್ಯ |
|---|---|---|
| ೮.೧″ × ೧೨.೭″ | ಚೆನ್ನಬಸವಣ್ಣ | ಸು. ೧೧೬೦ |
| ೪–೭ ಪುಟ | ೨೬ ಪಂಕ್ತಿ | ೧೯ ಅಕ್ಷರ |

**ಆದಿ :** ಷಡುಸ್ಥಲವ ಬ್ರಹ್ಮವನೊಡಗೂಡಿಹೆನೆಂದೊಡೆ ಆದಾರಿಗೂ ಸಿಲುಕದಯ್ಯ। ಅರ್ಪಿತಾನರ್ಪಿತವೆಂದು ವಪ್ಪಕ್ಕೆ ನುಡಿಯುಬಹುದಲ್ಲದೆ। ಅರ್ಪಣದೊಳ ಗಣ ಅರ್ಪಣದ ಭೇದವನರಿದು। ಸೊಪ್ಪಡಗಿದ ಲಿಂಗೈಕ್ಯನಿರವು। ಅದೆಂತೆಯ್ಯಾ॥ ಕಾಯದ ಕೈಮುಟ್ಟಿ ಸತ್ಕ್ರಿಯಾರ್ಪಣವ ಮಾಡುವಾಗ ಭೋಜ್ಯ ಆಚಾರಲಿಂಗದಲ್ಲಿ। ಪಾನ ಗುರುಲಿಂಗದಲ್ಲಿ। ಭಕ್ಷ ಶಿವಲಿಂಗದಲ್ಲಿ ಚೋಹ್ಯ ಜಂಗಮಲಿಂಗದಲ್ಲಿ। ಲೇಹ್ಯ ಪ್ರಸಾದಲಿಂಗದಲ್ಲಿಯಿಂವೆಲ್ಲಜಲ್ಲಿಯ ತೃಪ್ತಿಯನಱಿವುದು। ಮಹಾಲಿಂಗದಲ್ಲಿ। ಯಿಂತಿವು ಷಡ್ವಿಧ ಕಾಯಾ ರ್ಪಣವಾದಲ್ಲಿ॥

× × ×

ಗುರುಲಿಂಗದಲ್ಲಿ—ಚಿಗುರು ಮೊದಲಾದ ಪತ್ರೆಯ ಗಂಧವನರಿವುದು। ಮೊಗ್ಗೆ ಮೊದಲಾದ ಪುಷ್ಪಗಂಧವನರಿವುದು। ಜಂಗಮಲಿಂಗದಲ್ಲಿ ಕಾಯಿ ಹಣ್ಣು ಮೊದಲಾದ ಗಂಧವನರಿವುದು ಪ್ರಸಾದಲಿಂಗದಲ್ಲಿ। ಯಿವರೆಲ್ಲ ರಲ್ಲಿಯ ಗಂಧವನರಿವುದು।

ಅಂತ್ಯ : ಮಿಶ್ರದೊಳಗಣ ಮಿಶ್ರಮಂ ಪೇಳ್ವೆ–ಆವುದಾನೊಂದುಂ ಯಿಂದ್ರಿಯಂಗಳು। ಸೊಂಕುವ ಕಾಲವೇಳೆ। ಆಚಾರಲಿಂಗದಲ್ಲಿ। ಸೊಂಕಿತನರಿವ ವೇಳೆ ಗುರು ಲಿಂಗದಲ್ಲಿ। ಅರಿದು ನಿಶ್ಚೈಸುವ ಕಾಲವೇಳೆ ಜಂಗಮಲಿಂಗದಲ್ಲಿ। ಸುಖಿಸಿ ಪರಿಣಾಮಿಸುವ ಕಾಲವೇಳೆ ಪ್ರಸಾದಲಿಂಗದಲ್ಲಿ॥ ಪರಿಣಮಿಸಿ ತೃಪ್ತಿಯ ನಿಯ್ದುವ ಕಾಲವೇಳೆ ಮಹಾಲಿಂಗದಲ್ಲಿ—ಇಂತು ಷಡ್ವಿಧ ಭಾವಾರ್ಪಣ। ಯಿಂತು ಕಾಯರ್ಪಣ। ಕರಣಾರ್ಪಣ। ಭಾವಾರ್ಪಣ॥ ಇಂತು ಚತು ರ್ವಿಧಾರ್ಪಣಕ್ಕೆ ಮಂಗಳ ಮಹಾ ಶ್ರೀ.

ವಿಷಯ : ವೀರಶೈವ ವೇದಾಂತ.

ವಿಶೇಷ : ಇದೇ ಪುಸ್ತಕದಲ್ಲಿ ಧವಳದ ಹಾಡುಗಳು, ಶಿವಲೋಕಬಸ್ಥಾನ, ಏಕೋತ್ತರ ಶತಸ್ಥಲ, ಪಟ್ಸ್ಥಲ ವಚನ, ಮಲ್ಲಿಕಾಮಾಲೆ ಎಂಬ ಕೃತಿಗಳಿವೆ.

—ವೈಸಿಬಿ

532

| ಕೆ. ಬಿ. ೬೩೬/೨ | ಮಿಶ್ರಾರ್ಪಣ | ಗದ್ಯ |
|---|---|---|
| ೧೩"×೪" | ಚೆನ್ನಬಸವಣ್ಣ | ಸು. ೧೧೬೦ |
| ೬೪-೯೩ ಪತ್ರ | ೧೧ ಪಂಕ್ತಿ | ೬೨ ಅಕ್ಷರ |

ಆದಿ : ಶ್ರೀ ಗುರು ಬಸಲಿಂಗಾಯ ನಮಃ॥ ಚೆಂನಬಸವೇಶ್ವರದೇವರು ನಿರೂಪಿದ ಮಿಶ್ರಾರ್ಪಣ॥ ಮಿಶ್ರಾವೆಂದರೆ ಪದಾರ್ಥ॥ ಅರ್ಪಣವೆಂದಡೆ ಲಿಂಗಾರ್ಪಣ। ಅದುಂ ಹ್ಯಾಗೆಂದಡೆ। ಹಿಂದೆ ನಿರೂಪಿಸಿದ ಕರಣಹಸಿಕೆ ಯೆಂಬ ಶಾಸ್ತ್ರದೊಳಗುಳ್ಳ ಸಮಸ್ತ ತತ್ವಂಗಳೆಲ್ಲವು। ಯಲ್ಲಾ ದೇಹಂಗಳಲ್ಲಿ ಸಮಾನವಾಗಿ। ಪೂರ್ವಾಶ್ರಯದೊಡನೆ ಕೂಡಿ ವರ್ತಿಸುತಿರ್ಪ್ಪವು। ಯಿತ್ತ ಗ್ಞಾನೋದಯವಾಗಿ ಗುರುಕಾರುಂಣ್ಯವಂನುಂ ಹಡದ ಸದ್ಭಕ್ತಸಿವ ಶರಣ ಜನಂಗಳಿಗೆ। ಆ ತತ್ವಂಗಳೆಲ್ಲ ನಿವ್ರುತ್ತಿ ಸ್ವರೂಪವನೈದಿ ಮಂತ್ರ ತತ್ವ ಸ್ವರೂಪವಾದ ಕರಣಂಗಳೈದು। ಆ ಮಂತ್ರ ತತ್ವಸ್ವರೂಪವಾದ ಕರಣಂಗಳ ನೆಲ್ಲ ಕಾಯಾರ್ಪಣ ಕರಣರ್ಪಣ ಭಾವಾರ್ಪಣ ಪರಿಪೂರ್ಣಾರ್ಪಣವೆಂದು ಆಯಾಯ ಲಿಂಗಗಳಿಗೆ ಸಮರ್ಪಿಸಿಕೊಳ್ಳುತ್ತಿರ್ದ್ದ ಕಾರಣ। ಮಿಶ್ರಾರ್ಪಣ ವೆಂಬುವದಕ್ಕೆ ಮಹಾ ನಿರ್ವಾಚ್ಯವಾಯಿತ್ತು। ಯೆಂಬುದೀಗ ಮಿಶ್ರಾರ್ಪಣ।

ಅಂತ್ಯ : ಆನು ಚೆಂನಬಸವೇಶ್ವರನು। ಬದುಕಿದೆನಯ್ಯ। ಬದುಕು ಬಾಳು ಜೀವನೆ ಯೆಂದು ಕ್ರುತಾರ್ಥಸ್ವರೂಪವಾದೆನಯ್ಯ। ಕೂಡಲ ಕೂಡುವ ಕೂಟದಲ್ಲಿ ಭಕ್ತರ ಅಂಗದಲ್ಲಿ, ವಿಯೋಗವಾಗದೆ ಕೂಡುವ। ಯೆಂಬುದೀಗ। ಕೂಡಲ

ಚಂನ ಕಾಯ ಕಾಂತಿ ಲಾವಣ್ಯವಂನುಳ್ಳ । ಸಂಗಮದೇವಾ । ಸಮಸ್ತ ಭಕ್ತಗಣಂಗಳ । ಅಂಗ ಮನ ಪ್ರಾಣತಾತ್ಮಂಗಳಲ್ಲಿ ಸದಾ ಯೇಕೆ ಹಿಂಗದಿರಲು ಪಟ್ಟಂಥ । ಯೆಲೆ ಪರಶಿವಲಿಂಗವೆ । ಚಂನಬಸವೇಶ್ವರ ದೇವರು ನಿರೂಪಿಸಿದ ವಿಶ್ರಾರ್ಪಣ ಸಮಾಪ್ತಃ ॥ ಸಮಾಪ್ತ । ಯಲ್ಲಾ ಭಕ್ತ ಮಹೇಶ್ವರ ಸಮಸ್ತ ಶರಣ ಜನಂಗಳ । ಸಮಸ್ತ ಬಸವಾದಿ ಪ್ರಮಥ ಗಣಂಗಳ । ಸನಕ ಸನಂದಾದಿ ಯುವಿ ಜನಂಗಳ । ಅಜಗಣತಂದಿ ನಿಜಗುಣ ಸಿವಯೋಗಿ ಮೊದಲಾದ ಸಮಸ್ತ ಶಿವಯೋಗಿಗಳ ಶ್ರೋತ್ರಮುಖಂಗಳಲ್ಲಿ ಮುಕ್ತಾವಾಯಿತ್ತು. ಯೆಂಬುದೀಗ ಸಮಾಪ್ತಯೆಂಬ ಶಬ್ದಕರ್ಥ. ಮಂಗಳ ಮಹಾ ಶ್ರೀ.

ವಿಷಯ : ವೀರಶೈವ ವೇದಾಂತ.

ವಿಶೇಷ : ಸಮಗ್ರ. ಸ್ಫುಟಾಕ್ಷರ, ಇದರೊಡನೆ ಕರಣಹಸಿಗೆ, ಪಂಚೀಕರಣ ಪದ, ಅಕ್ಕಗಳ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಮಂಗಳ ಮಹಾ ಶ್ರೀ, ಹಿರಿಯ ಮಂತ್ರಗೋಪ್ಯ, ಶೈವಾಗಮ ಪೂಜಾವಿಧಾನ ರುದ್ರ ಜಪ ಈ ಕೃತಿಗಳಿವೆ.

—ಎಸ್ ಎನ್ ಕೆ

## 533

| | | |
|---|---|---|
| ಕೆ. ಬಿ. ೬೯೭/೬ | **ವಿಶ್ರಾರ್ಪಣ** | ಗದ್ಯ |
| ೬"×೮.೫" | ಚೆನ್ನಬಸವಣ್ಣ | ಸು. ೧೧೬೦ |
| ೬ ಪತ್ರ | ೨೦ ಪಂಕ್ತಿ | ೨೦ ಅಕ್ಷರ |

ಆದಿ : ಶ್ರೀ ಗುರುಭ್ಯೋ ನಮಃ ॥ × × × × ॥ ಚಂನಬಸವೇಶ್ವರ ನಿರೂಪಿಸಿದ । ವಿಶ್ರಾರ್ಪಣ । ಷಟುಸ್ಥಲ ಬ್ರಂಹ್ಮವಾನೊಡಗೂಡೆ ನೆಂದಡೆ । ದಾರಿಗೆ ಸಿಲುಕುವದೈಯಾ । ಅರ್ಪಿತಾ ಅನರ್ಪಿತಾವೆಂದು ವಪ್ಪಕ್ಕೆ ನುಡಿಯಾಬಹುದಲ್ಲದೆ । ಅರ್ಪಿತಾದೊಳಗಣ ಅರ್ಪಣದ ಭೇದವನರಿದು । ಸೊಪ್ಪಡಗಿದ ನಿಪ್ಪತಿ ನಿಜಲಿಂಗೈಕ್ಯದಿರವ ಆದ್ಯಂತ್ಯಂದಡೆ । ಕಾಯದ ಕೈ ಮುಟ್ಟಿ ಕ್ರಿಯಾರ್ಪಣ ಮಾಡುವಲ್ಲಿ ಭೋಜ್ಯವಾಚಾರಲಿಂಗದಲ್ಲಿ । ಪಾನ್ಯ ಗುರುಲಿಂಗದಲ್ಲಿ । ಭಕ್ತಿ ಶಿವಲಿಂಗದಲ್ಲಿ ಚೋಂಹ್ಯೆ ಜಂಗಮಲಿಂಗದಲ್ಲಿ । ಲೆಹ್ಯೆ ಪ್ರಸಾದಲಿಂಗದಲ್ಲಿ । ತೃಪ್ತಿ ಮಹಾಲಿಂಗದಲ್ಲಿ ॥

ಅಂತ್ಯ : ಚಿನ್ಮಯ ಚಿದ್ರೂಪ ಚಿದಾನಂದ । ಚಿತ್ ಪ್ರಕಾಶವೆ ಶಿವಯೋಗವಾಗಿ । ಮಹಾಶರಣ ಶಿವಯೋಗಿ । ಮಹಾಶರಣ ಪ್ರಭೂದೇವರೆಂಬಾ । ಬಸವಂಣ ನಾ ಕರುಣದಿಂದ । ನಾನು ಬದುಕಿದೆನೂ । ಕೂಡಲ ಚಂನಸಂಗಮದೇವಾ ।

ಚಂನಬಸವೇಶ್ವರ ದೇವರು ನಿರೂಪಿಸಿದಾ ॥ ಮಿಶ್ರಾರ್ಪಣ ಸಮಾಪ್ತ ಮಂಗಲಂ ಭೂಯತಾತ್ ಶ್ರೀ ಶ್ರೀ ॥

ವಿಷಯ : ವೀರಶೈವ ಷಟ್‌ಸ್ಥಲ ಸಿದ್ಧಾಂತ.

ವಿಶೇಷ : ಪ್ರತಿ ಸುದೃಢ. ಕೃತಿ ಸಮಗ್ರ. ಬರವಣಿಗೆ ಸುಂದರ. ಇದರೊಂದಿಗೆ ಸುಜ್ಞಾನ ಚಿಂತಾಮಣಿ ಮುಂತಾದ ಕೃತಿಗಳಿವೆ.

—ಎಂಪಿಎ

## 534

ಕೆ. ೧೨೪೮/೧ | ಮಿಶ್ರಾರ್ಪಣ (ಸಟೀಕು) | ಗದ್ಯ

೯" × ೧.೬" | ಚೆನ್ನಬಸವಣ್ಣ | ಸು. ೧೧೬೦

೧–೫೪ ಪತ್ರ | ೮ ಪಂಕ್ತಿ | ೩೩ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಚೆನ್ನಬಸವೇಶ್ವರದೇವರು ನಿರೂಪಿಸಿದ ಮಿಶ್ರಾರ್ಪಣ ॥ ಆ ಕರಣಹಸಿಗೆಯಲ್ಲಿ ಹೇಳಲ್ಪಟ್ಟ ತತ್ವಂಗಳೆಲ್ಲವು ಯಲ್ಲಾ ದೇಹಿಗಳಲ್ಲಿಯು ಸಮಾನವಾಗಿರ್ಪವು ॥ ಮತ್ತೆ ॥ ಗುರುಕಾರುಣ್ಯವ ಪಡದು ಲಿಂಗಾಂಗ ಸಂಬಂಧಿಗಳಾದ ಸುಜ್ಞಾನ ಕ್ರೀವಿಡಿದು ಆಚರಿಸುತ್ತಿರ್ಪ ಚಿಲ್ಲಿಂಗ ಸುಸಂಗಿಗಳಾದ ಸದ್ಭಕ್ತ ಶಿವಶರಣ ಜನಂಗಳಲ್ಲಿ ಕರಣಂಗಳೆಲ್ಲವು ನಿವೃತ್ತಿರೂಪಾಗಿ.

ಅಂತ್ಯ : ಅದಲ್ಲದೆ । ಶ್ರೀ । ಚಿದೈಸ್ವರ್ಯವನುಳ್ಳಂಥ ಬಸವ ಸಚ್ಚಿದಾನಂದಾದ್ರ ರೂಪವಾದ ಬಸವ ಸತ್ಯ ಗ್ನಾನಮನಂತ ಬ್ರಂಹ್ಮವೆಂಬ ಲಿಂಗಾಯ ನಮಃ ವುತ್ಪತ್ತಿ ಸ್ಥಿತಿ ಪ್ರಳೆಯಕ್ಕಾಶ್ರಯವಾದ ಪರಮ ಲಿಂಗದೇವೇಶಂಗೋಸ್ಕರ ನಮಃ ॥ ನಮಸ್ಕಾರವು

ವಿಷಯ : ವೀರಶೈವ ಷಟ್ಸ್ಥಲ ಸಿದ್ಧಾಂತ.

ವಿಶೇಷ : ಇದೇ ಕಟ್ಟಿನಲ್ಲಿ ಪಂಚೀಕರಣ, ಅಕ್ಕನ ಸೃಷ್ಟಿಯ ವಚನ, ಅಲ್ಲಮಪ್ರಭುವಿನ ಸೃಷ್ಟಿಯು ವಚನಗಳಿವೆ.

—ಜಿಜಿಎಂ

## 535

ಕೆ. ೧೩೦೦/೨ | ಮಿಶ್ರಾರ್ಪಣ (ಸಟೀಕು) | ಶ್ಲೋಕ, ಗದ್ಯ

೧೦"×೨.೩" | ಚೆನ್ನಬಸವಣ್ಣ | ಸು. ೧೧೬೦

೨೮–೯೯ ಪತ್ರ | ೧೪ ಪಂಕ್ತಿ | ೫೬ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಚೆನಬಸವೇಶ್ವರ ದೇವರು ನಿರೂಪಿ ಸಿದ ಮಿಶ್ರಾರ್ಪಣ ॥ ಕರಣಹಸಿಗೆಯಲ್ಲಿ ಹೇಳಲ್ಪಟ್ಟ ತತ್ವಂಗಳೆಲ್ಲವು

ಯಲ್ಲಾ ದೇಹಿಗಳಲ್ಲಿಯೂ ಸಮಾನವಾಗಿಯಿಪ್ಪವು. ಗುರುಕರುಣವ ಪಡದ ಲಿಂಗಾಂಗ ಸಂಮಂದಿಗಳಾದ ಶರಣಜನರಲ್ಲಿ ಆ ಕರಣಂಗಳೆಲ್ಲವು ಮಂತ್ರ ತತ್ವರೂಪನಾಗಿ ಲಿಂಗಾರ್ಪಿತಕ್ಕೆ ಬೇಕಾದ ಪದಾರ್ಥಂಗಳಾಗಿಹವು ಕಾಯಾ ರ್ಪಣ ಕರಣಾರ್ಪಣ ಪರಿಪೂರ್ಣಾರ್ಪಣಂಗಳನು ಹೇಳೂದಿಗ ಮಿಶ್ರಾ ರ್ಪಣಶಾಸ್ತ್ರವು.

**ಅಂತ್ಯ :** ಶರಣಸತಿ ಲಿಂಗಪತಿಯಾಚರಣೆಯನುಳ್ಳ ಪ್ರಭುದೇವರೂ । ಮಹಾನು ಭಾವ ಮೂರ್ತಿಯಾದ ಅಲ್ಲಮಾ ಪ್ರಭುದೇವರು । ಬಸವಂಣನ । ಸದ್ಭಕ್ತ ಮೂರ್ತಿಯಾದ ಬಸವೇಶ್ವರನ । ಕರುಣದಿಂದ । ಭಕ್ತಿ ಜ್ಞಾನ ವೈರಾಗ್ಯ ಕೃಪಾ ಪ್ರಸಾದದಿಂದ ನಾನು ದಿವ್ಯಜ್ಞಾನಸ್ವರೂಪವಾದ ಚೆಂನಬಸವೇಶ್ವರ ದೇವರು ಬದುಕಿದೆನಯ್ಯ ಕೂಡಲ ಚೆಂನಸಂಗಮದೇವಾ । ಜನನ ಮರಣಂ ಗಳಳಿದು ನಿತ್ಯರೂಪನಾದೆನೆಂದು ಸ್ತುತಿಸಿದರೆಂಬುದರ್ತ್ಥ । ಮಿಶ್ರಾರ್ಪಣ ಸಮಾಪ್ತ ಮಂಗಳ ಮಹಾಶ್ರೀ ಶ್ರೀ.

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಸಮಗ್ರ. ಇದೇ ಕಟ್ಟಿನಲ್ಲಿ ಕರಣಹಸಿಗೆ, ಪಂಚೀಕರಣ ಮತ್ತು ಅಕ್ಕನ ಸೃಷ್ಟಿಯ ವಚನಗಳಿವೆ.

—ಜಿಜಿಎಂ

## 536

| ಕ. ೧೩೧೩/೨ | ಮಿಶ್ರಾರ್ಪಣ (ಸಟೀಕು) | ಗದ್ಯ |
|---|---|---|
| ೧೨.೮"×೨.೧ | ಚೆನ್ನಬಸವಣ್ಣ | ಸು. ೧೧೬೦ |
| ೫೩–೬೯ ಪತ್ರ | ೧೪ ಪಂಕ್ತಿ | ೭೪ ಅಕ್ಷರ |

**ಆದಿ :** ಶ್ರೀ ಗುರು ಚೆಂನಬಸವೇಶ್ವರ ದೇವರ ಪಾದವೆ ಗತಿ ॥ ಮುಂದೆ ಚೆಂನ ಬಸವೇಶ್ವರ ದೇವರು ನಿರೂಪಿಸಿದ ಮಿಶ್ರಾರ್ಪಣ ॥ ಆ ಕರಣಹಸಿಗೆಯಲ್ಲಿ ಹೇಳಲ್ಪಟ್ಟ ತತ್ವಂಗಳೆಲ್ಲವು ಯಲ್ಲಾ ದೇಹಿಗಳಲ್ಲಿಯು ಸಮಾನವಾಗಿರ್ಪವು । ಗುರುಕಾರುಣ್ಯವ ಪಡದು ಲಿಂಗಾಂಗಸಂಬಂಧಿಗಳಾದ ಶರಣಜನಂಗಳಲ್ಲಿ ಆ ಕರಣಂಗಳೆಲ್ಲವು ಮಂತ್ರ ತಂತ್ರ ಸ್ವರೂಪವಾಗಿ ಲಿಂಗಾರ್ಪಿತಕ್ಕೆ ಬೇಕಾದ ಪದಾರ್ಥಂಗಳಾಗಿಪ್ಪವು. ಕಾಯಾರ್ಪಣ ಕರಣಾರ್ಪಣ ಭಾವಾರ್ಪಣ ಪರಿಪೂರ್ಣಾರ್ಪಣಂಗಳನು ಹೇಳೂದೀಗ ಮಿಶ್ರಾರ್ಪಣಶಾಸ್ತ್ರವು

**ಅಂತ್ಯ :** ಅಂತ್ಯ ಶೂನ್ಯಂ ಮುಡಿಯಿಲ್ಲದಿಹಂತಾ ಅಂತುಮಲ್ಲದೆವುತ್ಪತ್ತಿ ಸ್ಥಿತಿ ಲಯಂ ಗಳಿಲ್ಲದಂತ ನಿರಾಮಯಂ ಸಂಸಾರ ದೋಷರಹಿತವಾದಂತಾ ಸರ್ವ ಸೂಂನ್ಯಂ ಸಮಸ್ತಸ್ಥಲ ಕುಳಂಗಳಿಲ್ಲದಂತ ನಿರಾಕಾರಂ ನಿರವಯಂವಾದಂತ ನಿಃಶಬ್ದ

ಬ್ರಂಹ್ಮ ಮುಂಚ್ಯತೆ ನಿರವಯುವ ಸ್ವರೂಪವಾದ ಬ್ರಂಹ್ಮವಾದನೆಂಬ ಭಾವ ವಡಗಿ ತಾನು ಬ್ರಹ್ಮನೆಂದು ಹೇಳಲ್ಪಡುತಿಹುದು ಎಂಬ ನುಡಿಗೆಡೆಗೊಡದೆ ಓಂಗೆಂಬ ಶಬ್ದಕ್ಕೆ ತೆರಹುಗೊಡದೆ ನಿರವ...

ವಿಷಯ : ವೀರಶೈವ ಸಿದ್ಧಾಂತ

ವಿಶೇಷ : ಅಸಮಗ್ರ. ಕೃತಿಯ ಕಡೆಯ ಭಾಗ ನಷ್ಟವಾಗಿದೆ. ಇದೇ ಕಟ್ಟಿನಲ್ಲಿ ಕರಣಹಸಿಗೆ ಮತ್ತು ಕೆಲವು ಹಾಡುಗಳೂ ಇವೆ.

—ಜಿಜಿಎಂ

537

ಕೆ. ೧೫೬೧/೨ ಮಿಶ್ರಾರ್ಪಣ (ಸಟೀಕು) ಗದ್ಯ

೧೩.೫"×೨.೨" ಚೆನ್ನಬಸವಣ್ಣ ಸು. ೧೭೬೦

೫೪_೮೨ ಪತ್ರ ೧೨ ಪಂಕ್ತಿ ೬೦ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ × × × ಚೆಂನಬಸವೇಶ್ವರದೇವರು × × × ತಮ್ಮ ಸ್ವಾನುಭಾವಪ್ರಸಂನ ಉತ್ಕೃಷ್ಟವಾಕ್ಯಂಗಳಿಂದ ಉಪದೇಶಿಸಿದಯುಬುದೀಗ ನಿರೂಪಿಸಿದ ಮಿಶ್ರಾರ್ಪಣವೆಂಬ ಅಭಿಧಾನವನುಳ್ಳ ಉತ್ತರ ಪ್ರಕರಣಉಯೆಂಬಲ್ಲಿ ಯಿಾ ಶಾಸ್ತ್ರಕ್ಕೆ ಮಿಶ್ರಾರ್ಪಣವೆಂಬ ಅಭಿಧಾನವುಯೇನು ಕಾರಣಕ್ಕೆ ಬಂದಿತ್ತೆಲೆ ಸ್ವಾಮಿಯಂದು ಬೆಸಗೊಂಡಡೆ ಮಿಶ್ರವೆಂದಡೆ ಪದಾರ್ಥ ಅರ್ಪಣವೆಂದಡೆ ಲಿಂಗಾರ್ಪಣ ಲಿಂಗಾರ್ಪಣದ ಸಕೀಲವನು ಹೇಳುವಂಥಾ ಶಾಸ್ತ್ರಉ

ಅಂತ್ಯ : ಚೆಂನಬಸವೇಶ್ವರದೇವರು × × × ಉಪದೇಶಿಸಿದ ಮಿಶ್ರಾರ್ಪಣ ಮಿಶ್ರವೆಂದಡೆ ಪದಾರ್ಥ ಅರ್ಪಣವೆಂದಡೆ ಲಿಂಗಾರ್ಪಣ ಲಿಂಗಾರ್ಪಣದ ಸಕೀಲವನು ಹೇಳುವಂಥಾ ಉತ್ತರ ಪ್ರಕರಣಉ ಸಮಾಪ್ತ ಯೆಲ್ಲಾ ಶಿವ ಶರಣ ಜನಂಗಳ ಶ್ರೋತ್ರಮುಖದಲ್ಲಿಯೆ ಮುಕ್ತವಾಯಿತ್ತು × × × ಶರಣರುಗಳೆಲ್ಲರು ನಿರತಿಶಯ ಗ್ನಾನ ನಿಜೈಶ್ವರ್ಯವನೆ ಪಡದು ಸುಖದಿಂದ ಬಾಳುತ್ತಿಹರೆಂಬುದೀ ಶಾಸ್ತ್ರದ ಫಲಶ್ರುತಿಯಂಯಂಬ ಶಬ್ದಕ್ಕರ್ಥಉ ಯೆಂಬುದೀಗ ಶ್ರೀ ಶ್ರೀ.

ವಿಷಯ : ವೀರಶೈವ ಷಟ್ಸ್ಥಲ ಸಿದ್ಧಾಂತ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಕರಣಹಸಿಗೆ ಸಟೀಕು ಮೊದಲಾದ ೬ ಕೃತಿಗಳಿವೆ.

—ಜಿಜಿಎಂ

## 538

ಕೆ. ೭೬೯/೨ | ವಿಾಸಲುಗವಿತೆ (ವೀರೇಶಚರಿತೆ) | ಉದ್ದಂಡ ಷಟ್ಪದಿ

೧೩"×೨" | ರಾಘವಾಂಕ | ಸು. ೧೨೫೦

೧೫೨-೧೬೨ ಪತ್ರ | ೧೧ ಪಂಕ್ತಿ | [illegible] ಅಕ್ಷರ

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ । ನಿರ್ವಿಘ್ನಮಸ್ತು ।
ಮಿಸಲಗವಿತೆ ॥ ರಾಗ ಹಂಮಿರ ನಾಟಿ ॥ ಪಲ್ಲವ ॥
ಮಕ್ರಿಡನೋಲಗದೊಳ್ ಮಂನಣೆ ವಡೆಯದೆ ದಕ್ಷಂ
ಕಡುಮುಳಿಸಿಂ ಹರವಿರಹಿತ ಯಾಗವ ನಡಸಲ್
ಘುಡುಘುಡಿಸುತ ನಡತಂದು ದಧೀಚಿ ಪ್ರತಿ ಶಪಿಸಿದನಮರರ ಮನಂ
ಮುನಿಗಳನೂ ॥ ಪದ ॥
ಶ್ರೀಪತಿ ವಾಣೀಪತಿ ಸುರಪತಿ ದಿನಪತಿಕಾ
ಪಾಪತಿ ಮೊದಲಾದ ಸಮಸ್ತಾಮರ ನತರೆನಿಸುವ
ಪಾಪಾದ ದ್ವಯನಕ್ಷಯನದ್ವಯನನುಪಮನತಿಶಯರೂಪನು ಶಿವನೂ ।
ಕೋಪಾಟೋಪದಿ ದಕ್ಷಾಧ್ವರವಿಧ್ವಂಸಾ
ಳಾಪದೆ ವೀರೇಶನನುದ್ಭವಿಸಿದ ಗುರು ಪಂ
ಪಾಪುರದರಸು ವಿರೂಪಾಕ್ಷಂ ಕೂರ್ತ್ತೆಮಗೀಗಿಷ್ಟಾರ್ತ್ಥದ ಭಕ್ತಿಯನು ॥

**ಅಂತ್ಯ :** ಸಾಯದೆ ಬದುಕಿದಿರಜಹರಿಸುರ ಸಂಕುಳ ಸಹಿತ
ನ್ಯಾಯವನೆಂದೂ ನೀಂ ಬಳಸದಿರೆಂಮಲ್ಲಿಯು
ಪಾಯಂಗೊಳ್ಳದು ಹಂಮೇಱಿದ ಸಾಕ್ಷಾತ್ ಶ್ರೀವೀರದ ರುದ್ರನುವಿವನಾ
ಘಾಯಕೆ ತರಹರಿಸಲ್ಬಾರದೆನುತ ಹಂಪೆಯು
ರಾಮನವರ ಕಳುಹಿದ ಕ್ರುತಿಯಂ ರಚಿಸಿದ ಕವಿ
ರಾಯನ ವರಸುತ ರಾಘವದೇವನ ಬಿಂನಪಮಂ ಸದ್ಭಕ್ತರು ಕೇಳಿ ॥ ೫೬ ॥
ಅಂತು ಸಂಧಿ ೬ಕ್ಕಂ ಪದನು ೧೭೭ಕ್ಕಂ ಮಂಗಳ ಮಹಾ ಶ್ರೀ.

**ವಿಷಯ :** ದಕ್ಷಯಜ್ಞದ ಕಥೆ.

**ವಿಶೇಷ :** ಕೃತಿ ಸಮಗ್ರ. ಸ್ಫುಟಾಕ್ಷರ. ಕೆಲವೆಡೆ ಶಕಟರೇಫದ ಬಳಕೆ ಇದೆ. ಇದರೊಡನೆ ಕಲ್ಯಾಲಾವೃತ್ತ ಇದೆ. ಆದಿಯಲ್ಲಿ ಚಿತ್ರಗಳಿರುವ ಕೆಲವು ಶಿಥಿಲ ಗರಿಗಳಿವೆ.

—ಎಸ್ ಎನ್ ಕೆ

539

ಕ ೧೧೯೭/೧ | ಮಿಾಸಲುಗವಿತೆ (ವೀರೇಶಚರಿತೆ) | ಉದ್ದಂಡ ಷಟ್ಪದಿ
---|---|---
೧೦.೮" × ೧.೭" | ರಾಘವಾಂಕ | ಸು. ೧೨೫೦
೧–೧೬ ಪತ್ರ | ೮ ಪಂಕ್ತಿ | ೫೨ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ । ಮೀಸಲಗವಿತೆ ಬರವುದಕ್ಕೆ ಶುಭ ಮಸ್ತು ॥ ರಾಗ ಹಂವಿಾರ ನಾಟಿ ॥ ಪಲ್ಲವ ॥
ಮೃಡನೋಲಗದೊಳ್ ಮಂನಣೆವಡೆಯದೆಂದಕ್ಕಂ
ಕಡುಮುಳಿ ಶಿರಹರ ವಿಹಹಿತ ಯಾಗವ ನಡಸಲ್
ಘುಡುಘುಡುಸುತ ನಡತಂದು ದಧಿವೃತಿ ಶಪಿಸಿದನವಂರರ ಮುನಂ
ಮಂನಿಗಳನೂ ॥

ಪದ ॥ ಶ್ರೀಪತಿ ವಾಣಿಪತಿ ಸುರಪತಿ ದಿನಪತಿ ತಾ
ರಾಪತಿ ಮೊದಲಾದ ಸಮುಸ್ತಾಮರನತರೆನಿಸುವ
ಪಾಪಾದದ್ವಯ ನಕ್ಷಯನದ್ವಯ ನನುಪಮನತಿಶಯರೂಪನು ಶಿವನೂ
ಕೋಪಾಟೋಪಧಿ ದಕ್ಷದ್ವರ ವಿದ್ವಂ ಸಾ
ಳಾಪದದಿ ವೀರೇಶನನುದ್ಭವಿಸಿದುದಂ ಗುರು
ಪಂಪಾಪುರದರಸ ವಿರೂಪಾಕ್ಷಂ ಕೂರ್ತ್ರೆಮಗಿಪ್ಪಾರ್ಥದ ಭಕ್ತಿಯಂನೂ ॥೧॥

ಅಂತ್ಯ : ಸಾಯದೆ ಬದುಕಿದೆರಜಹರಿ ಸುರಸಂಕಳ ಸಮೇತ
ನ್ಯಯನೆಂದೂ ನೀ ಬಳಸದಿರೆಮಲಿಯ
ಪಾಯಂಗೊಳ್ಳದಂ ಹಂಮೆಱಿದ ಸಾಕ್ಷಾತ್ ಶ್ರೀ ವೀರರುದ್ರನಂಮಿವನಾ
ಘಾಯಕೆ ತರಹರಿಸಲ್ಬಾರದೆನುತು ಹಂಪೆಯ
ರಾಯನವರ ಕಳುಹಿದ ಕೃತಿಯಂ ರಚಿಸಿದ ಕವಿ
ರಾಯನವರ ಸುತ ರಾಘವದೇವನ ಬಿನ್ನಪಮಂ ಸದ್ಭಕ್ತರು ಕೇಳಿ ॥ ೫೭ ॥
ಅಂತು ಸಂಧಿ ೧ಕ್ಕಂ ಪದನು ಮಂಗಳ ಮಹಾ ಶ್ರೀ.

ವಿಷಯ : ವೀರಭದ್ರನು ದಕ್ಷನ ಯಜ್ಞವನ್ನು ನಾಶಮಾಡಿದ ಕತೆ.

ವಿಶೇಷ : ಸಮಗ್ರ, ಸುಂದರ ಬರಹ. ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಲಿಂಗಸ್ತೋತ್ರದ ಷಟ್ಪದಿ, ಪ್ರಭುದೇವರ ಪುರಾಣದ ನಾಂದ್ಯ, ಶಿವಮಹಿಮಾ ಶತಕ, ಶಿವಸ್ತೋತ್ರ ಎಂಬ ಕೃತಿಗಳಿವೆ.

—ವೈಸಿಬಿ

## 540

ಕ. ಎ. ೪೯೨/೩ ಮುಕುಂದಮಾಲಾ ಶ್ಲೋಕ, ಟೀಕು

೧೨"×೯.೬" ? ?

೧೩–೪೧ ಪುಟ ೨೪ ಪಂಕ್ತಿ ೨೪ ಅಕ್ಷರ

**ಆದಿ :** ಘುಷ್ಯತೇ ಯಸ್ಯ ನಗರೇ ರಂಗಯಾತ್ರಾ ದಿನೇ ದಿನೇ ।
ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ ॥
ಯಸ್ಯ ನಗರೇ ಯಾವ ಅರಸನ ಪಟ್ಟಣದಲ್ಲಿ ದಿನೇ ದಿನೇ ಪ್ರತಿದಿನದಲ್ಲಿಯೂ ರಂಗಯಾತ್ರಾ ಶ್ರೀರಂಗಯಾತ್ರೆಯು ಘುಷ್ಯತೇ ಸಾರುತ್ತಲಿದ್ದಿತೋ ರಾಜಾನಾಂ—ಅರಸಾಗಿರುವನಾತಂ ಕುಲಶೇಖರನು ಅಹಂ ತಾನು ಶಿರಸಾ ತಲೆವಾಗಿ ವಂದೇ ದಂಡಸಿಕ್ಕಿನು. ಪ್ರಬಂಧಕರ್ತೃವಿಗೆ ನಮಸ್ಕರಿಸಿದರೆ ಮನೋರಥನೇರ್ವರುವುದು. ಪ್ರಪನ್ನರಿಗೆ ಬೇರೊಂದು ಮನೋರಥವಿಲ್ಲ. ಶ್ರೀ ಕೃಷ್ಣಪದಾಬ್ಜ ಭಕ್ತಿಯೆಂ ಬರುವುದು.

**ಅಂತ್ಯ :** ಲೋಕೋಪಕಾರಾರ್ಥವಾಗಿ ಕುಂಭೇ ಪುನರ್ವಸುಜಾತಂ ಕೇರಳ ಚೋಳ ಪಟ್ಟಣ ಕೌಸ್ತುಭೇಶ್ವರಾಧೀಶಂ ಕುಲಶೇಖರಮಾಶ್ರಯೇ ಎಂಬ ಲೀಲೆಯಲ್ಲಿ ಅವತರಿಸಿ ಭಕ್ತಿಪ್ರವಾಹರೂಪವಾದ ಈ ಮುಕುಂದಮಾಲೆಯೆಂದು ಹೆಸರುಳ್ಳ ಸಮಸ್ತ ದಿವ್ಯಪ್ರಬಂಧವನ್ನು ಮಾಡಿದರು ಎಂದು ಶ್ಲೋಕ ತಾತ್ಪರ್ಯ ॥

**ವಿಷಯ :** ಹರಿಭಕ್ತಿ.

**ವಿಶೇಷ :** ಬರಹ ಚೆನ್ನಾಗಿದೆ. ಕೊನೆಯ ಅಂದರೆ ೩೮ರಿಂದ ೪೧ನೆಯ ಪುಟಗಳಲ್ಲಿ ಅಲ್ಲಲ್ಲಿ ಪಂಕ್ತಿಗಳು ಲೋಪವಾಗಿವೆ. ಇದೇ ಕಟ್ಟಿನಲ್ಲಿ ಅಷ್ಟಶ್ಲೋಕೀ, ಚತುಃಶ್ಲೋಕೀ ಎಂಬೆರಡು ಗ್ರಂಥಗಳಿವೆ. ಪುಸ್ತಕದ ಅಂತ್ಯದಲ್ಲಿ ಸಂಪ್ರತಿ ಮಾಡಿದವರ ಹೆಸರನ್ನು 'ಶ್ರೀ ಶ್ರೀರಮಣ ಆಚಾರ್ ಪಂಡಿತ್' 15-5-52 ಎಂದು ತಿಳಿಸಿದೆ.

—ಕೆಆರ್‌ಎಸ್

## 541

ಕೆ. ೭೩೨ ಮುಕುಂದಮಾಲಾ ಸ್ತೋತ್ರಂ (ಸಟೀಕು) ಶ್ಲೋಕ. ಟೀಕು

೧೪.೬"×೧.೪" ಟೀಕಾಪಾಧ್ಯಾಯ ೧೬೭೨

೫೯–೭೩ ಪತ್ರ ೬ ಪಂಕ್ತಿ ೫೧ ಅಕ್ಷರ

**ಆದಿ :** ಶ್ರೀಮಂತೆ ರಾಮಾನುಜಾಯ ನಮಃ ಶ್ರೀನಿವಾಸ ಗುರುವೆ ನಮಃ ಮುಕುಂದ ಮಾಲಾಸ್ತೋತ್ರಂ ಶ್ರೀಕೃಷ್ಣವಿಷಯಮಾಗಿ ಕುಲಶೇಖರಾಳ್ವಾರಿಂದ ವಿರಚಿಸಲ್ಪಟ್ಟ ಮುಕುಂದಮಾಲೆಯೆಂಬ ಸ್ತೋತ್ರಾರ್ಥಮಂ ಸಕಲರುಂ

ತಿಳಿದುಜ್ಜೀವಿಸುವಂತೆ ಕರ್ನಾಟಕಭಾಷೆಯಿಂ ಬರೆಯುವದಕ್ಕೆ ನಿರ್ವಿಘ್ನ ಮಸ್ತು × × × ಪ್ರಥಮದೊಳ್ ಪ್ರಬಂಧಕರ್ತುವಾದ ಕುಲಶೇಖ ರಾಳ್ವಾರುಂ ವಂದಿಸುತಿರ್ಪೆನು.

ಶ್ಲೋಕ : ಘುಷ್ಯತೆ ಯಸ್ಯ ನಗರೆ ರಂಗಯಾತ್ರಾ ದಿನೇದಿನೇ
ತಮಹಂ ಶಿರಸಾ ವಂದೇ ರಾಜಾನಂ ಕುಲಶೇಖರಂ

ಟೀಕು : ಆವ ಕುಲಶೇಖರಾಳ್ವಾರವರು ಪ್ರತಿದಿನಮುಂ ಶ್ರೀರಂಗಯಾತ್ರೆ ಶ್ರೀರಂಗ ಯಾತ್ರೆಯೆಂದು ಘೋಷಿಸಲ್ಪಡುತಿರ್ಪುದೊ ಅಂಥಾ ರಾಜಶ್ರೇಷ್ಠರಾದ ಕುಲಶೇಖರಾಳ್ವಾರಂ ಸಾಷ್ಟಾಂಗವಾಗಿ ಅಂ ನಮಿಸುವೆನೆಂದು ತಾತ್ಪರ್ಯಂ

ಅಂತ್ಯ : ಟೀಕ : ಅವರ ಸಿಖಿಪಾರ್ಶ್ವಂಗಳಲ್ಲಿ ರವಿಯೆಂದುಂ ಲೋಕವೀರನೆಂದುಂ ಪೆಸರಂದಳೆರ್ಪ ಬ್ರಾಹ್ಮಣಮಿತ್ರರುಂಟು ಅಂತಪ್ಪಂಬುಜಾಕ್ಷಚರಣಾಂ ಬುಜಪಟ್ಟದರಾಗಿ ಕುಲಶೇಖರಾಳ್ವಾರೆಂದು ಪ್ರಸಿದ್ಧಿ ವಡೆದರಸಿನಿಂ ವಿರಚಿಸಲ್ಪಟ್ಟ ಸ್ತೋತ್ರಾರ್ಥಂಗಳಂ ಸಕಲರುಂ ತಿಳಿದುಜ್ಜೀವಿಪಂತೆ ಚಿಕುಪಾ ಧ್ಯಾಯರಿಂ ವಿರಚಿಸಲ್ಪಟ್ಟ ಮುಕುಂದಮಾಲಾ ಸ್ತೋತ್ರದ ಟೀಕು ಸಂಪೂರ್ಣಂ ಹರಹಿನ ಕೋದಂಡರಾಮಸ್ವಾಮಿಯವರ ಮುಖ್ಯದಾಸನಾದ ಗುರುಡೈಯ ಬರದ ಪುಸ್ತಕಕ್ಕೆ ಜಯ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಕೃಷ್ಣನ ಬಾಲಲೀಲೆಗಳ ವರ್ಣನೆ.

ವಿಶೇಷ : ಸಮಗ್ರ. ಇದರ ಜೊತೆಯಲ್ಲಿ ಪದ್ಮಪುರಾಣ, ಹರಿಪೂಜಾ ಪ್ರಕರಣ, ಸಂಕ್ಷೇಪ ರಾಮಾಯಣದ ಟೀಕು, ಆಳವಂದಾರು ಸ್ತೋತ್ರ ಸಟೀಕು, ರಂಗನಾಥ ಪಾದುಕಾಸಹಸ್ರ ಟೀಕು ಎನ್ನುವ ಕೃತಿಗಳಿವೆ.

—ಜಿಜಿಎಂ

## 542

| ಕೆ. ೧೮೦೩/೧೩ | ಮುಕ್ತಿಭಕ್ತಿ | ಹಾಡು |
|---|---|---|
| ೯"×೨" | ? | ? |
| ೧-೪ ಪತ್ರ | ೯ ಪಂಕ್ತಿ | ೪೪ ಅಕ್ಷರ |

ಆದಿ : ಮುಕ್ತಿ ಭಕ್ತಿ ಬರವುದಕ್ಕೆ ಶುಭಮಸ್ತು ॥ ಸಂಮೇದಗಿರಿ ಭಕ್ತಿಮಹತ್ತು ಮುಕ್ತಿ ಬರುಪುದಕ್ಕೆ ಶುಭಮಸ್ತು ॥
ಎಂತು ಪೇಳ್ವೆ ಮಹಿಮೆಯನೆಂತು ಪೇಳ್ವೆ
ಶ್ರೀ ಮಹಾಮೇರುವಿನ ದಕ್ಷಿಣ
ಭೂಮಿಯೊಳು ಛಪ್ಪನ್ನದೇಶದ

ಸೀಮೆಗತಿರಂಜನೆಯಹಾಗೆಸದು
ದುಮಯಿಂದು ಸ್ಥಾನ ದೇಶದೆ ॥
ಯೆಂತು ಪೇಳ್ವೆ ಮಹಿಮೆಯುನೆಂತುಂ ಪೇಳ್ವೆ ॥ ೧ ॥
ಸುರಗಿರಿಗೆ ಮಿಗಿಲಾದ ಶೋಭಾ
ಕರದಿ ರಂಜಿಸುತ್ತಿಹುದುಂ ಸಂಮೇದ
ಗಿರಿಯು ವಿಂಶತಿಶಿಖರದಿಂದಲಿ
ಪರಮ ಪುಣ್ಯಕ್ಷೇತ್ರದತಿಶಯು ॥ ೨ ॥

ಅಂತ್ಯ : ಓದಿ ಉಪದೇಶವನುಗೈಲನು
ವಾದ ಪಾತನೀ ಸ್ವರ್ಗಸುಖಪದ
ಸಾಧನದ ಸನ್ಮಾರ್ಗವಿದು ಜನ
ಕಾದ ಮಂಗಲ ಭದ್ರ ಭೂಯಾದೆಂತುಂ ಪೇಳ್ವೆಂ ॥ ೩೩ ॥

ವಿಷಯ : ಸಮ್ಮೇದಗಿರಿಯ ಸ್ತುತಿ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಗೆ ಸಮ್ಯಕ್ತ್ವಕೌಮುದಿ ಮುಂತಾದ ೧೨ ಕೃತಿಗಳಿವೆ.

—ಜಿಜಿಎಂ

## 543

ಕೆ. ೧೨೦೪/೯ | ಮುಕ್ತಿಮುದ್ರಾಗದ್ಯ | ಕಂದ, ರಗಳೆ
೧೦.೩"×೧.೨" | ? | ?
೮೧–೮೫ ಪತ್ರ | ೯ ಪಂಕ್ತಿ | ೪೪ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಮುಕ್ತಿಮುದ್ರಾಗದ್ಯ ॥
ಶ್ರೀ ಗುರು ಶಿಷ್ಯರ ಸಂಮಾ
ದಾಗಮವಿಂತಾಗಲ್ವೇಳ್ಕು ಪುತ್ತ್ರಂ ಭಕ್ತ್ಯಾ
ದ್ಯೋಗಮಪಜುಪಿದನೊಲಿದೆಂ
ಬಾಗಿರೆ ನೋಡೆಮ್ಮ ಗುರು ಗುಹೇಶ್ವರಲಿಂಗಂ ।

ಅಂತ್ಯ : ಹೃದಯದಲ್ಲಿ ಮುಕ್ತಿ ಮುದ್ರಾ
ಗದ್ಯಮನಜಿದಂಗೆ ಲಿಂಗಭಕ್ತಿಜ್ಞಾನಂ
ವೇದ್ಯವೆಂದೊಲಿದು ನಿರ್ಮಿಸಿ
ದಾಧ್ಯರು ನೋಡೆಮ್ಮ ಗುರು ಗುಹೇಶ್ವರ ಲಿಂಗ ॥
ಮುಕ್ತಿಮುದ್ರಾಗದ್ಯ ಸಂಪೂರ್ಣ ಮಂಗಳ ಮಹಾ ಶ್ರೀ.

ವಿಷಯ : ವೀರಶೈವ ತತ್ತ್ವಬೋಧೆ.

ವಿಶೇಷ : ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಶಿವಾಧವ ಶತಕ, ಪಡ ಕ್ಷರಿಯ ರಗಳೆ, ಬಸವ ರಗಳೆ, ಮಂತ್ರಗೋಪ್ಯ ಮೊದಲಾದ ೨೪ ಕೃತಿಗಳಿವೆ.

—ವೈಸಿಬಿ

544

ಕೆ. ೧೦೮೧/೩ ಮುಕ್ತ್ಯಂಗನೆಯ ಕಂಠಮಾಲೆ ವಚನ

೧೧" × ೧.೮" ಸ್ವತಂತ್ರ ಸಿದ್ಧಲಿಂಗೇಶ್ವರ ಸು. ೧೪೮೦

೫೪–೮೮ ಪತ್ರ ೭ ಪಂಕ್ತಿ ೩೨ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ವೇದಶಾಸ್ತ್ರಾಗಮ ವಿಶಾರದನಾದ ಕಾರಕಾದ್ಯನೇಕೋಪದೇಶಕರ್ತೃವಾದ ಪಿಂಡಮಧ್ಯಾದಿ ನಾದಬಿಂದುಗಳ ತೋಱುವಲ್ಲಿ ಕುಶಲನಾದ ಮಂತ್ರಯೋಗದಲ್ಲಿ ಮನವುಳ್ಳವನಾದ ಲಯ ಯೋಗದಲ್ಲಿ ಲಲಿತನಾದ × × ಷಟ್ಸ್ಥಲಚಕ್ರೇಶ್ವರನಾದ ಸ್ವತಂತ್ರ ಸಿದ್ಧಲಿಂಗೇಶ್ವರನು ತಂಮ ವಂಶೀಭೂತರಾದ ಗಣಂಗಳಱಿದಾನಂದಿಸಿ ನಿತ್ಯ ಸುಖಿಗಳಾಗಲೆಂದು ತಮ್ಮ ನಿಜಾನುಭಾವದ ವಚನಾಮೃತಸರಧಿಯೊಳ ಗನರ್ಘ್ಯರತ್ನಂಗಳನೆ ತೆಗೆದು ಸರಂಗೊಳಿಸಿ ಮುಕ್ತ್ಯಂಗನೆಯ ಕಂಠಮಾಲೆ ಯೆನಲೊಪ್ಪುವ ವಚನಂಗಳೊಳಗೆ ಅತ್ಯಂತ ಗೋಪ್ಯವಾದ ವಚನಂಗಳನೆ ತೆಗೆದು ಮುಮುಕ್ಷುಗಳ ಹೃದಯಶಾಂತರಾಳವನೆ ತೊಳಗಿ ಬೆಳಗುವೆಂದು ಕಂಗಡಿಸಿ ಪೇಳ್ವೆನದೆಂತೆಡೆ.

ಅಂತ್ಯ : ಸ್ವಸ್ಥ ಸಿದ್ಧಾಸನದಲ್ಲಿ ಕುಳ್ಳಿರ್ದು ಅತ್ತಿತ್ತ ಕಂಪಿಸದೆ ನೆಟ್ಟೆಲುವನೆ ನೆಟ್ಟನೆ ಮಾಡಿ ಅಧೋಗಮನ ವಾಯುವನೂರ್ಧ್ವಮುಖ ಮಾಡಿ ಆಧಾರವಂ ಬಲಿದು ಪ್ರಾಣವಾಯುವ ಪಾನವ ಮಾಡಿ ಅಱುವೆಱಳನಾಱುದ್ವಾರವ ನೊತ್ತಲು ಶಶಿ ರವಿಬಿಂಬಗಳ ಮಸಳಿ ಪನಾದ ತೇಜವು ಕೂಡಿ ಮೂರ್ತಿ ಯಾಗಿ ತಳತಳಿಸಿ ಹೊಳೆವ ಲಿಂಗದ ಬೆಳಗಿನೊಳಗೆ ಮನವಳಿದಾತನೆಮ್ಮನಿ ತೆಗೆ ವಲ್ಲಭನೆನಿಸುವ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನರಲ್ಲಿ ಆತನೆ ಪರಮಯೋಗಿ.

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಇದರ ಜೊತೆಯಲ್ಲಿ ಜ್ಯೋತಿರ್ಮಯ ಶಾಂಭವ ಜ್ಞಾನದೀಕ್ಷಾಬೋಧೆ, ಮುಕ್ತ್ಯಂಗನೆಯ ಕಂಠಮಾಲೆ ಇತ್ಯಾದಿ ೧೭ ಕೃತಿಗಳಿವೆ.

—ಜಿಜಿಎಂ

545

ಕೆ. ಬಿ. ೬೪೧ ಮುಗ್ಧ ಸಂಗಯ್ಯನ ಕಥೆ ಭಾಮಿನೀ ಷಟ್ಪದಿ

೮.೩"×೪.೬" ? ?

೧_೩೮ ಪತ್ರ ೨೨ ಪಂಕ್ತಿ ೨೬ ಅಕ್ಷರ

ಆದಿ : ಶ್ರೀ ಗುರು ಸಂಬಂಧನಾಥಾಯ ನಮಃ
ಮುಗ್ಧ ಭಕ್ತಲೀಲೆ ಬರಿಯುವದಕ್ಕೆ ಶುಭಮಸ್ತು
ಸೂಚನೆಯುಂ: ಆದಿಬಸವೇಶ್ವರನೆ ಮತ್ತೆಯು
ಮೇದಿನಿ ಮಂಡಲಕೆ ಬಂದು ವಿ
ನೋದದಿಂಚರ ಪೂಜೆಗೆಯ್ದುದ ವರ್ಣಿಪೆನೊಲಿದು
ಶ್ರೀ ಗುರುವು ಸನ್ಮಾರ್ಗದೀಪನು
ಶ್ರೀ ಗುರುವು ಶಿಷ್ಯೇಷ್ಟರೂಪನು
ಶ್ರೀ ಗುರುವು ಶಿವಭಕ್ತಿ ಬೀಜಕನುರುಬೂಜ
ಶ್ರೀ ಗುರುವು ಸಕಲಾಗಮೋಕ್ತನು
ಶ್ರೀ ಗುರುವು ಶಿವಮಂತ್ರ ಸೂಕ್ತನು
ಶ್ರೀ ಗುರುವು ಸುಜ್ಞಾನವಂ ಮಾಳ್ಕೆಮಗೆ ಸಂತಸದಿ ॥ ೧ ॥

ಅಂತ್ಯ : ಧರೆಯುಲಾಕಾಶಶಿಖಿವೇದ
ಕರಿಯೆನಲಾನಿಧಿ ಸಂಖ್ಯೆಗಳ್ಸುರು
ಚಿರ ಶಬ್ಧಗಳಿಗೆ ಕೀಲಕವತ್ಸರದ ಮಾರ್ಗ
ಶಿರದವರ ಶಿತಪಕ್ಷ ಪೂರ್ನಿಮೆ
ಯುರಜನೇತರವಾರದೊಳ್ ಶಿವ
ಕರುಣದಿಂ ನವಮುಗ್ಧ ಚರಿತಂ ಪೂರ್ನವಾಯಿತು
ಶ್ರೀ ಶ್ರೀ ಶ್ರೀ ಅಂತು ಸಂಧಿ ೯ಕ್ಕಂ ಪದನು ೩೮೮ಕ್ಕಂ ಮಂಗಲಂ ಶ್ರೀ ಶ್ರೀ
ಶ್ರೀ ನವಮುಗ್ಧಲೀಲೆಯು ಸಮಾಪ್ತಂ.

ವಿಷಯ : ಮುಗ್ಧ ಸಂಗಯ್ಯನ ಕಥೆ.

ವಿಶೇಷ : ಕಾವ್ಯ ಪೂರ್ಣವಾಗಿದೆ. ಪ್ರತಿ ಚೆನ್ನಾಗಿದೆ.

—ಹಕರಾ

546

ಕೆ. ೧೮೯೩/೩ ಮುತ್ತಿನ ಕಂತೆ ವಚನ ಭಾಮಿನೀ ಷಟ್ಪದಿ

೧೩.೪" × ೧.೬" ? ?

೭೪–೭೮ ಪತ್ರ ೭ ಪಂಕ್ತಿ ೫೨ ಅಕ್ಷರ

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಮುತ್ತಿನ ಕಾಂತೆ ಸದ್ಗುರುವಿನ

ಸ್ತೋತ್ರವ ಬರಲುದಕ್ಕೆ ಶುಭಮಸ್ತು ಶೋಭಾನಮಸ್ತು ಅೈಶ್ವರ್ಯಸ್ತು
ಆೈರಾರೋಗ್ಯರಸ್ತು ಶ್ರೀ ಗುರುವೇ ಗತ್ತಿ ॥
ಶ್ರೀ ಗಿರಿಯ ಬ್ರಮರಂಬನಾಳುವ
ಶ್ರೀ ಗಿರೀಶ್ವರಾ ಚರಣಸೇವಖ
ನಾಗಿಯಂನೊಳು ಪರಮಸುಖ ಸಂಪೂರ್ಣ ಚಿತ್ತದಲ್ಲಿ
ಯೋಗ್ಯವೆಂಟನಂ ಸಾಧಿಸಿದ ಶಿವಾ
ಯೋಗಿಗಳನರ್ಚಿಸುವನಾ
ಲಿಂಗಗಾಮಬೇಕೆಂದು ಮುತ್ತಿನ ಕಾಂತೆ ಸದ್ಗುರುವೇ ॥ ೧ ॥

ಅಂತ್ಯ : ಪೂರ್ಣವಾದ ನಿಜಾತ್ಮದೊಳು ಸಂ
ಪೂರ್ಣ ಘನ ನಿಜಲಿಂಗ ಧರಿಸಿದ
ಪೂರ್ಣ ಭಕ್ತಿಗೆ ಮೆಚ್ಚಿ ಮೆಚ್ಚಿ ಅಲ್ಲಮಪ್ರಭು ದಯದಿಂದಾ
ಜೀರ್ನ ಮಾಡಿದ ಭಾವವಿಕಾರವ
ಪಾರ್ನವಲಿಯಿಹ ಪರಮ ಸುಖವು ತೋರಿವ
ಕರ್ನವುಪದೇಶದಲಿ ಮುಕ್ತಿನ ಕಾಂತ್ತೆ ಸದ್ಗುರುವೆ ॥ ೪೪ ॥
ಯಿಂತೀ ಮುತ್ತಿನಕಂಥೆ ಸದ್ಗುರುದೇವರ ಬಾವಿನಿ ಸಮಾಪ್ತ ಮಂಗಳ ಮಹಾ ಶ್ರೀ.

ವಿಷಯ : ಲಿಂಗಸ್ತುತಿ.

ವಿಶೇಷ : ಪ್ರತಿ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಅಖಂಡೇಶ್ವರನ ಜೋಗುಳ ಪದ ಇತ್ಯಾದಿ ಕೃತಿಗಳಿವೆ.

—ವೈ.ಸಿ.ಬಿ

## 547

| ಕೆ. ೧೭೬೨/೪ | ಮುತ್ತಿನ ಕಂತೆ ವಚನ | ಭಾಮಿನೀ ಷಟ್ಪದಿ |
|---|---|---|
| ೭.೫" × ೧.೨" | ? | ? |
| ೧-೩ ಪತ್ರ | ೫ ಪಂಕ್ತಿ | ೩೫ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ × × × ತ್ರಿಹಂಡೆ ॥
ಶ್ರೀ ಗಿರಿಭ್ರಮರಂಭನಾಳೇವಾ
ಶ್ರೀ ಗಿರೀಶ್ವರ ಶರಣುಶೇವಕಾ
ನಾಗಿನೊಳು ಪರಮಸುಕ ಸಂಪೂರ್ನ ಚಿತ್ತದಲೀ ॥
ಯೋಗವೆಂಟನು ಸಾಧಿಸುವ ಶಿವ
ಯೋಗಿಗಳನಾರ್ಚಿಸುವೆ ಲಿಂಗದ
ಆಗಮವು ಬೇಕಯ್ಯ ಮುತ್ತಿನ ಕಂತೆ ಸದ್ಗುರುವೆ

ಅಂತ್ಯ: ಪ್ರಾಣಲಿಂಗವು ತನ್ನೊಳಗೆ ಅಭಿ
ಮಾನವೆಂಬುದ ಅರಿಯದಂತ್ತ
ಯಿಾನಮತಿಗಳಿದ್ಯಾಕೆ ಜಂಗಮದೀಕ್ಷೆನಾಂಚನವೂ
ಪ್ರಾಣಲಿಂಗವು ತನ್ನೊಳಗೆ ಲೀಯವಾದಡೆ
ಪ್ರಾಣಲಿಂಗಿಯರೆಂಬೊರುತನ
ಕಾಣಿಸುವರೈ ಗಂಪ್ಪ ಮುತ್ತಿನ ಕಂತೆ ಸದ್ಗುರುವೆ ॥ ೯ ॥

ವಿಷಯ : ವೀರಶೈವಧರ್ಮದಂತೆ ವೈರಾಗ್ಯಬೋಧನೆ.

ವಿಶೇಷ : ಇದರ ಜೊತೆಗೆ ಹಾಡು, ಚಂದಮಾಮನ ಹಾಡು. ಕರಸ್ಥಲದವರ ವಚನ ಮುಂತಾದ ೧೧ ಕೃತಿಗಳಿವೆ.

— ಜಿಜಿಎಂ

## 548

ಕೆ. ಬಿ. ೫೨೯ | ಮುದ್ರಾಮಂಜೂಷ | ಗದ್ಯ
೭.೮" × ೧೦.೮" | ಕೆಂಪುನಾರಾಯಣ | ೧೮೨೩
೨–೩೦೫ ಪತ್ರ | ೧೫ ಪಂಕ್ತಿ | ೩೦ ಅಕ್ಷರ

ಆದಿ : ನಿಬಿಡವಾಗಿ ಮಧುರೋಧಕವುಳ್ಳ ಸ್ಫಟಿಕ ಸರೋವರಗಳಿಂ ಕಾಮಿನೀ ಜನಕನು ಕಾಂತಿಭೂಷಣ ಮಣಿಪ್ರಭೆಗಳಿಂಯಿಂದ್ರಚಾಪ ತೋರಣಾಲಂಕೃತ ವಾದಂತೆ ಕಂಗೊಳಿಸುವ ಹರ್ಮ್ಯಸ್ಥಳಗಳಿಂ ಅನೇಕ ಶುಕಶಾಲಿಕ ನಿನದಾನು ಸ್ರುತ ಮಧುಕರ ಝೇಂಕಾರ ಗೀತಾನುಸಾರ ಮಯೂರ ತಾಂಡವಾವ ಲೋಕನ ಪ್ರಮುದಿತ ಮುಗಧ ನಿತಂಬಿನೀ ಚರಣಾಲಕ್ತಕರರಸ ರಂಜಿತ ಮಾಗಿ ಬಹು ಕುಸುಮ ನಿಕರ ಕೀರ್ಣವಾದುದರಿಂ ಚಿತ್ರಾಸ್ತರಂಗಳಂತೆ ರಂಜಿಸುವ ಲತಾಗೃಹ ಭೂಭಾಗಗಳಿಂ

ಅಂತ್ಯ : ಅಲ್ಲಿಯ ರುಷಿಗಳ ಮಂಡಲವೆಲ್ಲವಂ ಪ್ರದಕ್ಷಿಣೆಯಾಗಿ ಬಂದು ನಮಸ್ಕರಿಸಿ ಅವರೆಲ್ಲರ ಅನುಮತಿಯಿಂದ ರಾಕ್ಷಸಸಮೇತನಾಗಿ ರಥವಂನೇರಿ ಆಶ್ರಮವಂ ಬಿಟ್ಟು ಬಂದು ಪಾಟಲೀಪುರವಂ ನೈದಿ ಅಲ್ಲಿ ಅಮಾತ್ಯರೊಡಗೂಡಿ ಮಹಾ ರಾಜ್ಯಾಧಿಪತ್ಯವಂ ಸುಖದಿಂದ ಮಾಡುತಲಿದ್ದನೂಯೆಂಬಲ್ಲಿಗೆ ॥
ಶ್ರೀಮದ್ರಾಜಾಧಿರಾಜ ಮಾರ್ತಾಂಡನಪ್ರತಿಮವೀರ ನರಪತಿ × × × × ಶ್ರೀಮತ್ಕೃಷ್ಣರಾಜೇಂದ್ರರಾಶ್ರಿತ ಹೊಯಿಸಣಿಗೆ ಕುಲ ಸಂಜಾತ ನಾರಾಯಣಶರ್ಮ ವಿರಚಿತಮಪ್ಪ ಮುದ್ರಾಮಂಜೂಷವೆಂಬ ಕಾವ್ಯ ಗ್ರಂಥದಲ್ಲಿ ಚಂದ್ರಗುಪ್ತ ರಾಜ್ಯಾಭಿಷೇಕ ಕಥನವೆಂಬ ಅಷ್ಟಾದಶಾಶಯಃ ಸಮಾಪ್ತಃ

ಶ್ರೀ ಸಾಂಬಾಯ ನಮಃ ॥ ಚಿರಂಜೀವತು ಚಾಮೇಂದ್ರತನೂಜಃ ಕೃಷ್ಣ ಭೂಮಿಪಃ । ಯತ್ಕಟಾಕ್ಷಾಂಕುರಸ್ತೋಮಃ ಕವಿಕಲ್ಪ ದ್ರುಮಾಯತೇ । ಶಾಲೀವಾಹನ ಶರಸ್ಯುನತಾ ಸುಬಾಣಯುಗಮುನೀಂದು ಸಂಖ್ಯಾಸಂ ನಾರಾಯಣೇನ ರಚಿತಂ ಮುದ್ರಾಮಂಜೂಷಕಾಹ್ವಯಂ ಕಾವ್ಯಂ ಪರಗುಣ ಶೀಕರಮುದಧೀಂ ಕೃತ್ವಾ ತತ್ರೈವ ಖೇಲದ್ಭ್ಯಃ ॥ ಅಜ್ಞಾತ ಮತ್ಸರೇಭ್ಯಸ್ತೇ ಭ್ಯುಸದ್ಭ್ಯೋ ನಮೋಽಸ್ತು ವಿದ್ವದ್ಭ್ಯಃ ॥ ಶ್ರೀ ಶ್ರೀರಾಮಾರ್ಪಣ ಮಸ್ತು.

ವಿಷಯ : ಅಧರ್ಮದಿಂದ ರಾಜ್ಯವಾಳುತ್ತಿದ್ದ ನಂದನರನ್ನು ಚಾಣಕ್ಯನು ನಾಶಪಡಿಸಿ ಚಂದ್ರಗುಪ್ತನನ್ನು ಪಟ್ಟಕ್ಕೆ ತಂದ ಕಥೆ.

ವಿಶೇಷ : ಆದಿಯಲ್ಲಿ ಮೊದಲ ಪತ್ರವಿಲ್ಲ. ಬರಹವು ಸುಂದರವಾಗಿದೆ.

—ಕೆಆರ್‌ಎಸ್

## 549

| ಕೆ. ೧೪೯೪/೧ | ಮುನಿವಂಶಾಭ್ಯುದಯ | ಸಾಂಗತ್ಯ |
|---|---|---|
| ೯" × ೧.೧೧'' | ಚಿದಾನಂದ | ಸು. ೧೬೮೦ |
| ೧_೩೭ ಪತ್ರ | ೯ ಪಂಕ್ತಿ | ೪೨ ಅಕ್ಷರ |

ಆದಿ : ಶ್ರೀ ವೀತರಾಗಾಯ ನಮಃ
ಶ್ರೀ ಮುನಿವಂದ್ಯ ದಿವ್ಯಧ್ವನಿಗಧಿಪ ಮ
ಹಾಮಹಿಮಾಕರ ನಿರಘಾ
ಪ್ರೇಮದೊಳೆನ್ನಂತರಂಗದೊಳಿರು ಮಹಾ
ಸ್ವಾಮಿ ಪರಜ್ಯೋತಿರೂಪ ॥ ೧ ॥ × × ×
ಜಲಧಿ ಮೇರೆಯ ಭೂಮಂಡಲವನು ತಂತ್ರ
ಬಲದೊಳಾಕ್ರಮಿಸಿ ನಿನ್ನಂತೆ
ಛಲದಂಕನೆನಿಸಿ ಮೆರೆವ ನೃಪನಾರು ಸ
ತ್ಕಲಿ ಚಿಕ್ಕದೇವನೃಪಾಲಾ ॥ ೩ ॥ × × ×
ಪರಮ ಜಿನೇಂದ್ರ ಪದಾಂಬುಜ ಮಧುಕರ
ವರಚಿದಾನಂದ ವಿರಚಿತ
ಸುರುಚಿರ ಮುನಿವಂಶಾಭ್ಯುದಯದೊಳಿಂತು
ಕರಮೆಸದುದು ಸಂಧಿಯೊಂದು ॥ ೬೨ ॥

ಅಂತ್ಯ : ರಾಜಾಧಿರಾಜ ರಾಜ್ಯಾಂಗನಾರಮಣ ಸ
ದ್ರಾಜ ಮಂದಾರನೆಂದೆನಿಪ
ರಾಜೇಂದ್ರನೊಳು ನವಮುನಿರತ್ನಗಳ ಪೇಳಿ
ದೋಜೆ......

ವಿಷಯ : ಮೈಸೂರು ಅರಸರು ಮತ್ತು ಬೆಳುಗೊಳದ ಮುನಿಗಳ ಸಂಬಂಧ.

ವಿಶೇಷ : ಅಸಮಗ್ರ. ಇದರ ಜೊತೆಯಲ್ಲಿ ಕೆಲವು ಜೈನ ಹಾಡುಗಳಿವೆ.

—ಜಿಜಿಮ

550

ಕೆ. ೧೬೪೧/೨ ಮುನಿಸುವ್ರತ ಕಾವ್ಯ ಶ್ಲೋಕ, ಟೀಕು
೮.೨"×೧.೬" ? ?
೧೪–೪೫ ಪತ್ರ ೭ ಪಂಕ್ತಿ ೨೫ ಅಕ್ಷರ

ಆದಿ : ಶ್ರೀ ಆದಿನಾಥಾಯನ್ನಮಃ ॥ ಮುನಿಸೂವ್ರತ ಕಾವ್ಯ ಬರಿವುದಕ್ಕೆ ಶುಭ ಮಸ್ತು
ಶ್ರೀಯಂಸವಃ ಶ್ರೀ ವೃಷಭೋ ವಿಶಿಷ್ಟಾದ್ಯಾಸ್ಯಾಳಿ ಮಾಲಾವೃತವಕ್ಷ ಛಾಯಾಂ ಬಚಾನತೇಂದ್ರೋತ್ಕರ ಮೌಲಿನೀಲ ಪ್ರಭಾಲಿಲಾಲಿತಮಬ್ಜ ಪೀಡಂ ॥ ೧ ॥

..................

ಶ್ರೀಯಂ–ಸಂಪದಂ । ಪುಣ್ಯವತಃ ಪುರುಷಃ ಶ್ರಿಯತ್ಯಾಶ್ರಯಂತಿತಿ ಶ್ರೇಸ್ಸಾಂ ವಿಶಿಷ್ಯಾತ್ ವಿದದ್ಯಾತ್ ಶಿಷ್ಣ ವಿಶ್ಲೇಷಣೆ ಲಿಜ್॥ ಉಪಮಾಲಂಕಾರಂ ॥ ಶ್ರೀಯಂ–ಸಂಪತ್ತನು । ಸಃ–ಆತನು । ವಃ–ನಿಮಗೆ । ಶ್ರೀ–ಅಂತರಂಗ ಬಹಿರಂಗ ಲಕ್ಷ್ಮಿಯೊಡಗೂಡಿದ । ವೃಷಭಃ–ಆದಿ ಪರಮೇಶ್ವರನು । ವಿಶಿಷ್ಯಾತ್–ಕೊಡಲಿ । ...... ಅಬ್ಜಪೀಠಂ–ಕಮಲಪೀಠವು ॥ ೧ ॥

ಅಂತ್ಯ : ತಮೋನಿವಾಸೇಷು ವನೇಷು ಯಸ್ಯ ಮರಂದಸಾದ್ರಾಸ್ತರ ಣೆರ್ಮಯೂಖಾಃ ಸ್ಫುರಂತಿ ಶಖಾಂತರಲಬ್ಧಮಾರ್ಗ್ಗಃ ಕಂತಃ ಪ್ರಯುತಾ ಇವ ಶೋಣಿತಾದ್ರಾಃ ॥
ತಮಃ–ಕತ್ತಲೆಗೆ ನಿವಾಶೇಷ–ತೆರವಾದಂಥಾ ಆದರಲ್ಲಿ ವನೇಷು–ಅಡವಿಗಳಲ್ಲಿ । ಯಸ್ಯ–ಅವುದಾನೊಂದರ ದೆಶೆ ಶದಮರಂದ–ಪುಷ್ಪದೂಳಿನಿಂದ ಸಾಂದ್ರಃ–ನನೆದಂಥಾವು । ತರಣಿ–ಸೂರ್ಯನ । ಮಯೂಖಾಃ–ಕಿರಣಂಗಳಂ ಸ್ಫುರಂತಿ–ವೊಪ್ಪುತಂ ಇದ್ದಾಉ । ಶಾಖಾ–ಕೊನೆಗಳ । ಅಂತರ–ನಡುವೆ । ಲಬ್ಧ–ಪಡೆಯಲ್ಪಟ್ಟಾ । ಮಾರ್ಗಾಃ–ದಾರಿಯನುಳ್ಳಂಥಾವು ।

ಕುಂತಾಃ-ಸಬಳಗಳು । ಪ್ರಯುಕ್ತಾಃ-ಪ್ರಯೋಗಿಸಲ್ಪಟ್ಟಂಥಾವು । ಇವ-ಎಂಬಂತೆ ಶೋಣಿತ-ರಕ್ತದಿಂದ । ಆದ್ರ್ರ-ನನೆದಂಥಾವು ಶ್ರೀ ಶ್ರೀ.

ವಿಷಯ : ಮುನಿಸುವ್ರತ ತೀರ್ಥಂಕರನ ಚರಿತ್ರೆ.

ವಿಶೇಷ : ಅಸಮಗ್ರ. ಪ್ರತಿ ಚೆನ್ನಾಗಿದೆ. ಸಂಸ್ಕೃತ ಕಾವ್ಯಕ್ಕೆ ಕನ್ನಡ ಟೀಕೆ. ಇದರ ಜೊತೆಗೆ ಉಯ್ಯಾಲೆ ಪದ ಮುಂತಾದ ೨ ಕೃತಿಗಳಿವೆ.

—ಜಿಜಿಎಂ

## 551

ಕೆ. ಎ. ೫೩೫/೫ ಮುಪ್ಪಾಗ ಮಗ್ಗಿ ಗದ್ಯ

೯.೨''×೧೧.೨'' ? ?

೮೪_೮೮ ಪುಟ ೨೦ ಪಂಕ್ತಿ ೩೦ ಅಕ್ಷರ

ಆದಿ : ಶ್ರೀ ಶಾರದಾಯಂ ನಮಃ ॥ ಮುಪ್ಪಾಗ ಮಗ್ಗಿ ಬರಿಯುವದಕ್ಕೆ ಶುಭ ಮಸ್ತು ॥

೧೧ ॥ ಹಂ ೦
೧೦೧ ॥ ಹ ೭
೧೦೦ ॥ ಹ ೭೫
೧೦೦೦೦ ॥ ಹ ೭೫೦

೫೦೦೦೦ ॥ ಹ ೩೭೫೦
೬ ॥ ಹ ೪ ॥
೬೦ ॥ ಹ ೪೫ ॥
೬೦೦ ॥ ಹ ೪೫೦ ॥
೬೦೦೦ ॥ ಹ ೪೫೦೦ ॥

೧ ॥ ಹಂ ॥
೧೦ ॥ ಹ ೫
೧೦೦ ॥ ಹ ೫೦
೧೦೦೦ ॥ ಹ ೫೦೦

೫೦೦೦ ॥ ಹ ೨೫೦೦
೬ ॥ ಹ ೩
೬೦ ॥ ಹ ೩೦
೬೦೦ ॥ ಹ ೩೦೦
೬೦೦೦ ॥ ಹ ೩೦೦೦

ಅಂತ್ಯ : ೧೯ ॥ ಹ । ೦ ॥
೯೦ ॥ ಹ ೨ ॥
೯೦೦ ॥ ಹ ೨೮೭
೯೦೦೦ ॥ ಹ ೨೮೧ ॥
೧೦೦೦೦ ॥ ಹ ೩೧೨ ॥

೪ ಕಾ । ಹ
೪೦ ಕಾ । ಹ ॥೭
೪೦೦ ಕಾ । ಹ೬।೦
೪೦೦೦ ಕಾ । ಹ ೬೨ ॥

೫ ಕಾಹ —।
೫೦ ಕಾ । ಹ ೧೧೦ ॥
೫೦೦ ಕಾ । ಹ ೭೧ ॥

ಅರೆವೀಸ ಮಗಿ ಸಮಾಪ್ತಾ

೯ ಕಾ ಹ ೭ ।
೯೦ ಕಾ ಹ ೧ । ೭ ॥
೯೧೦ ಕಾ। ಹ ೧೪
೯೦೦೦ ಕಾ ಹ ೧೪೦ ॥ ೭
೧೦೦೦೦ ಕಾ। ಹ ೧೫೭ ॥
ಕಾಣಿ ಮುಗ್ಗಿ ಸಮಾಪ್ತಾ ಮಂಗಳ ಮಹಾ ಶ್ರೀ.

ವಿಷಯ : ಮುಗ್ಗಿ.

ವಿಶೇಷ : ಇದೇ ಪುಸ್ತಕದಲ್ಲಿ ವ್ಯವಹಾರ ಗಣಿತ, ಉಪಾಯ ಗಣಿತ, ಗಣಾಷ್ಟಕ, (ಸಂ) ವಿನಾಯಕನ ಕಥೆ, ನವರತ್ನಗಳು ಎಂಬ ಕೃತಿಗಳಿವೆ. ಇದಲ್ಲದೆ ೮೯–೯೭ರ ವರೆಗೆ ಕೆಲವು ಕನ್ನಡ ಟೀಕೆಗಳನ್ನುಳ್ಳ ಸಂಸ್ಕೃತ ಶ್ಲೋಕಗಳಿವೆ.

—ವೈಸಿಬಿ

## 552

ಕೆ. ಎ. ೩೭೪ ಮುಮ್ಮಡಿ ಶ್ರೀಕೃಷ್ಣರಾಜೇಂದ್ರಸಾರ್ವಭೌಮರ ಶ್ರೀವಂಶರತ್ನಾಕರ ಗದ್ಯ
೧೨"×೭.೫" ಲಕ್ಷ್ಮಣಾರ್ಯ ?
೧–೧೦೬ ಪತ್ರ ೧೯ ಪಂಕ್ತಿ ೨೭ ಅಕ್ಷರ

ಆದಿ : ಶ್ರೀಮಂತ್ಸಮಸ್ತ ಭೂಮಂಡಲಮಂಡನಾಯಮಾನೇತ್ಯಾದಾನೇಕ ಬಿರು ದಾಂಕಿತರಾದ ಶ್ರೀಮನ್ಮಹೀಶೂರ ಪುರವರಾಧೀಶ ದಿವ್ಯರತ್ನ ಸಿಂಹಾಸನಾ ರೂಢ ಶ್ರೀ ನಂಜರಾಜವರ್ಮಾಭಿಧ ಮುಂಮಡಿ ಶ್ರೀ ಕೃಷ್ಣರಾಜೇಂದ್ರ ಸಾರ್ವಭೌಮರ ಶ್ರೀವಂಶಾವತಾರ ರತ್ನಾಕರ ಹದಿನಾರು ತರಂಗಉಳ್ಳ ಕನ್ನಡ ಟೀಕನ್ನು ಬರೆಯುವದಕ್ಕೆ ನಿರ್ವಿಘ್ನಮಸ್ತು. ಶ್ರೀಮಂತ್ಸಮಸ್ತ ಭೂಮಂಡಲಮಂಡನಾಯಮಾನ ನಿಖಿಲ ದೇಶಾವತಂಸ ಕರ್ನಾಟಕ ಜನ ಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯಮಾನಾವಿಕಲ ಕಲಾನಿಧಿ ಕುಲಕ್ರಮಾಗತ ರಾಜ ಕ್ಷಿತಿಪಾಲ ಪ್ರಮುಖ ನಿಖಿಲ × × × ಶ್ರೀ ಕೃಷ್ಣರಾಜ ಸಾರ್ವಭೌಮರ ಶ್ರೀವಂಶಾ ವತಾರ ರತ್ನಾಕರ ಗ್ರಂಥವಂನು ಕರ್ಣಾಟಕ ಭಾಷೆಯಿಂದ ವಿವರಿಸುವದಕ್ಕೆ ನಿರ್ವಿಘ್ನಮಂಸ್ತು ॥

ಅಂತ್ಯ : ಶ್ರೀ ಕೃಷ್ಣರಾಜ ಸಾರ್ವಭೌಮ ಶ್ರೀ ವಂಶಾವತಾರ ರತ್ನಾಕರದೊಳ್ ಮುಂಮಡಿ ಶ್ರೀ ಕೃಷ್ಣರಾಜ ವಡಯರವರು ವರ್ಷವೃಧ್ಯಭಿಷೇಕಾ ನಂತರ ದಲ್ಲಿ ಅಂತಃಪುರಸ್ತ್ರೀಜನರು ಕೃತಾರ್ಥರಂ ಮಾಡಿ ಸಕಲ ವೈಭವದಿಂದ

ರಾಜವೀಧಿ ಮಹೋತ್ಸವ ಕಾಲದೊಳ್ × × × ನಾನಾ ದೇಶದಿಂದ ಬಂದ ಸಮಸ್ತ ಜನರಿಗು ಆವರವರ ಯೋಗ್ಯತಾನುಸಾರ ಮೃಷ್ಟಾನ್ನ ಭೋಜನ ಮೊದಲಾದ ಮರ್ಯಾದೆಯುಂ ಪರಕಾಲಸ್ವಾಮಿಗಳು ಮೊದಲಾದ ಮಠಪತಿಗಳಾದ ಯತೀಶ್ವರರಿಗೆ ಬಹಳವಾಗಿ ಸೇವೆಯುಂ ಮಾಡಿದುದಂ × × × ಧೊರೆಯುವರ ಸ್ವಭಾವಸಿದ್ಧವಾದ ಗುಣವರ್ನನ ಮೊದಲಾದುದಂ ಬಂಣಿಶಿಯಿರುವ ಹದಿನಾರನೆ ತರಂಗಕ್ಕೆ ಮಂಗಳ ಮಹಾ ಶ್ರೀ. ಕಲ್ಯಬ್ದಭೂದಧಿಭಗಣ್ಯ ಸುಚಿತ್ರ ಭಾನು ವೈಶಾಖ ಶುಕ್ಲ ದಶಮಿಾ ದಿವಸೆ ಲಿಖದ್ಯಃ ॥ ಶ್ರೀ ಕೃಷ್ಣಮಂಡಲ ಪತೀಶ್ವರವಂಶಪಜ್ಞಿಃ ಶ್ರೀ ಗುಂಡ್ಲು ಪಂಡಿತ ತನೂಭವ ಲಕ್ಷಣಾರ್ಯಃ ॥

ವಿಷಯ : ಮೈಸೂರು ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ ವಂಶಾವಳಿ.

ವಿಶೇಷ : ಇದನ್ನು "ಚಿತ್ರಭಾನು ವೈಶಾಖ ಶುಕ್ಲ ದಶಮಿಾ"ಯಲ್ಲಿ ಬರೆಯಲಾಗಿದೆ. ಗ್ರಂಥದ ೧೦೭–೧೯೯ ಪತ್ರಗಳಲ್ಲಿ ಜಗದುತ್ಪತ್ತಿ ಸ್ಥಿತಿ ಲಯಗಳ ವಿವರ್ಣವಿದೆ.

—ಬಿಎಸ್ಎಸ್

## 553

| ಕೆ. ೧೦೯೯।೮ | ಮುರಿಗೆಯ ತಾರಾವಳಿ | ಪದ್ಯ |
|---|---|---|
| ೧೪.೨"×೨.೯" | ಇಮ್ಮಡಿ ಮುರಿಗಾ ಗುರುಸಿದ್ಧ | ಸು. ೧೭೨೦ |
| ೮೫–೯೨ ಪತ್ರ | ೮ ಪಂಕ್ತಿ | ೬೦ ಅಕ್ಷರ |

ಆದಿ : ಶ್ರೀ ಗುರುಬಸಲಿಂಗಯ ನಮಃ ॥ ಶಾರ್ದೂಲವೃತ್ತಂ ॥
ಆವಂತಾನಿದರೊಳ್ಮನುಷ್ಯನಂತಿ ಭಾವಾಧಿಕ್ಯಮಂ ಮಾಳ್ಪವಂ
ಶೈವಂ ಮಾರ್ಗ್ಗಮವಂಗೆ ಭಾಸ್ಯಮಿದು ಸಿದ್ಧಾಂತಂ ನಿತಾಂತಂ ವಲಂ
ಕೈವಲ್ಯಪ್ರದನೀಶನೊಲ್ಮೆಯೊಡೆದಾ ಚಂಡಾಲನೆ ಬ್ರಾಹ್ಮಣಂ
ಕೈವರ್ತ್ತಿಸಂತ ಭಾದರಾಯಣ ಮುಖ್ಯ ಸದ್ಭಕ್ತರಾದತೆಯೊಲ್ ॥ ೧ ॥

ಅಂತ್ಯ : ಮುದದೊಳ್ನಿಂಮುಮಹಾತ್ವಸಂ ನುಡಿಯು ನಾಸಂ ಭಕ್ತಿಯಿಂದೋದುವಂ
ಗುರುಸಂತತಿಗಳಿಗಿ ಸೌಭಾ ।
ಗ್ಯದ ಶಂಟ್ಟಳ್ಕರಿಂ ನೋಡಿ ನೀನದರೊಳ್ಪಿಂ ಮಿಂಗೆ ರಕ್ಷಿಸೈಯು ದ
ಯದೇ ದಾಕ್ಷಿಣ್ಯಬ್ದಿ ಪೂರ್ಣಾಬ್ಜ ನೇ ।
ತ್ರಿದಶಾದಿತ್ಯ ಕಿರೀಟಘ
ಮದನಾರಾತಿಯುಮವಂಗೆ ಭೂರಿ ಸುಖಮಂ
ಕೊಟ್ಟೀತ ಪದಶ್ರೀ ಶಾಂತವೀರೇಶ್ವರಾ ॥ ೧ ॥
ಮುರಿಗೆ ತಾರವಳಿ ಸಮಾಪ್ತ ಮಂಗಳ ಮಹಾ ಶ್ರೀ.

ವಿಷಯ : ಸ್ತುತಿ ಪದ್ಯಗಳಂ.

ವಿಶೇಷ : ತಾರಾವಳಿ ಪೂರ್ತ ಇದೆ. ಇದೇ ಕಟ್ಟಿನಲ್ಲಿ ವೈರಾಗ್ಯ ಷಟ್ಪದಿ, ಶಿವಲಿಂಗ ಷಟ್ಪದ, ಲಿಂಗಸ್ತೋತ್ರದ ಷಟ್ಪದ ಮೊದಲಾದ ಒಟ್ಟು ೯ ಕೃತಿಗಳಿವೆ.

—ಕೆಆರ್‌ಎಸ್

## 554

| ಕೆ. ೧೧೩೧/೬ | **ಮುರಿಗೆ ಸ್ವಾಮಿಗಳ ನಾಂದ್ಯ** | ವಿವಿಧ ಷಟ್ಪದಿ |
|---|---|---|
| ೭.೨"×೧.೫" | ಮುರಿಗೆ ಶಾಂತವೀರ | ಸು. ೧೫೩೦ |
| ೧೬–೨೧ ಪತ್ರ | ೯ ಪಂಕ್ತಿ | ೩೬ ಅಕ್ಷರ |

**ಆದಿ :** ಮುರಿಗೆ ಸ್ವಾಮಿಗಳು ನಿರೂಪಿಸಿದ ನಾಂದ್ಯ ॥ ವಾರ್ಧಿಕ ॥
ಶ್ರೀಮದಭ್ರಾಳಕಂ ಭ್ರಾಜಿತಾಭ್ರ ರಸಭ್ರು
ದ್ಧಾಮಸಿಧಿ ಧವಳರೂರುಗ್ಧಾಮ ಕೇಶ್ವಕ್ಷಸು
ದ್ಧೋಮ ಹ್ರುದ್ಭೀಮಭಿತ್ಕಾಮ ಜಿದ್ದೆಮಾದ್ರಿ ಧರ್ಮ್ಮಕಪ್ರತ್ಕರ್ಮ್ಮಭೇದಿ
ಭ್ರಾಮಕೋದ್ಧತ ಪಂಚಮೇಡ್ರಾಭದೈತ್ಯಾದಿ
ಭೂಮಿ ಭಾರಕಬಲಾ ಖರ್ವ್ವ ಗರ್ವ್ವಾಪಹ
ಸ್ವಾಮಿ ಶಾಶ್ವತ ಮಹಾತ್ಮೇಮಿ ಪಾಲಯ ಸದಾ ಶ್ರೀ ಶಾಂತವೀರೇಶ್ವರಾ
॥ ೧ ॥

**ಅಂತ್ಯ :** ಅಂಗ ಲಿಂಗಾನನ ಕರಂಗಳ
ಸಾಂಗಶಕ್ತಿ ಸೂಭಕ್ತಿಮನುಗಳ
ಮಂಗಳಾರ್ಪ್ಪಿತ ತತ್ವಸಾದಂಗಳನುಱಿಯುಱಿದಾ
ಲಿಂಗಸಂಗಾನಂದ ಸುಖಿಗಳ
ತುಂಗಮಾನಸರಂಗ ಮಂಟಪ
ರಂಗಿತಾತುಳ ವಿಜಯ ರಾಮಂಗಾಭಿಗುಣಧಾಮಾ ॥ ೨೪ ॥

ವಿಷಯ : ಸ್ತುತಿ ಪದ್ಯಗಳು.

ವಿಶೇಷ : ಶಕಟರೇಫವಿದೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಹಾಡುಗಳು, ಪಂಚ ವಿಂಶತಿ ಸ್ತೋತ್ರಗಳೇ ಮೊದಲಾಗಿ ಒಟ್ಟು ೧೭ ಕೃತಿಗಳಿವೆ.
[ಕ.ಹ.ಪ್ರ.ವ.ಸೂ. ತೃತೀಯ ಸಂಪುಟ ಪುಟ ೩೧೮. ಕ್ರಮಾಂಕ 1336 ನೋಡಿ]

—ಕೆಆರ್‌ಎಸ್

555

ಕೆ. ೧೨೭೨/೬ ಮುರಿಗೆ ಸ್ವಾಮಿಗಳ ನಾಂದ್ಯ ವಿವಿಧ ಷಟ್ಪದಿ

೧೧''×೧.೯'' ಮುರಿಗೆ ಶಾಂತವೀರ ಸು. ೧೫೩೦

೧೫–೧೬ ಪತ್ರ ೧೦ ಪಂಕ್ತಿ ೪೮ ಅಕ್ಷರ

**ಆದಿ :** ಮುರಿಗೆಯು ಸ್ವಾಮಿಗಳು ನಿರೂಪಿಸಿದ ನಾಂದ್ಯ ॥

ಪದ ॥ ಶ್ರೀಮದ ಭ್ರಾಳಕಂ ಭ್ರಾಜಿತಾಭ್ರರಸಭ್ರ
ದ್ವಾಮ ಸಿಧಿ ಧವದರೂಗ್ದಮ ಕೇತ್ವಕ್ಷ ಸ
ದ್ಯೋಮ ಹೃಧ್ಭೀಮಭಿತ್ಕಾಮಜಿದ್ದೇನೂಧ್ರಿ ಧರ್ಮಕೃತ್ಕರ್ವಭೇದಿ
ಭ್ರಾಮತೋದ್ಧತ ಪಂಚ ಮೇಡ್ರಾಭ್ರ ದೇವ್ಯದಿ
ಭೂಮಿಂಭಾರಕ ಬಲಾ ಖರ್ವ್ವಗರ್ವ್ವಪಹ
ಸ್ವಾಮಿ ಶಾಶ್ವತ ಮಹಪ್ರಮಿ ಪಾಲಯ ಸದಾ ಶ್ರೀ ಶಾಂತವೀರೇಶ್ವರಾ ॥೧॥

**ಅಂತ್ಯ :** ಅಂಗ ಲಿಂಗಾನನ ತರಂಗಳ
ಸಂಗ ಶಕ್ತಿ ಸುಭಕ್ತಿ ಮನಂಗಳ
ಮಂಗಳಾರ್ಪಿತ ತತ್ತ್ವಪಾದಂಗಳನು ನೆಱೆಯಱಿದಾ
ಲಿಂಗಸಂಗಾನಂದ ಸುಖಿಗಳ
ತುಂಗ ಮಹಾನಸ ರಂಗಮಂಟಪ
ರಂಗಿತಾತುಳ ವಿಜಯರಾಮಾಂಗಭಿಗುಣಧಾಮಹಾ ॥ ೨೪ ॥
ಮುರಿಗೆ ಸ್ವಾಮಿಗಳು ನಿರೂಪಿಸಿದ ನಾಂದ್ಯ ಸಂಪೂರ್ಣ ಮಂಗಳ ಮಹಾ ಶ್ರೀ.

**ವಿಷಯ :** ಸ್ತುತಿ ಪದ್ಯಗಳು.

**ವಿಶೇಷ :** ಶಕಟರೇಫವ ಪ್ರಯೋಗವಿದೆ. ಇದೇ ಕಟ್ಟಿನಲ್ಲಿ ಸಿದ್ಧೇಶ್ವರ ಪುರಾಣದ ನಾಂದ್ಯ, ಚೇರಮ ನಕಾವ್ಯದ ನಾಂದ್ಯ, ಚಿಕ್ಕನೀಲಮ್ಮನ ಸ್ತೋತ್ರ, ನೀಲಾಂಬಿಕಾ ಲಲಿತ ಸ್ತೋತ್ರ, ವೈರಾಗ್ಯ ಷಟ್ಪದಿ ಮೊದಲಾದ ೧೭ ಕೃತಿಗಳಿವೆ.

—ವೈಸಿಬಿ

556

ಕೆ. ೧೫೪೩/೪ | ಮುರಿಗೆ ಸ್ವಾಮಿಗಳ ನಾಂದ್ಯ | ವಿವಿಧ ಷಟ್ಪದಿ

೧೧.೨''×೧.೯'' | ಮುರಿಗೆ ಶಾಂತವೀರ | ಸು. ೧೫೩೦

೧೦–೧೩ ಪತ್ರ | ೯ ಪಂಕ್ತಿ | ೫೬ ಅಕ್ಷರ

ಆದಿ : ಮುರಿಗೆ ಶಾಂತವೀರಸ್ವಾಮಿಗಳು ನಿರೂಪಿಸಿದ ನಾಂದ್ಯದ ಪದನೂ ॥
ಶ್ರೀಮದಭ್ರಾಳಕ ಭ್ರಾಜಿತಾಭ್ರದಸಭ್ರ
ದ್ಧಾಮ ನಿಧಿ ಧವಳ ರಂಗೂಢ ಮಂಕೇತ್ವಕ್ಷ ಸ
ಸದ್ಧೋಮಂ ಹೃದ್ಭೀಮಾಭಿತ್ಕಾಮಜಿದ್ಧೇಮಾದ್ರಿಧರ್ಮ ಕೃತ್ಕರ್ಮಭೇದಿ
ಭ್ರಾಮಕೋದ್ವತ ಪಂಚಮೇಡಾಭ್ರದೈತ್ಯಾದಿ
ಭೂಮಿ ಭಾರತ ಬಲಾಖರ್ವ ಗರ್ವಪಹ
ಸ್ವಾಮಿ ಶಾಶ್ವತ ಮಹತ್ಪ್ರೇಮಿ ಪಾಲಯ ಸದಾ ಶ್ರೀ ಶಾಂತ
ವೀರೇಶ್ವರಾ ॥ ೧ ॥

ಅಂತ್ಯ : ಅಂಗಲಿಂಗಾನನ ಕರಂಗಳ
ಸಂಗಶಕ್ತಿ ಸುಭಕ್ತಿ ಮನುಗಳ
ಮಂಗಳಾಪ್ರ್ಪಿತತ್ಪ್ರಸಾದಂಗಳನು ಸೆರೆಯರಿದಾ
ಲಿಂಗಸಂಗಾನಂದ ಸುಖಿಗಳ
ತಂಗಮಾನಸ ರಂಗಮಂಟಪ
ರಂಗಿತಾತುಳ ವಿಜಯರಾಮಂಗಾಭಿ ಗುಣದಾಮಾ ॥ ೨೪ ॥
ಮುರಿಗೆ ಶಾಂತವೀರೇಶ್ವರಸ್ವಾಮಿಗಳು ನಿರೂಪಿಸಿದ ನಾಂದ್ಯದ ಪದ ಸಮಾಪ್ತ ಮಂಗಳ ಮಹಾ ಶ್ರೀ.

ವಿಷಯ : ಸ್ತುತಿ ಪದ್ಯಗಳು.

ವಿಶೇಷ : ಇದರಲ್ಲಿ ೨೪ ಪದ್ಯಗಳಿವೆ, ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ನೀಲಾಂಬಿಕಾ ಲಲಿತ ಸ್ತೋತ್ರ, ಸೌಂದರ ಪುರಾಣದ ನಾಂದ್ಯ, ನೀಲಮ್ಮನ ಸ್ತೋತ್ರ ಇತ್ಯಾದಿ ೩೧ ಕೃತಿಗಳಿವೆ.

—ಕೆಆರ್ಎಸ್

## 557

| | | |
|---|---|---|
| ಕೆ. ೧೫೪೩/೭ | ಮುರಿಗೆ ಸ್ವಾಮಿಗಳ ನಾಂದ್ಯ | ವಿವಿಧ ಷಟ್ಪದಿ |
| ೧೧.೨" × ೧.೯" | ಕಂಪಿ ನಂಜಯ್ಯ | ಸು. ೧೬೫೦ |
| ೨೨–೨೫ ಪತ್ರ | ೯ ಪಂಕ್ತಿ | ೫೬ ಅಕ್ಷರ |

**ಆದಿ :** ಕಪ್ಪಿನಂಜೈದೇವರು ನಾಂದ ॥ ವಾರ್ದ್ಧಿಕ ॥
ಶ್ರೀಮದಮರೇಂದ್ರವೈಕುಂಠವೀ ದೀಕ್ಷೆ ಮಹಿಮ
ಭೂಮಿದ್ವರ ತನುಜೆಯರ್ದ್ಧಾಂಗ ಯಮೀಜನ
ಪ್ರೇಮದೂಮಧ್ವಜ ಹಿಮಾಂಶು ದಿನಕರ ವಿಲೋಚನ ಸಾಂದ್ರ ಮಹಿಮ ಸಗುಣಾ
ಸ್ತೋಮ ಪೂರ್ವಾಮರ ಶಿಲೋಮಾಲೆದಳೆದ ಪರ
ಕಾಮಾಂಗದಹನ ಭಸಿತ ವಿಲೇಪಕಾಯಮ
ತ್ವಾಮಿ ರಕ್ಷಿಸು ಮಹೋಕ್ಷಗ ಶಾಂತವೀರೇಶನರಗಿಷ್ಟದಾತ ಮಂದದಿಂ ॥೧॥

**ಅಂತ್ಯ :** ವರಪರಸ್ತುತಿಗಳನಿದಂ ಮಿಗೆ
ಬರೆದು ಸಿಚ್ಛಂ ಪಡಿಸಿ ದುಗ್ಗ್ರ್ಗಣ
ದುರಿತ ಸಂಕಂಳ ಮರ್ದ್ದನ ಭಯ ಕರವರವಕರನೂ
ಚಿರತರಾಯು ಶ್ರೀಯುಮಂ ಸ
ದುರುಚರಾಮಳಲಿಂಗ ಭಕ್ತಿಯ
ನಿರದೆ ಕರುಣಿಸಿ ಸಲಹುವಂ ಶ್ರೀಶಾಂತವೀರೇಶ್ವರಾ ॥ ೨೫ ॥
ಮುರಿಗೆಸ್ವಾಮಿಗಳ ಸ್ತೋತ್ರದ ನಾಂದ್ಯ ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ಸ್ತುತಿ ಪದ್ಯಗಳು.

**ವಿಶೇಷ :** ಇದರಲ್ಲಿ ೨೫ ಪದ್ಯಗಳಿದ್ದು ಬರಹ ಚೆನ್ನಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ನೀಲಾಂಬಿಕಾ ಲಲಿತಸ್ತೋತ್ರ, ಚೇರಮನ ನಾಂದ್ಯ ಇತ್ಯಾದಿ ೩೧ ಕೃತಿಗಳಿವೆ.

—ಕೆಆರ್‌ಎಸ್

## 558

| | | |
|---|---|---|
| ಕೆ. ೧೧೩೧/೮ | ಮುರಿಗೆ ಸ್ವಾಮಿಗಳ ವಾರ್ಧಕ | ವಾರ್ಧಕಷಟ್ಪದಿ |
| ೭.೨"×೧.೫" | ? | ? |
| ೬೯–೭೨ ಪತ್ರ | ೮ ಪಂಕ್ತಿ | ೩೬ ಅಕ್ಷರ |

**ಆದಿ :** ಮುರಿಗೆಯ ಸ್ವಾಮಿಗಳು ನಿರೂಪಿಸಿದ ವಾರ್ಧಿಕ ॥ ಪದಂಗಳು ॥
ಶ್ರೀರಮಣ ನತಚರಣ ಸಾರಾಗಮಾನಂದ

ಸೀರೇಜ ತಿವಿರಿರುಚಾರುಪದ್ಮಾಂಚಿತ ಶಿ
ರೋರಜತಗಿರಿ ಮಂದರಾ ರಜಿತಚಿತ ಜಗದಂಡಕಾರಣ ಗುಣಾರಂಭಕಾ
ಸ್ವಾರದಜ ವಿಜಯ ನಿಜ ಸೌರಂಭತರ ಸೋಮ
ವರ ವರದಾಘ ಕಾಂತಾರ ಘನ ದೂಮಾಂಕ
ಧೀರ ಕವಿರಾಜ ಮಂಧಾರ ಮಹಿಮಾಧಾರ ವೀರೇಷ್ಪಲಿಂಗ ವಿಭುವೆ ॥ ೧ ॥

ಅಂತ್ಯ : ನಿರಂತಚರ ಮಕುಟ ಶೂನ್ಯಾ ಚಿದಭ್ರ ಶಿವಚಿತ್ರ
ವರ ಪರಾದಿಚ್ಛಾ ಜ್ಞಾನ ಕ್ರಿ ಸ
ದ್ಗುರುಸಾದ ಪಂಚ ಸಾದಾಖ್ಯ ಮಹದೀಶ್ವರಾಷ್ಟಕಸಾರ ದಿವ್ಯ ಮಹೇ
ಶ್ವರ ಪಂಚವಿಂಶದೇಕಾದಶೋತ್ತಮ ರುದ್ರ
ಹರಿದ ಶಕತದ್ಬ್ರಹ್ಮನವಕಸ ಚರಾಚರಾ

ವಿಷಯ : ಸ್ತುತಿ ಪದ್ಯಗಳು.

ವಿಶೇಷ : ೨೨ನೆಯ ಪದ್ಯದ ಉತ್ತರಾರ್ಧದಲ್ಲಿಗೆ ಗ್ರಂಥ ನಿಂತಿದೆ. ೩೦–೬೮, ೭೩–೯೧ನೆಯ ಪತ್ರಗಳಿಲ್ಲ. ಬರಹ ಚೆನ್ನಾಗಿದೆ. ಶಕಟರೇಫವಿದೆ. ಇದೇ ಕಟ್ಟಿನಲ್ಲಿ ಹಾಡುಗಳು, ಪಂಚವಿಂಶತಿ ಸ್ತೋತ್ರಗಳೇ ಮೊದಲಾಗಿ ಒಟ್ಟು ೧೭ ಗ್ರಂಥಗಳಿವೆ

—ಕೆಆರ್‌ಎಸ್

## 559

ಕೆ. ೧೩೭೯/೫ — ಮುರಿಗೆ ಸ್ವಾಮಿಗಳ ವಾರ್ಧಕ — ವಾರ್ಧಕ ಷಟ್ಪದಿ
೧೨.೫"×೧.೭" — ? — ?
೯೩–೯೪ ಪತ್ರ — ೭ ಪಂಕ್ತಿ — ೫೮ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮುರಿಗಾಸ್ವಾಮಿಗಳ ವಾರ್ಧಿಕ ॥
ಶ್ರೀ ಗುರುವಂ ಮುರಿಗೇಂದ್ರಶಾಂತದೇವೇಶನಂ
ನಾಗಭೂಷಣ ಚಾರುಚಂದ್ರ ಗಂಗಾಜೂಟ
ಬೇಗದಿಂ ಮನವೊಲ್ದು ನೀತಿಮಾರ್ಗಕ್ರಮವನುಸುರ್ದನೆಂತೆನೆ ಪೇಳ್ವೆನೂ ॥
ಪದ ॥ ಗುರುಹಿರಿಯರುಂ ಜರಿವನೊಳ್ಗುಪ್ತ ಸುದ್ದಿಯಂ
ಪರರೊಡನೆ ಪೇಳಿ ಬಂಡಾಟಕಿಕ್ಕುವನೊಳಂ
ವಡೆಯುಗೆರಡಂ ಬಗವನೊಳ್ಮಿತ್ರ ಭೇದನೊಳ್ ಗೆಳೆತನವು ಸಲ್ಲ ಕೇಳ್ವೈ
ಉರುಗ ಮೆಕ್ಕೆಯ ಪಣ್ಣನೊಡದು ತಿಂಬುವನಂತೆ
ಕಿರಿಬಿದಿರಕಬ್ಬೆಂದು ಕಡಿದು ಮೆಲ್ಲುವನಂತೆ

ಕೊರತೆಯಿದರಿಂದ ಸುಖವಿಲ್ಲಣ ತೊಲಗೆಂದ ಪರಮ ಷಟ್ಸ್ಥಲದೇಶಿಕಂ
॥ ೧ ॥

ಅಂತ್ಯ : ಯಿಂತು ನೀತಿಯನೆನಗೆ ಮನಹರುಷದಿಂದೊಲಿದು
ಶಾಂಶವೀರೇಶ ಪೇಳಲು ಕೇಳಿ ಕೃಪೆವಡದು
ಮುಂತೆಯಿಂಮಡಿ ಮುರಿಗೆ ಗುರುಸಿದ್ಧದೇಶಿಕಗೆ ಅರುಹೆ ಲಾಲಿಸುತೆ ಬೇಗ
ಸಂತಸದೊಳೀ ವಾಕ್ಯ ತಪ್ಪಿಲ್ಲದೆಲೆ ಕುವರ
ನೀಂತಳುವದುಸುರು ಸರ್ವರಿಗೆಲ್ಲ ಕರುಣವುಂ
ತಾಂ ತನ್ನ ಹಸ್ತಕಮಲವನೆನ್ನ ಮಸ್ತಕದೊಳಿರಿಸೆ ಸುಖಮುಖವೀವನೂ
॥ ೧೦ ॥

ವಿಷಯ : ನೀತಿ ಬೋಧೆ.

ವಿಶೇಷ : ಸಮಗ್ರ. ಅಕ್ಷರಗಳು ಚೆನ್ನಾಗಿಲ್ಲ. ಇದೇ ಕಟ್ಟಿನಲ್ಲಿ ಅನುಭವಮುದ್ರೆ ಮೊದಲಾದ ೬ ಕೃತಿಗಳಿವೆ.

—ಜಿಜಿಎಂ

## 560

| ಕೆ. ಎ. ೪೨೫/೨ | ಮುರುಘನ ರಗಳೆ | ರಗಳೆ |
|---|---|---|
| ೯.೧" × ೧೦.೩" | ಹರಿಹರ | ಸು. ೧೨೦೦ |
| ೩–೧೦ ಪುಟ | ೧೮ ಪಂಕ್ತಿ | ೧೨ ಅಕ್ಷರ |

ಆದಿ : ಶ್ರೀಗುರುಲಿಂಗಾಯ ನಮಃ ॥ ನಮಃ ಶಿವಾಯ ಮುರುಘನ ರಗಳೆ ॥
ಕಂದ ॥ ಶಿವನಪ್ರತಿಮು ಭರ್ಗಂ
ಭವನನುಪಮನಾದಿ ಶಶಿಧರಾ ಕಳಾಧರನ
ಗಜಾಧವನೊಲ್ದಂ ಮೆರೆದು ನಮಃ ಶಿವಾಯ
ಮುರುಘರನೆ ಹಂಪೆಯ ವಿರೂಪಾಕ್ಷಂ ॥
ರಗಳೆ ॥ ಚೋಳದೇಶದೊಳಗೆ ತೀರಿ ಪೋಗಲ್ವದು ನಮಃ ಶಿವಾಯ
ತಳ ಮರೆಯುತ್ತಿರ್ಪುದಲ್ಲಿ ಪುಟ್ಟಿದು ನಮಃ ಶಿವಾಯ ॥

ಅಂತ್ಯ : ಕಂದ ॥
ಭುವನಂ ನೆರೆ ಮೆಚ್ಚಿ ನಮಃ ಶಿವಾಯ
ಮುರುಘರನೆ ಮೆರೆದ ಶಂಭು ವಿ
ನೊಲವಿಂದಲೆ ಭಕ್ತಿಸುಖಮನೆಮಗೀವ
ವಿರಳ ಕರುಣಾಬ್ಧಿ ಹಂಪೆಯ ವಿರೂಪಾಕ್ಷಂ ॥
ನಮಃ ಶಿವಾಯ ಮುರುಘ ರಗಳೆ ಸಮಾಪ್ತಂ ಶ್ರೀ ಶ್ರೀ.

ವಿಷಯ : ಮುರೇಫನ ಚರಿತ್ರೆ.

ವಿಶೇಷ : ಇದೇ ಪುಸ್ತಕದಲ್ಲಿ ರುದ್ರ ಪಶುಪತಿಯ ರಗಳೆ, ಇತ್ಯಾದಿ ಮತ್ತು ಒಲ ಘಾಂಡಮೂರ್ತಿಯ ರಗಳೆ ಈ ಕೃತಿಗಳಿವೆ.

—ವೈಸಿಬಿ

## 561

| ಕ. ೧೨೧೩ | ಮುಲ್ಲಾ ಶಾಸ್ತ್ರ | ಭಾಮಿನೀಷಟ್ಪದಿ |
|---|---|---|
| ೮.೫″ × ೧.೫″ | ಚಂದ್ರಸಾಗರವರ್ಣಿ | ೧೮೯೦ |
| ೧-೫ ಪತ್ರ | ೬ ಪಂಕ್ತಿ | ೫೪ ಅಕ್ಷರ |

ಆದಿ : ಭಾಮಿನೀಷಟ್ಪದಿ ॥
ಶ್ರೀಲಲಿತಲಾವಣ್ಯವಧುನಯು
ನಾಳಿ ಪಂಕಜಪಾರತೇಜಸ
ಪಾಲ ಮರಮುಜ್ಞಾನಕೋಣೆಯೊಳನವಿನೋಪಮದಿ ।
ಕಾಲ ಮೂರರೊಳ ವಿಷಯದ
ಜಾಲವನು ತಿಳಿದರುಹನಶ್ಚುತ
ಪಾಲ(ರಿ)ಸನ ಚಂದ್ರನಾಥಗೆ ಚಿನ್ಮಯಾತ್ಮನೇ ॥ ೧ ॥

ಅಂತ್ಯ : ಸನ್ಮತಿಯ ಕಾಲದೊಳು ಗಣಧರ
ರನ್ನು ಮೂಡದ ಕಾರಣದಿ ಕುಪಿ
ಕೋನ್ನತದಿ ಮಾಡಿದನು ಮುಲ್ಲಾಶಾಸ್ತ್ರವೆಂದೆಂಬಾ
ದನ್ನು ಪಾರಿಶ್ವಾಖ್ಯ ಮುನಿಪನದಿಂನ್ನು ಕಥೆ
ಯನು ಚಂದ್ರಸಾಗರವರ್ಣಿ ವಿರಚಿ ರಚನೆ ಮಾಡಿದನು ಅರುಹಗ
ಲೆಲ್ಲರಿಂಗೆ ॥ ೩೨ ॥
ವೃಭಯಂ ಸಂಧಿ ೧ಕ್ಕಂ ಪದನಂ ಮಂಗಳ ಮಹಾ ಶ್ರೀ.

ವಿಷಯ : ಮುಲ್ಲಾಶಾಸ್ತ್ರ.

ವಿಶೇಷ : ಈ ಗ್ರಂಥ ತ್ರುಟಿತವಾಗಿದೆ. ಅಕ್ಷರ ಚೆನ್ನಾಗಿದೆ. ೧-೩೨ ಶ್ಲೋಕವಿದೆ. ಅಲ್ಲಲ್ಲಿ ಗ್ರಂಥಪಾತವಿದೆ.

—ಎಂಕೆಪಿ

## 562

| ಕ. ೧೭೧೬ | ಮುಲ್ಲಾಶಾಸ್ತ್ರ | ಭಾಮಿನೀಷಟ್ಪದಿ |
|---|---|---|
| ೧೧" × ೧.೫" | ಚಂದ್ರಸಾಗರವರ್ಣಿ | ೧೮೧೦ |
| ೧–೫೪ ಪತ್ರ | ೭ ಪಂಕ್ತಿ | ೪೮ ಅಕ್ಷರ |

**ಆದಿ :** ಶ್ರೀ ವೃಷಬಾದಿ ವರ್ದ್ಧಮಾನ ಜಿನೇಂದ್ರಾಯಂ ನಮಃ ॥ ಪಾಶ್ವಭಟ್ಟಾರಕರು ಮುಲ್ಲಾಶಾಸ್ತ್ರವ ಮಾಡಿದ ಕತೆ ॥
ಭಾಮೀನೀ ಷಟ್ಪದ ।
ಶ್ರೀ ಲಲಿತ ಲಾವಾಂಣ್ಯ ಮದುನಯು
ನಾಳಿ ಪಂಕಜಪಾದ ತ್ರೈಜಗ
ತ್ಪಾಲ ಪರಮಜ್ಞಾನ ಕೋಣೆಯೊಳನುವಿನೋಪಮದಿ ॥
ಕಾಲ ಮೂರರೊಳಲ್ಲಿ ವಿಷೆಯುದ
ಜಾಲವನು ತಿಳಿದರುಹಲಚ್ಯುತ
ಪಾಲಿಸನುದಿನ ಚಂದ್ರನಾಥನೆ ಚಿನ್ಮಯಾತ್ಮಕನೇ ॥ ೧ ॥

**ಅಂತ್ಯ :** ಅರಮಲ್ಲಿ ಮುನಿಸೂವ್ರತರ ಫೋಲಿ ನಮಿನೇಮಿ
ದುರಿತದ ಪಾರ್ಶ್ವ ಮಹಾವೀರಗೆ ನಿರುತು ತೋವಿನ
ಕೆರೆಯು ಚೈತ್ಯಗೇಹದೊಳಿರುವ ಚವ್ವಿಶ ತೀಥಕರಿಯೆ ಜಯ ಮಂಗಳಂ ನಿತ್ಯ
ಶುಭಮಂಗಳಂ ॥ ೩ ॥

ಇತಿ ಶ್ರೀ ಚಂದ್ರಸಾಗರವರ್ನ್ನಿ ವಿರಚಿತಮುಮಪ್ಪಯೇಕಾದಶಾಂಕಿತ ರುದ್ರನ ಕಥಾ ಸಂಪೂರ್ನ್ನ ಮಂಗಳ ಭೂಯಾತಿ ಜಯಮಂಗಳ ಮಹಾಶ್ರೀ. ಸ್ವಸ್ತಿಶ್ರೀ ವಿಜಯಾಭ್ಯುದಯುವಾದ ಶಾಲಿವಾಹನ ಶಕ ವರ್ಷ ೧೭೭೪ನೇ ಪರಿಧಾವಿ ಸಂವತ್ಸರದ ಶ್ರಾವಣ ಬ ೧೨ ಗುರುವಾರದಲ್ಲು। ಯಿಾ ಪುಸ್ತಕದಲ್ಲಿಯಿರುವ ಪಾರ್ಶ್ವಭಟ್ಟಾರಕ ಮಾಡಿದ ಮುಲ್ಲಾಶಾಸ್ತ್ರವು ಯೇಕಾದಶಾಂಕಿತ ರುದ್ರನ ಕಥೆಯು ಸಹಾ ಹರವೆಯಲ್ಲಿ ಪರರಾಜೈಯನು ತನಗೆ ಬೇಕಾಗಿ ಬರೆದು ಪೂರ್ವಪ್ರತಿ ಸಮವಾಗಿ ಬರೆದದಕ್ಕೆ ಮಂಗಳ ಮಹಾ ಶ್ರೀ.

**ವಿಷಯ :** ಪಾರ್ಶ್ವಭಟ್ಟಾರಕರು ಮುಲ್ಲಾಶಾಸ್ತ್ರವ ಮಾಡಿದ ಕಥೆ.

**ವಿಶೇಷ :** ಸಮಗ್ರ ಪ್ರತಿ.

—ಪ್ಪೆ.ಬಿ

## 563

| ಕೆ. ಎ. ೫೦೦/೫ | ಮೂಡಬಿದರೆ ಶಾಸನಗಳು | ಶ್ಲೋಕ, ಗದ್ಯ |
|---|---|---|
| ೧೨.೫"×೮.೫" | ? | ? |
| ೪೦ ಪತ್ರ | ೩೦ ಪಂಕ್ತಿ | ೨೦ ಅಕ್ಷರ |

**ಆದಿ :** ಶ್ರೀಮತ್ಪರಮ ಗಂಭೀರ ಶಾದ್ವಾದಾಮೋಘ ಲಾಂಛನಂ
ಜೀಯಾ ತ್ರೈಲೋಕ್ಯನಾಥಸ್ಯ ಶಾಸನಂ ಜಿನ ಶಾಸನಂ ॥

× × × ×

ವಚನಾ ॥ ಘಂಣ್ಯಾಡೆಯರ। ಕುಮಾರ ಶ್ರೀ ತಿಂಮಂಣ ಒಡೆಯ ಶ್ರೀ। ನರ್ಯಂಣ ವಡೆಯ ಶ್ರೀ × × × ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಖವರುಷ ೧೪೬೮ ವಿಶ್ವಾವಸು ಸಂವತ್ಸರದ ಕಾರ್ತೀಕ ಶು ೧ ದಾರಾಭ್ಯಾ ಬಿದಿರೆಯ ಶ್ರೀ ತ್ರಿಭುವನ ಚೂಡಾಮಣಿಯಂಬಿಬಿಸ್ತೆಯ ೩ ಮುರ್ರು ನೆಲಿಯಲ್ಲಿ ನಡೆಯುವ ಧರ್ಮಕ್ಕೆ ಕೊಟ್ಟ ಶಾಸನದ ಕ್ರಮವೆಂತೆಂದಡೆ।

**ಅಂತ್ಯ :** ಭಸ್ತಿ ದೇವಸ್ಥಾನದಲ್ಲಿ ಯಿರುವಶಾಸನಾ ॥ × × × × ಶ್ರೀ ಮಾಲಾ ಸಂಪದಸಮುದಾ ಮಂಗಳಂ ಮರಶಿಷ್ಯ ಸುತ್ರಾನಂಗಳಂಯಿಶಾ ಧರ್ಮವನ ಚಂದಾರ್ಕ ರಂಜರಲ್ಲಿ ಒಲ್ಲವರು

**ವಿಷಯ :** ಕೆಲವು ದಾನಶಾಸನಗಳು.

**ವಿಶೇಷ :** ಶಿಥಿಲ ಪ್ರತಿ. ಮೋಡಿ ಅಕ್ಷರ. ಪತ್ರಗಳು ಅಸ್ತವ್ಯಸ್ತವಾಗಿವೆ. ಇದರೊಂದಿಗೆ ಇತರ ಅನೇಕ ಚೂರು ಪತ್ರಗಳಿವೆ.

—ಎಂಪಿಎಂ

## 564

| ಕೆ. ೬೬೮/೬ | ಮೂತ್ರ ಪರೀಕ್ಷೆ | ಗದ್ಯ |
|---|---|---|
| ೭.೮" × ೧.೭" | ? | ? |
| ೬೦ ನೆಯ ಪತ್ರ | ೧೨ ಪಂಕ್ತಿ | ೩೫ ಅಕ್ಷರ |

**ಆದಿ :** ತಾನು ಮೂತ್ರಗೈವಾಗ ಶುಭ್ರಪಾದಲ್ಲೀವೊಂದೆ ದಾರಿಯಾಗಿ ಬಿದ್ದರೆ ಆ ದಿನ ಆಚಾರವಂತ್ರನಾಗಿಹನು। ಮೂತ್ರಂಗಳೆರಡು ಕವಲಾಗಿ ಬೀಳಲು ಆ ದಿವಸ ಆವ ಕಡಿನು ಹೋಗಲಾಗದು। ಅಲ್ಲಿ ಕಲಹವ ಹೇಳುವದು। ನೊರೆಗಟ್ಟಿ ಬಿದ್ದರೆ ವರುಷರುತುಗಳಲ್ಲಿ ಮಳೆ ಬಾಹುದು। ಅಲ್ಲದಿದ್ದರೆ ತಂಣೀರು ಬಾಹುದು.

**ಅಂತ್ಯ :** ಸಂಣ ದಾರೆಯಾಗಿ ಬೀಳುತ್ತ ಕೇಳಾಕೆ ಮಂದು ಮಂದು ಹನಿ ಬೀಳುತ್ತಿರಲು ಸುಭೋಜನಮಕ್ಕುಂ। ಯರಡು ದಾರೆಯಾಗಿ ಮಂದರ ಮೇಲೆ ಮಂದು

ದಾರೆಯಹಾಗಿ ಬೀಳಲು ಧನಲಾಭ। ಮೂತ್ರ ಅರ್ಧ ಕೆಳಾಕೆ ಬೀಳಂತ। ಅರ್ಧ ಮೇಲಕ್ಕೆ ಸಿ೦ಯಲು। ಆ ದಿನ ಪ್ರಾಣ೩ರಿಯಂತರ ಬಾಹುದು। ಮೊದಲ ಧಾರೆ ಧೊಡ್ಡದಾಗಿ ಕಡಿಯಲ್ಲಿ ಸಂಣ ಧಾರೆಯಾಗಿ ಬೀಳಲು ಆ ದಿನ ಸ್ತ್ರೀಸಂಭೋಗವಹುದು ॥ ಶ್ರೀ ಶ್ರೀ.

**ವಿಷಯ :** ಮೂತ್ರವಿಸರ್ಜನೆಯಿಂದ ಭವಿಷ್ಯ.

**ವಿಶೇಷ :** ಕೇವಲ ಎಂಟು ಸಾಲುಗಳು ಮಾತ್ರ. ಇದರೊಡನೆ ರತ್ನಪರೀಕ್ಷೆ ಜ್ಯೋತಿಷ್ಯ ಶಾಸ್ತ್ರ, ಅಕ್ಷರಮಾಲಿಕೆ, ಶಕುನ, ನರಪಿಂಗಳಿ, ರಟ್ಟಶಾಸ್ತ್ರ, ಸ್ವರಚಿಂತಾಮಣಿ, ಸಹದೇವೀ ನಿಮಿತ್ತ, ಪಂಚಾಕ್ಷರೀಸ್ತವ ಎಂಬ ಕೃತಿಗಳಿವೆ.

—ಎಸ್ಎನ್ಕೆ

## 565

| ಕೆ. ಬಿ. ೬೬೧/೨ | ಮೂರುವರೆ ವಜ್ರದ ಕಥೆ | ಯಕ್ಷಗಾನ |
|---|---|---|
| ೬.೧"×೩.೮" | ಶೇಷಗಿರಿದಾಸ (ಧಾರಾಪುರದ ತಿಮ್ಮಪ್ಪದಾಸ) | ೧೯ನೇ ಶತಮಾನ |
| ೩೫–೯೧ ಪುಟ | ೧೪ ಪಂಕ್ತಿ | ೧೨ ಅಕ್ಷರ |

**ಆದಿ :** ಮೂರುವರೆ ವಜ್ರದ ಕಥೆ.
ಪದ್ಯ ॥ ರತುನ ಖಚಿತದ ಸ್ವರ್ನಸ್ತಂಭಗ
ಳತುಳ ಪಚ್ಚದ ಗಿಳಿಯುಗಳು ಮರ
ಕತದ ಮುತ್ತಿನ ಗೊಂಚಲಂಗಳ ಪಿಡಿದು ಲಪನದಲ್ಲಿ
ಅತಿಜವದಿ ವೃಕ್ಷಕ್ಕೆ ಹಾರುವ
ಗತಿಯ ತೋರುತಲಿಹುದು ನೋಳ್ಪರಿ
ಗತಿ ಮನೋಹರವಾಗಿಯಿಪ್ಪುವ ಸಭೆಯ ಮಧ್ಯದಲಿ ॥

× × ×

ವ್ಯಾಳಿ ಪೋಗದ್ಯೆ ನಾರದ ಋಷಿವರ
ತಾಳಿ ಸ್ತ್ರೀ ಪರದ ಕಥಿಯನಗೆ
ಪೇಳಿ ಸಂತೋಷವ ಬಡಿಸ್ಯೆ ಪರಮ ಕೃ
ಪಾಳುವೆ ಪ್ರಾರ್ಥಿಪೆ ನಾ ನಿನಗೆ ॥ ೨ ॥

**ಅಂತ್ಯ :** ವೀರವರ ಕೃತವರ್ಮ ಶ್ರೀ ಕೃಷ್ಣಗೆ
ಸಾರುತಲೆ ಸಾಷ್ಟಾಂಗ ನಮಿಸುತ
ನಾರಿಯುಳ ಮಾಡಿದೆಯೊ ಸ್ವಾಮಿಯೇ ಭಕ್ತ ದಯಸಾಶಿಂಧೊ ॥
ಮೂರುವರೆಪರಿ ವಜ್ರವು ಸೋಕಲು
ನಾರಿಯಾಗುವಿ ಯಂದು ನಾರದರು

ಚಾರು ಅಭಯುವ ಪಾಲಿಶಿದ ಪರಿ ಪೇಳಬೇಕೆನಲೂ

× × ×

ವಾರಿಧಿ ನಿಲಯನನಂಘ್ರಿ ಭಜಿಸುತಾ
ಸಾರಿಬರುತಲಿ ಪುರವೈಕುಂಠಕೆ ಸಮವಿಲ್ಲೆನುತಲಿ ॥
ಪುರ ಶೃಂಗಾರವ ನೋಡುತ ಹರಿಮಂದಿರವ ಪೊಕ್ಕ
ನಾರದ ಜಯುವೆನ್ನುತಲಿ ॥ ೧ ॥
ಮೂರುವರೆ ವಜ್ರ ಕಥ ಸಂಪೂರ್ಣಂ ಶ್ರೀಕೃಷ್ಣಾರ್ಪಣಮಸ್ತು ॥

ವಿಷಯ : ಕೃಷ್ಣನು ಕೇಳಿದ ಮೇರೆಗೆ ನಾರದನು ಸ್ತ್ರೀಕಥೆಯುನ್ನು ಹೇಳಿದನು.

ವಿಶೇಷ : ಸಮಗ್ರವಾಗಿದೆ. ಬರಹವು ಸ್ಫುಟವಾಗಿದ್ದು ಪತ್ರದ ಎರಡು ಕಡೆಗಳಲ್ಲಿಯೂ ಬರೆದಿದೆ. ಇದೇ ಪುಸ್ತಕದಲ್ಲಿ ಆಂಜನೇಯವಿಲಾಸವೆಂಬ ಕೃತಿಯೂ ಇದೆ. ಪ್ರಸ್ತುತ ಕೃತಿಯುನ್ನು ಕವಿಚರಿತೆಕಾರರು ಧಾರಾಪುರದ ತಿಮ್ಮಪ್ಪದಾಸನ ದೆಂದು ತಿಳಿಸಿರುತ್ತಾರೆ.

—ಕೆಆರ್‌ಎಸ್

## 566

| ಕೆ. ೧೪೦೨/೫ | ಮೂರುಸಾವಿರ ವಚನದ ಗ್ರಂಥದ ವಾಕ್ಯ | ಶ್ಲೋಕ, ಟೀಕು |
|---|---|---|
| ೧೬" × ೨" | ? | ? |
| ೧ ಪತ್ರ | ೧೪ ಪಂಕ್ತಿ | ೭೬ ಅಕ್ಷರ |

ಆದಿ : ಮೂರು ಸಾವಿರ ವಚನದ ಗ್ರಂಥದ ವೇಕ್ಯಾಸ್ಸಜೀವಿನಾಮಂ ನಮಾಧಾರ ಮಂನ ದುತ್ಪತ್ತಿ ಹೇತುಕಂ। ಅಂನಮಭ್ಯಂತರ ಪ್ರಾಣಂ ಸರ್ವಮಂ ನಮಯಂ ಜಗತ್ ॥ ಟೀಕು ॥ ಅಂನಂ। ಅಂನಉು। ಜೀವಿನಾಂ ಪ್ರಾಣಿ ಗಳಿಗೆ। ಅಧಾರಂ—ಅಧಾರವಾಗಿರ್ದಂಥಾದು। ಅಂನಂ। ಅಂನಉು ಉತ್ಪತ್ತಿ ಹೇತುಕಂ। ಉತ್ಪತ್ತಿ ಜನನಕ್ಕೆ ಹೇತುಕಂ। ಕಾರಣವಾಗಿರ್ದಂಥಾದು.

ಅಂತ್ಯ : ಗುರೋಃ। ಗುರುವಿನ। ಹಸ್ತಾಬ್ಜಮಥನಾತ್। ಹಸ್ತಾಬ್ಜ। ಕರಕಮಲದ ಮಥನಾತ್। ಸಂಪರ್ಕದ ದೆಸೆಯಿಂದೆ। ಮೇವಂ ಭೇದಕಳಾಯಿಾ ರೀತಿ ಯಲ್ಲಿ ಭೇದಉಳ್ಳ ಕಳೆಯು ತಸ್ಯ ಆಸದ್ಗುರುವಿನ ಭಾವಕ ರೋದಿತಾ। ಭಾವ। ಭಾವದಿಂದಉು। ಕರ। ಹಸ್ತದಿಂದಉು। ಉದಿತಾ। ಹುಟ್ಟಿದ್ದಾಗಿ ಗ್ರಾಹ್ಯಾತ್। ತಿಳಿಯುಲ್ತಕ್ಕದು ॥ ೧೩ ॥

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಇದೇ ಕಟ್ಟಿನಲ್ಲಿ ಸಂಪಾದನೆಯ ಸಾರಾಮೃತ ಮೊದಲಾದ ೫ ಕೃತಿಗಳಿವೆ.

—ಜಿಜಿಎಂ

567

ಕೆ. ೧೭೫೧/೯ ಮೂರೇಳುದೀಕ್ಷೆ ಪದ ವಾರ್ಧಕ ಷಟ್ಪದಿ
೧೩.೮"×೨.೨" ? ?
೩ ಪತ್ರ ೧೧ ಪಂಕ್ತಿ ೭೮ ಅಕ್ಷರ

ಆದಿ: ಶ್ರೀ ಗುರುಬಸವಲಿಂಗಾಯ ನಮಃ ॥ ಮೂರೇಳುಯಿಪ್ಪತೊಂದು ದೀಕ್ಷೆ ವಾರ್ಧಿಕ ॥ ಶ್ರೀರಸ್ತು ॥ ಪಲ್ಲ
ಗುರು ಶಾಂತ ಮೂರೇಳು ದೀಕ್ಷೆಯನಿತ್ತ
ತೆರನ ಪೇಳ್ದಪೆನೆನ್ನ ಮತಿಗೆ ಗೋಚರಿಸಿದೊಲು
ಶರಣಸಂತತಿಗಳೊಲಿದಾಲಿಪುದು ನಲವಿಂದಲಾದರಿಪುದೂ ॥

ಪದ ॥ ಮಲತ್ರಯವ ಕಳದಂನ್ಯದೈವಸ್ಥಾವರಹರಿಕ್ಕೆ
ಯಂಳಿದು ಭವಿಸಂಗಯುಪವಾಸಲ್ಪ ಕ್ರಿಯೆಗಳ
ಕಳದು ದಶದ್ರೋಹಾದಿಗಳ ಪಲಾಯನವೆನಿಸಿ ವೇದವ್ಯಸನ ವರ್ಗಾದಿಯ
ಹಳಿದುಡಂಬಕವಳಿದು ತರ್ಕಕರ್ಕಶಪಂಕ
ದೊಳೆದು ಕಾರುಣ್ಯದಿಂ ಸದ್ಭಕ್ತಿ ಕ್ಷಮೆ ಶಾಂತಿ
ಗಳ ಹೃದೆಯ ನೈಷ್ಠಿಯವಷ್ಠರಗೊಳಿಸಲದು ತಾನೆ ತಿಳಿಯಲಾದಿ
ದೀಕ್ಷೆಯೂ ॥ ೧ ॥

ಅಂತ್ಯ: ಪರಮಸತ್ಕ್ರಿಯು ಜ್ಞಾನ ನಿಜವೆಂದು ನಿಶ್ಚೈಸಿ
ಗುರು ಕೃಪೆಯು ಪಡದು ವರಲಿಂಗ ಕರದೊಳಗಿರಲು
ನಿರುತ ಸಂಪದವೆನಿಸಿ ತೀರ್ಥ ಪ್ರಸಾದತ್ರಯ ದೊರಕಲದು ಸಂನ್ಮುಕ್ತಿಯೂ
ಶರಣಾಳಿಗಳ ಕೂಡಿ ಪ್ರಮಥಾಳಿಗಳ ಹಾಡಿ
ಮೆರವ ಭಕ್ತಿಯು ಗ್ರುಹವೆ ಕೈಲಾಸದಿರವೆನಿಸಿ
ಯಿರಲು ಸದೋನ್ಮುಕ್ತಿ ಕರಣೇಕಕಲ್ಲುಮುನಿಗೇಕ ವಿಂಶತಿ ದೀಕ್ಷೆಯೂ ॥೨೧॥

ವಿಷಯ: ವೀರಶೈವ ಧರ್ಮದಂತೆ ೨೧ ದೀಕ್ಷೆಗಳ ವಿವರ.

ವಿಶೇಷ: ಸಮಗ್ರ. ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಕರಣಹಸಿಗೆ ಮೊದಲಾದ ಇತರ ೮ ಕೃತಿಗಳಿವೆ. ಅಲ್ಲದೆ ಅಕ್ಕಗಳ ಸೃಷ್ಟಿಯ ವಚನ ಮತ್ತು ಪ್ರಭು ದೇವರ ಸೃಷ್ಟಿಯ ವಚನಗಳೆಂಬ ಒಂದು ಗರಿಯಿದೆ. ಅಸಮಗ್ರ.

—ಜಿಜಿಎಂ

568

ಕೆ. ೧೩೦೧ ಮೂಲಕ ರಾಮಾಯಣ ಭಾಮಿನೀ ಷಟ್ಪದಿ

೧೯.೫"×೨" ? ?

೧–೨೧ ಪತ್ರ ೧೦ ಪಂಕ್ತಿ ೬೨ ಅಕ್ಷರ

ಆದಿ : ಸ್ವಸ್ತಿ ಶ್ರೀ ಗಣಾಧಿಪತಯೆ ನಮಃ ॥ ಮೂಲಕಾಸುರನ ಕಾಳಗ ಬರೆಯು ವದಕ್ಕೆ ಶುಭಮಸ್ತು.
ಕರಿವದನ ಕಾಮಿತ ಫಲಪ್ರದೆ
ಕರುಣೆಗಳ ದಾತಾರ ಕರದ್ರುತ
ವರಗದಾಂಕುಶ ಪಾಶ ಮಕುಟದಿ ಹೊಳವ ಶಶಿ ಕಳೆಯು ॥
ಮುರಿದ ಸೊಂಡಿಲಯೇಕದಂತದಿ
ಮೆರವ ಮುಕ್ಕಂಣನ ಕುಮಾರನು
ಕರುಣಿಸುಗೆ ನಿರ್ವಿಘ್ನತೆಯ ಲಂಬೋದರದ ಗಣನಾಥಾ ॥ ೧ ॥

× × ×

ಪಲ್ಲವಿ ॥ ಮೂಲಕಾಸುರ ಬಂದು ಲಂಕೆಯ
ಮೇಲು ಮುತ್ತಿಗೆಯಿಕ್ಕಿ ಘೋಳಾ
ಘೋಳಿಯಲಿ ಹೊಯಿದಾಡೆ ಮುರಿದೋಡಿದ ವಿಭೀಷಣನು ॥

ಅಂತ್ಯ : ಲಂಕೆಗಭಯವನಿತ್ತು ತಪದಲಿ
ಶಂಕರಗೆ ಮೆಚ್ಚಿಸಿಯಘ ಉಘದ
ಶಂಕೆಯನು ಪರಿಹರಿಸಿ ಪುರಕೈತಂದು ಧಾರುಣಿಯ
ಬಿಂಕವಡಿಸಿದನೆಂಬ ಗಾದೆಯ
ಅಂಕವಡದೈದೆಂಟೂ ಮುರೆಗೆ
ಶಂಕರನು ವರವೀವನನುದಿನ ಕೇಳಿದ ಸುಜನರಿಗೆ ॥
ಅಂತೂ ಸಂಧಿ ೬ಕಂ ಪದ ೩೧೭ಕ್ಕಂ ಮಂಗಳ ಮಹಾಶ್ರೀ ಶ್ರೀ.
ಮೂಲಕಾಸುರನ ಕಾಳಗ ಸಂಪೂರ್ನ × × ವಾಲ್ಮೀಕಿ ರಾಮಾಯಣಕೆ ಸಂಧಿ ೪೩ ರುಂಡಭೈರವನ ಕಾಳಗಕ್ಕೆ ಸಂಧಿ ೪ ಮೂಲಕಾಸುರನ ಕಥೆ ಸಂಧಿ ೬ ಅಂತೂ ಉಭಯ ಸಂಧಿ ೫೩ಕ್ಕಂ ಮಂಗಳ ಮಹಾಶ್ರೀ ಶ್ರೀ.

ವಿಷಯ : ಕುಶನಿಂದ ಹತನಾದ ಮೂಲಕಾಸುರನ ಕಥೆ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ.

—ಜಜಎಂ

## 569

ಕೆ. ೧೭೨೫/೨ | ಮೂಲಿಕಾಕಲ್ಪ ಇತ್ಯಾದಿ | ಶ್ಲೋಕ, ಟೀಕು
೧೦.೮'' × ೧.೪'' | ? | ?
೩೩–೭೨ ಪತ್ರ | ೯ ಪಂಕ್ತಿ | ೬೦ ಅಕ್ಷರ

**ಆದಿ :** ಯಿಂನ್ನು ಮೂಲಿಕಾಕಲ್ಪಮಂ ಬರೆವೆನೆಂತೆಂದೊಡೆ ॥
ಶ್ವೇತಾರ್ಕದ ಮೂಲವಂ ಸಿದ್ಧಿದಿನಂ ವಿಧಾನೋಕ್ತದಿಂ ತಂದು ಸಮಸ್ತ ಕರ್ಮಂಗಳನು ಸರ್ವ್ವ ಕಾರ್ಯ್ಯಂಗಳನು ಸಾಧಿಸೂದು। ಶ್ವೇತಾರ್ಕ್ಕದ ವಿನಾಯಕನಂ ಮಾಡಿ ಅಷ್ಟವಿಧಾರ್ಚ್ಚನೆಯಿಂದರ್ಚ್ಚಿಸಿ ತಂನ ವಶದಲ್ಲಿ ಯಿದ್ದರೆ ಯುದ್ಧದಲ್ಲಿ ಕೆಲುವರು ಜೂಜು ಗೆಲುವರು ಚಾವಡಿಗೆ ಮಹಾ ಜನವಶ್ಯ । ಬಯುಸಿದ್ಧ ಕಾರ್ಯ್ಯಸಿದ್ಧಿ ॥

**ಅಂತ್ಯ :** ಬಿಳಿ ಕೊಂಮೆ ಬೇರು ಕೊಳವಳಿಕೆ ಚಿತ್ರಮೂಲ ಮೂಲಂಗಿ ಸಮೂಲ ಯಿವು ಬ ೧ಕ್ಕೆ ೫ ಸೇರು ಲಾ ೪ಗಿರಿಂ ಕಷಾಯಕ್ಕೆ ಯಂಣೆ ಸೇ ೮ ಕಲ್ಕ। ಸಬ್ಬಸಿಗೆ। ರಾಸ್ನೆ। ತುಪ್ಪ ದೇವದಾರು ಶುಂಠಿ ಬ ೧ ಪಾ ೧ ಯಿೊ ತೈಲ ಶೋಭೆಗೆ ಯಿಕ್ಕೂದು। ಮಾ....

**ವಿಷಯ :** ವೈದ್ಯ.

**ವಿಶೇಷ :** ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ವೈದ್ಯತಂತ್ರ (ಸಂ), ಕಾಮಚಂಡಾಲಿನಿ ಕಲ್ಪ, ವೈದ್ಯಯಂತ್ರ ಗ್ರಂಥಗಳು ಇವೆ.

—ಕೆಆರ್‌ಎಸ್

## 570

ಕೆ. ೧೭೨೪ | ಮೂವತ್ತೆರಡು ಚಿತ್ರಗಳು | ?
೭.೯" × ೧.೩" | ? | ?
೧–೩೨ ಪತ್ರ | ? | ?

**ವಿಶೇಷ :** ಇದು ಶಿಥಿಲ ಪ್ರತಿ. ವಿವಿಧ ರೀತಿಯ ಚಿತ್ರಗಳಿವೆ.

—ಕೆಆರ್‌ಎಸ್

## 571

ಕೆ. ೧೪೫೨ | ವೈದುನ ರಾಮಯ್ಯನ ಚರಿತೆ | ಸಾಂಗತ್ಯ
೧೫.೩" × ೧.೧" | ? | ?
೧–೫೮ ಪತ್ರ | ೫ ಪಂಕ್ತಿ | ೭೦ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ ॥ × × × ವೈದನ ರಾಮಂಣನ ಕಥೆ। ಅಕಭಾವನ ಚರಿತ್ರ। ಶೋಭನಮಸ್ತು। ಸೊಬಗಿನ ಸೋನೆ ವರ್ನದ ಸಂಗ್ಗೀತ್ಯ ॥

ಗುರುವೆ ಶರಣೈಯ್ಯಾ ಗುರುವೆ ಗಂಭೀರ ಶರಣೈಯ್ಯಾ
ಗುರುವೆ ಗಂಭೀರ ಶರಣೈಯ್ಯ ಹಂಪೆಯ ವಿರೂಪಾಕ್ಷಂಗೆ
ಶರಣೈಯ್ಯಾ ॥ ೧ ॥

**ಅಂತ್ಯ :** ಸತ್ಯಾರೂ ಶರಣಾರೂ ಭಕ್ತರೆಲ್ಲಾದರೂ ಕೇಳಿ
ಭಕ್ತಿಯುಳ್ಳದನಾ ಕಿವಿಗೊಟ್ಟು
ಭಕ್ತಿಯುಳ್ಳವನಾ ಕಿವಿಗೊಟ್ಟು ಕೇಳುವಾ ಶಿವ
ಭಕ್ತರಾ ಪಾದರೇ ಶರಣಾರ್ಥೀ ॥ ೨೧೫ ॥
ಅಂತು ಸಂಧಿ ೩ಕ್ಕಂ ಪದನೂ ೭೫ಕ್ಕಂ ಮಂಗಳ ಮಹಾ ಶ್ರೀ.

**ವಿಷಯ :** ಮೈದುನ ರಾಮಯ್ಯನ ಕಥೆ.

**ವಿಶೇಷ :** ಅಂತ್ಯಂತ ಶಿಥಿಲಪ್ರತಿ.

—ವೈಸಿಬಿ

## 572

ಕೆ. ಬಿ. ೫೧೨ — **ಮೈದುನ ರಾಮಯ್ಯನ ಚರಿತೆ** — ಸಾಂಗತ್ಯ
೮"x೬.೫" — ? — ?
೧–೭೪ ಪತ್ರ — ೧೪ ಪಂಕ್ತಿ — ೧೨ ಅಕ್ಷರ

**ಆದಿ :** ಮೈದುನ ರಾಮಯ್ಯನ ಚರಿತ್ರವ ಬರವುದಕ್ಕೆ ರಾಗ ತಂಮಿಚ್ಚೆ ॥ ಪದನೂ ॥
ಗುರುವೆ ಶರಣೈಯ್ಯ ಸದ್ಗುರಾಯ ಶರಣೈಯ್ಯ ।
ಗುರುವರಗಂಭಿ ಶರಣೈಯ ॥
ಗುರುವರಗಂಭಿ ಶರಣೈಯ್ಯ ಹಂಪೆಯ
ವಿರೂಪಾಕ್ಷಲಿಂಗ ಶರಣೈಯ್ಯ ॥ ೧ ॥

**ಅಂತ್ಯ :** ಅಲ್ಲಿಗಲ್ಲಿಗೆ......
ಮಲ್ಲಿಕಾರ್ಜುನನ ಕೃಪೆಯಿಂದಾ
ಮಲ್ಲಿಕಾರ್ಜುನನ ಕೃಪೆಯಿಂದ......
... ........ಮುಗಿಯೆ ॥ ೧೫೮ ॥
ಚಂದದಿಯಿಂ ಕ್ರುತಿಯವೊಂದಿಸಿ ಕೇಳ್ದರೆ
ಹೊಂದಿದ ಪಾಪ ಪರಿಹರವೂ
ಹೊಂದಿದ ಪಾಪ ಪರಿಹರ ಕೇಳಿನ್ನು
ಚಂದ್ರಶೇಖರನ ಕೃಪೆ ॥ ೧೫೯ ॥
ಅಂತೂ ಸಂಧಿ ಮೂರಕ್ಕೆ ಪದನೂ ೫೦೮ಕ್ಕೆ ಶ್ರೀ.

ಶ್ರೀ ಗುರುಸಿದ್ಧಲಿಂಗಾಯ ನಮಃ ವಿಳಂಬಿ ಸಂ।ರದ ಚೈಯಿತ್ರ ಬಹುಳ ೫ಯು ಸೋಮವಾರ ಪ್ರಾತಃಕಾಲದ ಮೂರು ಘಳಿಗ್ಯೆ ಮೈದುನ ರಾಮಯ್ಯನ ಸಾಂಗತ್ಯ ಸಂಪೂರ್ಣ ಮಂಗಳ ಮಹಾ ಶ್ರೀ.

**ವಿಷಯ :** ರಾಮಯ್ಯ ಶಿವನಿಗೆ ಮೈದುನನಾಗಿ ಶಿವಗೌರಿಯರನ್ನು ಕರೆತಂದ ರಾಮಯ್ಯನ ಕಥೆ.

**ವಿಶೇಷ :** ಅಕ್ಷರ ಸ್ಫುಟ ಹಾಗೂ ಸುಂದರ. ಮೂರನೇ ಸಂಧಿಯಲ್ಲಿ ಹಲವೆಡೆ ಗ್ರಂಥಲೋಪವಾಗಿದೆ ಕೊನೆಯಲ್ಲಿ " ಯಿಂದ ಬರದಾತ ಕಗ್ಗಲ್ಲ ಮಠದ ..." ಎಂದಿದ್ದು ಮುಂದೆ ತ್ರುಟಿತವಾಗಿದೆ.

—ಎಂಎಸ್ಎಲ್

## 573

| ಕೆ. ೧೪೦೬/೪ | ಮೈದುನ ರಾಮಯ್ಯನ ರಗಳೆ | ರಗಳೆ, ಕಂದ |
|---|---|---|
| ೮.೫"×೨" | ಶಂಕರದೇವ | ಸು. ೧೬೨೦ |
| ೧೭–೨೫ ಪತ್ರ | ೯ ಪಂಕ್ತಿ | ೩೩ ಅಕ್ಷರ |

**ಆದಿ :** ...... ಪಾಡುತಂ ॥ ೧೦ ॥
ಇತಿ ಕೆಲವು ದಿವಸದಿಂ ಮೇಲೆ ಶಿವಲೋಕಕ್ಕೆ ॥
ಭರದಿಂದ ಸೋಮನಾಥ ಸಲವು ಮುಂದಕ್ಕೆ ॥ ೧೧ ॥
ಶರಣರ ಸಮತ್ವದಿಂದಾವನ ಶರೀರಮಂ ।
ಧರಣಿಯೊಳಗಿಂಬಿಟ್ಟು ಗೃಹದ ಭರಭಾರಮಂ ॥ ೧೨ ॥

**ಅಂತ್ಯ :** ಕಂದ ॥ ವಲಮಿಂ ಮೈದುನರಾಯನ
ದಲಪದಮಂ ಭಕ್ತಿ ನಿಷ್ಠೆಯಂ ನಿಜದಿಂ ನಿ
ರ್ಮಲ ಯುಕ್ತಿಯು ಕೊಡು ನಮಗಂ
ಸಲೆ ಭವಭವದೊಳ್ಪ್ರಸಂನ ಶಂಕರಲಿಂಗಾ ॥ ೧ ॥
॥ ಮೈದುನ ರಾಮನ ರಗಳೆ ॥ ಸಮಾಪ್ತ ಮಂಗಳ ಮಹಾ ಶ್ರೀ ॥

**ವಿಷಯ :** ಮೈದುನ ರಾಮಯ್ಯನ ಕಥೆ

**ವಿಶೇಷ :** ಗ್ರಂಥದ ಆದಿ ಇಲ್ಲ, ಮೋಡಿ ಅಕ್ಷರ. ಈ ಕೃತಿಯೊಂದಿಗೆ 'ಗುರುರಗಳೆ' ಮುಂತಾದ ಇತರ ೫ ಕೃತಿಗಳಿವೆ.

—ಎಂಪಿಎಂ

## 574

ಕೆ. ಎ. ೩೪೬/೧ ಮೈದುನ ರಾಮಯ್ಯನ ಸುವ್ವಿ ತ್ರಿಪದಿ

೧೩" × ೮" ? ?

೧–೫೫ ಪತ್ರ ೧೮ ಪಂಕ್ತಿ ೧೬ ಅಕ್ಷರ

**ಆದಿ :** ಶ್ರೀ ಗಣಾಧಿಪತಯೆ ನಮಃ । ಮಡವಾಳ ಶಿವಾಲಂಕಾರೇಶ್ವರ ಸ್ವಾಮಿಯ ಪಾದವೆ ಗತಿ । ಮೈದುನ ರಾಮೈಯ್ಯನ ಸುವ್ವಿ ಬರಯುವದಕ್ಕೆ ನಿವಿಘ್ನ ಮಸ್ತು ।

ಶ್ರೀ ಗುರು ಶರಣೈಯ್ಯ ಗುರುರಾಯ ಶರಣೈಯ್ಯ
ಗುರುವೆ ಗಂಭೀರ ಶರಣೈಯ್ಯ ಸುವ್ವಿ । ಹಂಪೆಯ
ವಿರುಪಾಕ್ಷ ಲಿಂಗ ಶರಣೈಯ್ಯ ಸುವ್ವಿ ॥ ೧ ॥
ಶಂಭುಕುಮಾರನೆ ಗಂಭೀರ ಗುರುವನೆ
ಕುಂಭಿನಿಯ ಮುಖದ ಸೌರಂಭಾ ಸುವ್ವಿ ಗಣನಾಥ
ತುಂಬೆನ ಮನಕೆ ಮತಿಗಳಾ ಸುವ್ವಿ ॥ ೨ ॥

**ಅಂತ್ಯ :** ಪಾಪವ ಕಳೆವದು ದೋಷವ ಮುರಿವುದು
ಆಪತ್ತ ನುಂಗಿ ನೊಣಉದೂ ಸುವ್ವಿ । ಯಿಂದು ನಂಮ
ಕಪಾಲಿ ಶಿವನ ಕರುಣದಿ ಸುವ್ವಿ ॥ ೨೨೭ ॥
ಸತ್ಯಶರಣರು ಭಕ್ತರೆಲ್ಲರು ಕೇಳಿ
ಭಕ್ತಿವುಳ್ಳವರು ಕಿವಿಗೊಟ್ಟು ಸುವ್ವಿ ॥ ೨೨೮ ॥
ಅಂತು ಸಂಧಿ ಮೂರಕ್ಕಂ ಪದನು ೭೦೦ಕ್ಕಂ ಮಂಗಳ ಮಹಾ ಶ್ರೀ. ಮೈದುನ ರಾಮೈಯ್ಯನ ಸುವ್ವಿ ಸಂಪೂರ್ಣಂ.

**ವಿಷಯ :** ಭೀಮಾವತಿ ಎಂಬ ಪಟ್ಟಣದಲ್ಲಿದ್ದ ಶಿವಭಕ್ತ ಸೋಮಯ್ಯನಿಗೂ ಪತ್ನಿ ಮಹಾದೇವಿಗೂ ಶಿವನ ವರದಿಂದ ಜನಿಸಿದ ಪುತ್ರ ರಾಮಯ್ಯನ ಕಥೆ.

**ವಿಶೇಷ :** ಕೊನೆಯಲ್ಲಿ "ಕನ್ನಡ ಉಪಾಧ್ಯರು ಗುಂಡ್ಲು ನಾರಣೈಯ್ಯಂಗಾರ್ಯರ ಬರೆಹಾ ಹೇವಿಳಂಬಿ ಸಂವತ್ಸರದ ಚೈತ್ರ ಶುದ್ಧ ೧೦ರಲ್ಲೂ" ಎಂದಿದೆ. ಇದರೊಡನೆ ವರನಂದೀಕಲ್ಯಾಣ, ಗುಂಡ್ಲು ಬ್ರಹ್ಮಯ್ಯನ ಸುವ್ವಿ ಎಂಬ ಇತರ ಗ್ರಂಥ ಗಳಿವೆ.

—ಬಿಎಸ್‌ಎಸ್

575

ಕೆ. ಎ. ೩೬೭ | ಮೈದುನ ರಾಮಯ್ಯನ ಸುವ್ವಿ | ತ್ರಿಪದಿ
೧೦.೫" × ೯.೭" | ? | ?
೧–೬೫ ಪುಟ | ೨೦ ಪಂಕ್ತಿ | ೧೪ ಅಕ್ಷರ

**ಆದಿ :** ......ನಮಃ ಶ್ರೀ ಗಣಾಧಿಪತಯೇ ನಮಃ । ಶ್ರೀ ಶಾರದಾಂಬೆ ನಮಃ...
...ಯ್ಯನ ಸುವ್ವಿ.

ಶ್ರೀ ಪರುಷ ಸಾಪಂನ ಶ್ರೀ ಪತ್ತಿ ನಿಯಂ...
...ಪುಣ್ಯ ನದಿಯ ಧರಿಸಿದ ಪರಮೇಶ್ವರನ
ಶ್ರೀ ಪಾದಕೆ.................. ॥ ೧ ॥

ಶಿವನನಾಡುವೆ ನಾನು ಶಿವನ ಬೇಡುವೆ ನಾನು
....ತ್ತಿಗಳನಿತಾಕೆ ಭುವನದೊಳಂ ಮನೆನರನೂ
......ಳಂತಿವದು....ಡಿ ಜಾಣೆವೋದುವರಲ್ಲಿಗೆ ಚೆರುಸರ
ಸರಸ್ವತಿಯ ...............ಗೆ ॥ ೩ ॥

**ಅಂತ್ಯ :** ......ಸಿದ್ದು......ಸರ್ವನ್ನಪಾಡಕ್ಕೆ ಸರನೆಂಬೆ॥ ೧೨೧ ॥
ಅಲ್ಲಗಲ್ಲಿಗೆ ಪದನು ಚೆ...ದ ಹಾಗದೋ ಚೆನ್ನ
ಮಲ್ಲಿಕಾರ್ಜುನ ಕೃತಿಯಿಂದ ಕೈಲಾಸವೆಂ
ಬಲ್ಲಿಗೆ ಪೊಂದಿಪ ರಾಯ ॥ ೧೨೨ ॥
ಉಭೆಯೆ ಸಂಧಿಕಂ ಪದ ಸಂಳಿ......ಪೂರ್ಣ...ಪೂರ್ಣ ಮಹಾ ಶ್ರೀ.

**ವಿಷಯ :** ದೀಪಾವಳಿಗೆ ಹಾಡುಗರೆಲ್ಲಾ ತಮ್ಮ ಅಕ್ಕಭಾವಂದಿರನ್ನು ಕರೆತರುವುದನ್ನು ತಿಳಿದ ಮೈದನ ರಾಮಯ್ಯನು, ತಾಯಿಯಿಂದ ತನಗೆ ಪಾರ್ವತೀಪರಮೇಶ್ವರರೇ ಅಕ್ಕಭಾವಂದಿರೆಂದು ತಿಳಿದು ಕೈಲಾಸಕ್ಕೆ ಹೋಗಿ ಪಾರ್ವತೀ ಪರಮೇಶ್ವರರನ್ನು ಕರೆತಂದು ಹಬ್ಬವನ್ನಾಚರಿಸಿದುದೇ ಕಥಾಸಾರವಾಗಿದೆ.

**ವಿಶೇಷ :** ಅಸಮಗ್ರ. ಅತ್ಯಂತ ಶಿಥಿಲ. ಪ್ರತಿಯಿಂದ ಪ್ರತಿ ಮಾಡಿದುದಾಗಿದೆ. ಇದು ಮಪರಾಸಿನಿಂದ ಸಂಸ್ಥೆಗೆ ಬಂದ ಹಸ್ತಪ್ರತಿ (ಡಿ. 2169) ಇದರ ಮೂಲ ಡಿ. 778 ಓಲೆ ಪ್ರತಿಯಿಂದ ೧೯೪೯ರಲ್ಲಿ ಪ್ರತಿ ಮಾಡಲಾಗಿದೆ.

—ಬಿಎಸ್‌ಎಸ್

576

ಕೆ. ೧೬೮೯/೨ | ಮೈನೆರೆದ ಫಲ | ಶ್ಲೋಕ. ಟೀಕು
೮.೩" × ೧.೫" | ? | ?
೩ ಪತ್ರ | ೬ ಪಂಕ್ತಿ | ೩೭ ಅಕ್ಷರ

**ಆದಿ :** ಶುಭಮಸ್ತು । ಮೈನೆರೆದ ಫಲ.

ಗುರುವಾರೆ ಪುತ್ರಲಾಭಂ ಚ ಶುಕ್ರಸ್ಸುವರ್ನ ಲಾಭಯೋಃ
ಶನಿಶ್ಚ ಸರ್ವನಾಶಂ ಚ ಯಿತೆವಾರ ತತ್ಫಲಂ ॥ ೨ ॥
ತಿಥಿಯ ಫಲವಂ ಪೇಳ್ವೆ। ಪಾಡ್ಯದಲ್ಲಿ ನೆರೆದವಳಂ ಅಡಿಗೆಯಲ್ಲಿ ಜಾಣೆಯಹಳು, ಬಿದಿಗೆಯಲ್ಲಿ ವಾರಲಗೊರಳಿ ತದಿಗೆಯಲ್ಲಿ ಉದ್ದಂಡೆಯಹಳು ಚೌತಿಯಲ್ಲಿ ಜಗಳಗಂಟಿ ಪಂಚಮಿಯಲ್ಲಿ ಸೌಭಾಗ್ಯವಂತೆಯಹಳು

**ಅಂತ್ಯ :** ತಾನೆ ಕಂಡಳು ವೊದಲು ಪೆಣ ಪಡೆವಳು ಯಂವನೊಳು ನಿಂದು ಬೆಸಗೊಳೆ ಮಧ್ಯಾನ್ನದೊಳಂ ಜನನಿಯಾದಾಳು ಮೂವರೊಳು ಪಾರದ್ವಾರವಂ ಮಾಡೂಳು ಮುನಾದಮ ನಿರುಳು ಬೇಡಿದವಂ ಕೊಟ್ಟು ಪೋದಂ ಅವನೊಳುಂ ಚಿರಕಾಲಂ ಬದುಕುವಳು

**ವಿಷಯ :** ಮೈನೆರೆದ ಫಲ.

**ವಿಶೇಷ :** ಅಸಮಗ್ರ. ಪ್ರತಿ ಶುದ್ಧವಾಗಿದೆ. ಇದರ ಜೊತೆಯಲ್ಲಿ ಜನವಶ್ಯ ಎನ್ನುವ ಕೃತಿಯಿದೆ.

—ಜಿಜಿಎಂ

## 577

| ಕೆ. ಬಿ. ೭೧೪/೪ | ಮೈನೆರೆದ ಫಲ | ಗದ್ಯ |
|---|---|---|
| ೮.೧″ × ೬.೮″ | ? | ? |
| ■ ಪತ್ರ | ೭೦ ಪಂಕ್ತಿ | ೨೨ ಅಕ್ಷರ |

**ಆದಿ :** ಮೈನೆರೆದ ಫಲ ಬರೆಯುವುದಕ್ಕೆ ಶುಭಮಸ್ತು ॥ ಮೈನರದ ಫಲವಂನು ಕೇಳ ಬಂದವರು, ನಿಂತ ದಿಕ್ಕ ನೋಡಿ ಹೇಳುವದು ॥
ಯಿಂದ್ರನಲ್ಲೂ ನಿಂತು ಕೇಳಲು ಜಾವ ವಂದರಲ್ಲಿ ಕಂಡಳು ತನು ಕೆಂಪು ಉಂಟು ಉಟ್ಟ ಸೀರೆ ಕೆಂಪು ಆ ಸೀರೆಯ ಶರಗು ಹರಿದಿತ್ತು ಆಕೆ ಗಬ್ಬಿತನ ಉಟ್ಟು ಗಂಡನ ವಲ್ಲಳು ವಂದು ಮಕ್ಕಳ ಫಲವುಂಟು.

**ಅಂತ್ಯ :** ಮಖೆ ಜೇಷ್ಠ ಮೂಲ ಶತತಾರೆ ೪ ಯಿವು ನಕ್ಷತ್ರದಲ್ಲಿ ನೆರೆವರೆ ದಾರಿದ್ರ ಯಾಗುವಳೂ । ಯಿದಕ್ಕೆ ಶಾಂತಿಯ ಮಾಡಬೇಕು । ನಷ್ಟಚಾರರವರಿಗೂ ಸ್ವಭಾವವೂ ॥ ಶ್ಲೋಕ
ಯಿಂದ್ರಾಗ್ನಿ ನೈರುತ್ಯಮೇವ ಶುಕ್ಲಯೆ ಮೇಕ
ಬೇರೆ ದೇಶವಸ್ತ್ರಂ ಚ ರತ್ನಂಗವಕಷ್ಟವಂತಂ ಶ್ರೀ ಶ್ರೀ.

**ವಿಷಯ :** ಮೈನೆರೆದ ಫಲವನ್ನು ದಿಕ್ಕು, ವಾರ, ನಕ್ಷತ್ರಗಳಿಗೆ ಅನುಗುಣವಾಗಿ ಹೇಳುವುದು.

ವಿಶೇಷ : ಸಮಗ್ರ ಪ್ರತಿ ಚೆನ್ನಾಗಿದೆ. ಇದರ ಜೊತೆಯಲ್ಲಿ ಸರ್ವಜ್ಞನ ವಚನಗಳು ಮೊದಲಾದ ಕೃತಿಗಳಿವೆ.

—ಜಿಜಿಎಂ

578

ಕೆ. ೧೮೬೪/೨ ಮೈರಾವಣ ಕಾಳಗ ಭಾಮಿನೀ ಷಟ್ಪದಿ
೨೦.೧'' × ೨.೧'' ನರಹರಿ (ಕುಮಾರ ವಾಲ್ಮೀಕಿ) ಸು. ೧೫೮೦
೫೦-೬೮ ಪತ್ರ ೧೦ ಪಂಕ್ತಿ ೬೦ ಅಕ್ಷರ

ಆದಿ : ಶ್ರೀ ಗಣಾಧಿಪತಯೇ ನಮಃ × × × ಮೈರಾವಣ ಕಾಳಗಾ
ರಾಘವನ ಗೆಲಲೆಂದು ರಾವಣ
ಬೇಗದಲಿ ಪಾತಾಳ ಲೆಂಕೆಗೆ
ಹೋಗಿ ಮೈರಾವಣಗೆ ಸೂಚಿಸಿ ಮರಳಿದನು ಪುರಕೆ ॥

ಪದನೂ ॥ ಶ್ರೀಮದನುಪಮ ಚರಿತ ಪುಣ್ಯ
ಸ್ತೋಮನಗಣಿತ ಮಹಿಮ ಭಕತ
ಪ್ರೇಮ ಕರುಣಾಸಿಂಧು ಮಂಗಳ ನಾಮ ನಿಸ್ಸೀಮಾ
ಕಾಮಪಿತ ಕಮಲಾಕ್ಷ ಸಾಸಿರ
ನಾಮಾ ಸುಮನತ ಶೀಲ ಮೇಘ
ಸ್ಯಾಮ ರಕ್ಷಿಸು ಜಗವ ಸುಮನೋದ್ದಾಮ ಶ್ರೀರಾಮಾ ॥ ೧ ॥

ಅಂತ್ಯ : ಕಂಡಿರದೆ ವೀರವಾನರ
ಮಂಡಳಿಕರಿರದೆದ್ದು ಬಂದರು
ಪುಂಡರೀಕಾಕ್ಷರಿಗೆ ನಮಿಸಿ ಲಕ್ಷ್ಮಣರಿಗೆ ಕೈಮುಗಿದೂ
ಕೂಗಿ ಕೊಂಡಾಡಿದರು ಹನುಮಂತದೇವನ
ಹಿಡಿದು ಮುಂಡಾಡಿ ಬಿಗಿಯಪ್ಪಿ ಭೂಪರ
ಕೊಂಡು ಬಂದನು ಹನುಮ ಸಜ್ಜಾಗ್ರಹವ ತುಂಬಿಸಿದಾ ॥ ೧೧೨ ॥
... ...ಅಂತೂ ಸಂಧಿ ೩ಕ್ಕಂ ಪದನು ೨೯೪ಕ್ಕಂ ಮಂಗಳ ಮಹಾ ಶ್ರೀ.

ವಿಷಯ : ಹನುಮಂತನು ಮೈರಾವಣನೊಡನೆ ಯುದ್ಧಮಾಡಿ ಆತನನ್ನು ಕೊಂದು ಪಾತಾಳದಿಂದ ರಾಮ ಲಕ್ಷ್ಮಣರನ್ನು ಭೂಲೋಕಕ್ಕೆ ಕರೆತಂದ ಕಥೆ.

ವಿಶೇಷ : ೩ನೇ ಸಂಧಿಯವರೆಗೆ ಮಾತ್ರ ಗ್ರಂಥವಿದ್ದು ಮುಂದಿನ ಭಾಗ ಲುಪ್ತವಾಗಿದೆ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಉತ್ತರ ರಾಮಾಯಣ ಎಂಬ ಇನ್ನೊಂದು ಕೃತಿಯಿದೆ.

—ಕೆಆರ್‌ಎಸ್

## 579

| ಕೆ. ೧೪೭೧ | **ಮೈರಾವಣ ಕಾಳಗ** | ಭಾಮಿನೀ ಷಟ್ಪದಿ |
|---|---|---|
| ೧೫.೬"×೧.೫" | ನರಹರಿ (ಕುಮಾರ ವಾಲ್ಮೀಕಿ) | ಸು. ೧೫೮೦ |
| ೧-೩೧ ಪತ್ರ | [illegible] ಪಂಕ್ತಿ | ೭೦ ಅಕ್ಷರ |

**ಆದಿ :** ಮೈರಾವಣನ ಕಥೆ ಬರೆಯುವದಕ್ಕೆ ನಿರ್ವಿಘ್ನಮಸ್ತು ॥
ರಾಘವನ ಗೆಲಲೆಂದು ರಾವಣ
ಬೇಗದಲಿ ಪಾತಾಳ ಲೆಂಕಗೆ
ಹೋಗಿ ಮೈರಾವಣನಿಗೆ ಸೂಚಿಸಿ ಮರಳಿದನು ಪುರಕೇ ॥
ಪದನೂ ॥ ಶ್ರೀಮದನುಂತಮ ಚರಿತ ಪುಣ್ಯ
ಸ್ತೋಮನಗಣಿತ ಮಹಿಮ ಭಕ್ತ
ಪ್ರೇಮ ಕರು.... ಸಿಂಧು ಮಂಗಳ ನಾಮ ನಿಸ್ಸೀಮಾ
ಕಾಮಪಿತ ಕಮಲಾಕ್ಷ ಸಾಸಿರ
ನಾಮ ಸುಮನಸ ನಮಿತ ನೀಲಮೇಘ
ಶ್ಯಾಮ ರಕ್ಷಿಸು ಜಗವ ಸುಮನೋದ್ಧಾಮ ರಘುನಾಮಾ ॥ ೧ ॥

**ಅಂತ್ಯ :** ಅರೆದೆರೆದ ಕಂಣ್ಣುಗಳ ನೆರೆದು
ಕುಕ್ಕೂ ವಾಯಸತತಿಯು ಮಂಡದಿ
ಜಡಿವ ಖಂಡದಿ ಕಡಿದು ತಿಂನ್ನುವ ಕಬ್ಬಕ್ಕಿ ಹದ್ದುಗಳಾ
ಪರಿ ಪರಿಯು ಹೆಣದಡಗ ಕೀಳುವ
ಪಿರಿಯು ಸ್ವ..... ನಕನ ಸಂಕುಳಂಗಳಾ
ಕರುಳ ಖಂಡಿಶಿ ಪೋಪ ಜಂಬುಕಗಳ ನಾನಾ ಮೃಗಗಳೊಪ್ಪಿದವು ॥ ೮೭ ॥
ಉಡಿದ ಕೈಕಾಲುಗಳ ಬಾಯೊಳ
ಗಡಸುತಿಹ ಶಾಕಿನೀ ಜನ ಸಮೂಹಗಳ
ಸಿಡುಗುರುಳ ನೆಣಪಸೆಯಶಾ......

**ವಿಷಯ :** ಹನುಮಂತನು ಮೈರಾವಣನೊಡನೆ ಯುದ್ಧಮಾಡಿ ಆತನನ್ನು ಕೊಂದು ಪಾತಾಳದಿಂದ ರಾಮಲಕ್ಷ್ಮಣರನ್ನು ಭೂಲೋಕಕ್ಕೆ ಕರೆತಂದ ಕಥೆ.

**ವಿಶೇಷ :** ಅಸಮಗ್ರ. ಅಕ್ಷರ ಸುಂದರವಾಗಿದೆ. ೧–೧೫, ೨೯, ೩೦ನೇ ಕ್ರಮಾಂಕಗಳ ಗರಿಗಳ ಒಂದು ಪಕ್ಕದಲ್ಲಿ ಸ್ವಲ್ಪ ಭಾಗ ಮುರಿದು ಲುಪ್ತವಾಗಿದೆ.

—ಕೆಆರ್ ಎಸ್

## 580

ಕೆ. ಬಿ. ೭೦೮ ಮೈಸೂರರಸರ ಪಟ್ಟಾಭಿಷೇಕ ಮುಹೂರ್ತ ಇತ್ಯಾದಿ ಶ್ಲೋಕ, ಗದ್ಯ
೧೦.೪"×೩.೩" ? ?
೧೮೮ ಪತ್ರ ೨೨ ಪಂಕ್ತಿ ೮ ಅಕ್ಷರ

ಆದಿ : ಶುಭಮಸ್ತು ॥
ಹರೇಷನ್‌ಲಾರರಾಜಸ್ತ ದೌಂಪ್ಪಾಪ್ಯದಂಡಸ್ಸುಪಾಕುರಃ ಹೇಮಾದ್ರಿ ಕೆಲರಾಯತ್ರ ಧಾತ್ರೀ ಛತ್ರ ಶ್ರೀಯುಂದದೌ ॥ ಸ್ವಸ್ತಿ ಶ್ರೀ ಕಿ ೀಲಕ... ಭ್ಯುದಯ ಶಾಲಿವಾಹನ ಶಕ ವರುಷಂಗಳು ೧೫೫೧ನೆಯು ಸಂದ ವರ್ತಮಾನ...ನಾಮ ಸಂವತ್ಸರದ ಮಾಘ ಶು. ೧೫ಲ್ಲೂ ತ್ರೈತ್ರೇಯು ಗೋತ್ರ × × ×
ಕುಂಠೀರವ ನರಸರಾಜ ವಡೆಯರೈಯ್ಯನವರ ಪುತ್ರನಾದ ಬಿರಿದೆಂತೆಂಬರ ಗಂಡ ಲೋಕೈಕವೀರ ಶ್ರೀಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಪ್ರಉಡ ಪ್ರತಾಪ ಅಪ್ರತಿಮ ವೀರ ನರಪತಿ ಶ್ರೀ ದೊಡ್ಡರಾಜ ವಡೆಯರೈಯ್ಯನವರು ಸೋಮೋಪರಾಗಿ ಪುಣ್ಯಕಾಲದಲ್ಲೂ....

ಅಂತ್ಯ : ಪಾಳು ಅಗಲ ಯುದಬೆ ಬೆದಲು ಬಳದೆ ಜಗಕಾಕ್ಕೆ ತಂದು ೧೩೦ ನಾರಾಯಣದ ಪುರದ ಬೆದಲು ಬೀಬ ೧ಕ್ಕೆ ಗು ೨೯೦ ಚೋಲುಣಹಳಿ ಬೆದಲು ಬೀಜ ಬ ೨ ಕಂ ರಾಂವ ಗ ೩೯೦

ವಿಷಯ : ಮೈಸೂರರಸರ ಪಟ್ಟಾಭಿಷೇಕ ಮೂಹೂರ್ತ, ವೈದ್ಯ, ಸಾಲದ ಬಗ್ಗೆ ಬರೆಸಿಕೊಂಡ ಪತ್ರ, ಹಾಗೂ ಹಾಡುಗಳಿವೆ.

ವಿಶೇಷ : ಕಡತ. ಮೋಡಿ ಬರಹ, ಅನೇಕ ವಿಷಯುಗಳನ್ನೊಳಗೊಂಡ ಸಂಕೀರ್ಣ ಗ್ರಂಥ. ಹಲವಾರು ಪತ್ರಗಳಲ್ಲಿ ಬರಹವಿಲ್ಲ.

—ಕೆಆರ್‌ಎಸ್

## 581

ಕೆ. ಬಿ. ೫೩೦ ಮೈಸೂರು ಒಡೆಯರು ಗದ್ಯ
೬"×೭" ? ೧೯ನೇ ಶತಕ
೨–೨೨ ಪತ್ರ ೧೯ ಪಂಕ್ತಿ ೨೮ ಅಕ್ಷರ

ಆದಿ : ಮಿವರ ತಂಮ ಚಾಮರಸ ವಡೆಯರು ಬಾಲ್ಯದಲ್ಲಿ ಶಿಡ...ಂದ ಮೇಲೆ ಯುರಗಿ ಪೋಗಲಾಗಿ ಅಲ್ಲಿ ಕೂದಲು ಹುಟ್ಟದೆ ಬೋಳ ಚಾಮರಸ ವಡಯುರು ಯುಂದು ಹೆಸರಾಗಿ ರಾಜ್ಯವಾಳೀವಲ್ಲಿ ಶಾಲಿವಾಹನಶಕೆ ೧೪೯೩ ನೆ ಪ್ರಜೋತ್ಪತ್ತಿ ಸಂವತ್ಸರದಲ್ಲಿ ಪಟ್ಟವಾಗಿ ಆವಾಗ ಕಾರಗಳ್ಳಿ ರಾಮರಾ

...ನ ದಳವಾಯಿ ವೆಂಕಟಾದ್ರಿ ನಾಯಕನು ಮೈಸೂರು ಮೇಲೆ...ಏರ್ಕೈನೆ ಬರಗಿ ಆವಂನ್ನ ಜೈಶಿ ಧಾತು ಸಂವತ್ಸರದಲ್ಲಿ ಮೃತವಾದರು. ವರ್ಷ–೬ ಯಿವರ ಮಕ್ಕಳುಂ ಮರಿವೆ ಆರಸುಗಳ ಕೊಮಾರ್ತೆ ವೀರಾಜಂಮಂನೆಂಬ ಹಿರಿಯಶಾಕೆಯಲ್ಲಿ ರಾಜವಡೆಯರು ೧. ಆನಂದ ಸಂವತ್ಸರದಲ್ಲಿ ಬೆಟ್ಟದ ಚಾಮರಸ ವಡಯುರಂ ೧ ವುಭಯಂ ೨

**ಅಂತ್ಯ** ಆ ಬಳಿಕ ಚಾಮರಾಜ ವಡಯುರ ಶಕ ೧೭೧೮ನೆ ದುರ್ಮುಖಿ ಸಂವತ್ಸರದ ಚೈತ್ರ ಶ್ಧು ೧೦ವರಿಗೆ ವರುಷ ೧೯...ಗಳು ೬ ದಿನ ೧೩–ಪಟ್ಟವಿಲ್ಲದ್ದು ನಳ ಸಂವತ್ಸರದ ಚೈತ್ರ ಶ್ದು ೧೧ ಆರಭ್ಯ ಸಿದ್ಧಾರ್ಥಿ ಸಂವತ್ಸರದ ಜೇಷ್ಠ ಬ ೧೨ ವರಿಗೆ ವರುಷ ೩ ತಿಂಗಳು ೨ ದಿನ ೧೫ ಸುಲತಾನರ ಆಳಿಕೆ ಅಂತೂ ವರುಷ ೬ ತಿಂಗಳು ೧೧ ದಿನ ೧೯ ವುಭಯುಂ ವರುಷ ೨೨೩ ತಿಂಗಳು ದಿನ ೧೩ಕ್ಕೆ ಪಟ್ಟ ೧೪ ಪ್ರಾಕುಪಟ್ಟ ೭ ಅಂತೂ ಪಟ್ಟ ೨೧ ಶಕ ೧೭೨೧ನೆ ಸಿದ್ಧಾರ್ಥಿ ಸಂವತ್ಸರದ ಜೆಷ್ಠ ೧೩ ಸೋಮವಾರ ಆರಭ್ಯ ಮೈಸೂರಲ್ಲಿ ಕೃಷ್ಣರಾಜ ವಡೆಯುರ ಪ್ರಭುತ್ವ ಪ್ರಾರಂಭಃ ॥

**ವಿಷಯ :** ಮೈಸೂರು ಒಡೆಯರವರ ವಂಶಾವಳಿ.

**ವಿಶೇಷ :** ಪತ್ರಗಳ ಎರಡು ಕಡೆಗಳಲ್ಲೂ ಬರವಣಿಗೆ ಇದೆ. ಹುಳು ಹೊಡೆದು ಹಾಳೆಗಳಲ್ಲಿ ರಂಧ್ರ ಬಿದ್ದಿದೆ. ಮೊದಲು ಮತ್ತು ಕೊನೆಯಲ್ಲಿ ಪತ್ರಗಳಿಲ್ಲ. ಗ್ರಂಥ ಅಸಮಗ್ರ. ಮೈಸೂರರಸರ ಪಟ್ಟವಾದ ಮತ್ತು ಮೃತರಾದ ಕಾಲದ ವಿವರವಿದೆ.

—ಎಸ್‌ಎನ್‌ಕೆ

## 582

| ಕೆ. ಎ. ೩೫೯/೨ | **ಮೈಸೂರು ನಗರದ ಪೂರ್ವೋತ್ತರ ಸಂಗತಿ** | ಗದ್ಯ |
|---|---|---|
| ೧೫.೫" x ೮.೭" | ನಾರಣಯ್ಯ | ೧೭೪೯ |
| ೨೫–೩೬ ಪತ್ರ | ೨೬ ಪಂಕ್ತಿ | ೨೩ ಅಕ್ಷರ |

**ಆದಿ :** ಮೈಸೂರು ನಗರದ ಪೂರ್ವೋತ್ತರ ಸಂಗತಿ.

ದ್ವಾರಕೆಯಿಂದ ವಿಜಯರಾಜವೊಡೆಯರು ಇವರ ತಮ್ಮಂದಿರು ಶ್ರೀಕೃಷ್ಣ ರಾಜವೊಡೆಯರೆಂಬುವರು ಸಹ ಇಕರ್ತರು ವಿಜಯ ನಗರಕ್ಕೆ ರಾಯರ ಬಳಿಗೆ ಬಂದು, ಇವರು ಆ ಬಳಿಕ, ರಾಯರು ಪರಾಂಬರಿಸಿ ನಿಮಗೆ ಒಂದು ಸೀಮೆಯಾಧಿಪತ್ಯವನ್ನು ಕೊಡಿಸಿಯೆಂದು ಇರುವ ತರುವಾಯ ಕಾವೇರಿಗೆ ದಕ್ಷಿಣದಿಕ್ಕಿನಲ್ಲಿ ಇರುವ ಸೀಮೆಯನ್ನು ನೋಡಿಕೊಂಡು ಬಂದೆವು ಎಂದು ಹೇಳಿಕೊಂಡು ರಾಯರು ಅಪ್ಪಣೆ ಕೊಟ್ಟರು.

ಅಂತ್ಯ : ಪಟ್ಟಣದ ಫಿರಂಗಿ ವಿವರ ॥
ವಾಯುವ್ಯ ಮೂಲೆಯಲ್ಲಿರುವ ರಾಮಲಕ್ಷ್ಮಣ ಎಂಬ ಫಿರಂಗಿ ೨ಕ್ಕೆ ನೀಳ ಮೊಳ ೨೬ ಸುತ್ತುಮೊಳ ೬ ॥ ಗುಂಡು ಅಂಗುಲ ೬, ಖಿರಾಣಿ ೮೧ ।।।, ಇರುವ ಗುಂಡು ೨೮೦೦, ರಂಗಧಾಮ ೧, ಉಗ್ರನೃಸಿಂಹ ೧, × × × × ಶ್ರೀ ಶಾಲೀವಾಹನ ಶಕ ವರ್ಷ ೧೬೭೧ ಶುಕ್ಲ ಸಂವತ್ಸರದ ಮಾರ್ಗಶಿರ ಬ ೧೪ ಬುಧವಾರದಲ್ಲು ಶ್ರೀರಂಗಪಟ್ಟಣದ ಈಶಾನ್ಯ ಭಾಗ ದಲ್ಲಿ (ರುವ) ಕಿರುವಂಗೂರ ನಾರಣಪ್ಪಯ್ಯನವರ ಮೊಮ್ಮಗ ನಾರಣಯ್ಯನು ತನಗೆ ಸಂಗ್ರಹವಾಗಿ ಬರೆದ ಸಮಸ್ತ ಚರಿತ್ರೆ ಸಂಪೂರ್ಣ ಶ್ರೀ.

ವಿಷಯ : ಮೈಸೂರು ನಗರದ ಪೂರ್ವೋತ್ತರ ಇತಿಹಾಸ.

ವಿಶೇಷ : ಇದನ್ನು ೧೯೫೭ರಲ್ಲಿ ಮದರಾಸಿನ D 1966ರ ಹಸ್ತಪ್ರತಿಯಿಂದ ನಕಲು ಮಾಡಲಾಗಿದೆ. ಇದರೊಡನೆ ಅಷ್ಟಗ್ರಾಮಗಳ ಕೈಫಿಯತ್ತು, ಸೋಗಾನಿ ಅಗ್ರಹಾರದ ಕೈಫಿಯತ್ತು ಎಂಬ ಇತರ ಎರಡು ಗ್ರಂಥಗಳಿವೆ. ಪತ್ರದ ಒಂದು ಕಡೆ ಮಾತ್ರ ಬರವಣಿಗೆಯಿದೆ.

—ಬಿಎಸ್‌ಎಸ್

## 583

| ಕೆ. ೯೭೧ | ಮೈಸೂರು ರಾಜವಂಶಾವಳಿ | ಶ್ಲೋಕ, ಟೀಕು |
|---|---|---|
| ೧೭''×೧.೨" | ? | ? |
| ೧–೪೨ ಪತ್ರ | ೭ ಪಂಕ್ತಿ | ೭೦ ಅಕ್ಷರ |

ಆದಿ : ಶ್ರೀಯೈ ನಮಃ × × × ಸ್ವಸ್ತಿ ಸಮಸ್ತ ಭೂಮಂಡಲ ಪುಂಡರೀಕ ಕರ್ಣಿಕಾಯಮಾನ ಕನಕಾಚಲ ದಕ್ಷಿಣ ದೇಶ ಪರ್ಯಸ್ತ ಪರಿಕರ್ಮಾಲಂ ಕರ್ಮೀಣ ಭಾರತ ವರ್ಷ ಮಂಡನಾಯಿಕ ಭರತ ಭೂಮಂಡಲೋದ್ದಂಡ ವೈಭವೋತ್ತಮರ್ಣಾಯಿತ ಕರ್ಣಾಟದೇಶದೊಳ್ ಕಾವೇರಿ ದಕ್ಷಿಣತೀರ ದೊಳ್ ಅನತಿದೂರದೊಳೆಸೆವ ಮಹೀಶೂರಪುರದೊಳ್ ಸಕಲ ಸಾಮಂತ ಕೋಟಿ ಕೋಟಿ ಮಣಿಘೃಣಿ ಚಿತ್ರಿತ ಪದ ರಾಜೀವನೆನಿಸಿ ರಾಜಿಪ ಚಾಮರಾಜಂಗೆ ಚತುರತೆಗೊಲ್ಮೆ ಮೈವೆತ್ತು

ಅಂತ್ಯ : ನೆಕ್ಕಸರದೊಳ್ ಕಟ್ಟಿ ನೆಲ್ಮುರಿಲ್ಕಿಯುಂ ನಿಲ್ಕಮುಯ್ಯಿಲಾಡುವ ಕೆಂಬರಲ್ ಚಂಡನಂಡಲೆವ ಪೆರಗೆಯ್ಯುಂಬಗೆಗೆರಗಿ ಪರಿತಜನಿಟ್ಟಿಸಿ ಮಣಿದು ಮೊಗ ದೊಳ್ ಮೊಗವಿಟ್ಟು ಮುತ್ತಿಸಿ ಮೈಮ

ವಿಷಯ : ಮೈಸೂರು ರಾಜರ ವಂಶಾವಳಿ.

**ವಿಶೇಷ :** ಗ್ರಂಥಾಕ್ಷರ. ಅಸಮಗ್ರ. ಶಿಥಿಲ. ಕೆಲವು ಗರಿಗಳು ಮುರಿದುಹೋಗಿವೆ.

—ಬಿಎಸ್‌ಎಸ್

## 584

| | | |
|---|---|---|
| ಕೆ. ೬೫೩ | **ಮೋಹನತರಂಗಿಣಿ** | ಸಾಂಗತ್ಯ |
| ೧೩''×೨'' | ಕನಕದಾಸ | ಸು. ೧೫೫೦ |
| ೧–೧೦೮ ಪತ್ರ | ೧೦ ಪಂಕ್ತಿ | ■ ಅಕ್ಷರ |

**ಆದಿ :** ಶ್ರೀ ಗಣಾಧಿಪತಯೇನಮಃ ॥ ಶ್ರೀ ಗುರುಭ್ಯೋನಮಃ ॥ ಶ್ರೀ ವೃಷಭಾ ಮಹೇಶ್ವರಾಯನಮಃ॥ ಶ್ರೀ ಶರದಬೆೊಮ್ಮನಮಃ । ಶ್ರೀ ವೆಂಕಟೇಶಾಯ ನಮಃ। ಶ್ರೀ ಕೋಮರ ಗುರುವೇ ನಮಃ। ಶುಭಮಸ್ತು। ಶೋಭನಮಸ್ತು। ಸಂತತಂ ಶ್ರೀಹರಿಹರಭಕ್ತಿರಸ್ತು

ಶ್ರೀ ಗಿರಿಜೇಶ್ವರನಾತ್ಮಭಾವಮ ಸದ್ವಾಗೀಶಸಿತ ಪರಂಧಾಮ
ಕಾಗಿನೆಲೆಯ ರಂಗಸುರ ಸಾರ್ವಭೌಮಸ । ತ್ಯಾಗಿ ಪಾಲಿಸು ಪೂರ್ಣಕಾಮಾ ॥ ೧ ॥

ಆಡಿವಿಡಿದಬುಜಸಂಭವ ಪೂಜೆಗೈಯ್ಯನಿಂ । ಮಾಡಿ ಗಗನಾಗ್ರದೊಳ್ಮೆರೆಯೆ
ಆಡಿಯಲಿರ್ದಖಿಳ ದೇವತೆಗಳೆಲ್ಲರು। ಬಿಡದಡಿಗೆರಗುವನು ಕೃಷ್ಣ ನಿಂಮ್ಮಾ ॥ ೨ ॥

× × × ×

ವರಮೋಹತರಂಗಿಣಿಯಂ ಕಾವ್ಯವ। ಬರದೋದಿ ಕೇಳಿದಾ ಜನರೂ।
ತರಣೀ ಚೆಂದ್ರಮರುಳ್ಳನಕಾಭಿಮತವಿತ್ತು । ಹೊರವ ಲಕ್ಷ್ಮಿಯಕಾಂತ ಬಿಡದೆ ॥ ೪೨ ॥

ಅಂತು ಪೀಠಿಕೆ ಸಂಧಿ ಸಮಾಪ್ತ ಮಂಗಳ ಮಹಾಶ್ರೀ। ರಾಮಾಯ ನಮಃ।
ಕೃತಿಮೇಳ್ದಾ ಕನಕದಾಸೋತ್ತಮ ಕೇಳಿದ। ಸತಿ ಸುಜ್ಞಾನವಧೂಟೀ ।
ಕೃತಿಕರ್ತನು ಕಾಗಿನೆಲೆಯಾದಿ ಕೇಶವ। ಕೃತಿಯ ಕೇಳ್ದರೆ ಪುಣ್ಯವಹುದು ॥ ೧ ॥

**ಅಂತ್ಯ :** ಪುಡರೀಕಾಯತೇಕ್ಷಣೆ ದುಃಖ ಬೇಡ ಮುಂ। ಕೊಂಡೆಂನನೊಡ ಚಿತ್ತೈಸೂ।
ದಂಡನೆಲ್ಲವ ಬರಿಕೈದಮೆ...ದೆರೆ। ಕಂಡಬುಧಿಯಕಾಬುದೆಂದ ॥ ೫೨ ॥
ವಿಧುಮುಖಿಯೊಡನೆ ಮಂತ್ರಿಜೆ ಬುದ್ಧಿವೇಳ್ದ......ವಿನಲಿ
ಬಂದು ಕುಮತ್ರ್ಯವಲ್ಲ ದುಃಖ। ಬೆಂದು ಕಂ..... ಕು ತೊಡದಳಾಯಕನ ॥ ೫೩ ॥
ಕಟ್ಟಾಣಿ ನುಡಿಗೇಳೀಶ ಮಂಸಮೆಚ್ಚಿ......................

ನೀಲಮ್ಮನವರ ಗರ್ಭಾಬ್ಧಿ ಚಂದ್ರಮನಾದ ರಾಚಪ್ಪನವರ ಅರ್ಧಾಂಗಿನಿಯ ಳಾದ ಬಸಂಮನವರ ವಡಲಾಬ್ಧಿ ಚಂದ್ರೋದಯನಾದಂಥ ಬಸಪ್ಪನವರಂ ಸ್ವಹಸ್ತದಿಂದ ಬರಕೊಂಡ ಪುಸ್ತಕಂ ಸಂಪೂರ್ಣಂ ಶ್ರೀ ಶ್ರೀ.

**ವಿಷಯ :** ಕಾಶಿ ರತ್ನೇಶ್ವರರ ಕಥೆ

**ವಿಶೇಷ :** ಸಮಗ್ರ. ಪ್ರತಿ ತುಂಬ ತ್ರುಟಿತವಾಗಿದೆ. ಹುಳುಗಳು ಎಲ್ಲ ಪತ್ರವನ್ನೂ ತೂತುಮಾಡಿವೆ. ಕನ್ನಡ ಅಧ್ಯಯನ ಸಂಸ್ಥೆಯ ಕೆ. ಎ. ೩೦೧ ಪ್ರತಿ ಮತ್ತು ಈ ಪ್ರತಿಯ ಪ್ರತಿಕಾರ ಒಬ್ಬನೇ ಬಹುಶಃ ಕೆ. ಎ. ೩೦೧ ಇದರ ಮರುಪ್ರತಿ ಇರಬಹುದು.

—ಜಿಜಿಎಂ

## 644

| | | |
|---|---|---|
| ಕೆ. ೧೯೯೦ | **ರಾಘವಾಂಕ ಚರಿತೆ** | ವಾರ್ಧಕಷಟ್ಪದಿ |
| ೧೫.೨"×೨.೪" | ಸಿದ್ಧನಂಜೇಶ (ಚಿಕ್ಕನಂಜೇಶ) | ಸು. ೧೬೫೦ |
| ೧–೧೧೭ ಪತ್ರ | ೧೦ ಪಂಕ್ತಿ | ೭೮ ಅಕ್ಷರ |

**ಆದಿ :** ರಾಘವಾಂಕನ ಕಾವ್ಯ ಬರವುದಕ್ಕೆ ಶುಭಮಸ್ತು ॥
ಪಲ್ಲವ ॥ ಶ್ರೀ ಪರಮ ಕೈಲಾಸದಿಂ ದಕ್ಷಿಣಾಕಾಶಯೊಳ
ಗಾ ಪುಣ್ಯ ಸುಕ್ಷೇತ್ರ ಪಂಪಾಖ್ಯನಗರದೊಳು
ಪಾಪನಾಶಂ ಕವೀಶಂ ರಾಘವೇಶಂ ಮೆರೆದನು ಸಜ್ಜನರು ಮೆಚ್ಚೆ ॥
ಪದನೂ ॥ ಶ್ರೀ ಗಿರಿಜೆಯಂಸ್ತ್ಯಾಬ್ಜ ಷಟ್ಚರಣಕಾತ್ಯಾಯ
ನೀ ಗುರುಸ್ತನ ಕುಂಕುಮಾಂಕಿತಾಮಲವಕ್ಷ
ಶ್ರೀ ಗಿರಿಸುತಾಯವ್ವನಾಮೃತ ಸರೋಹಂಸನಃಮೆಯ ಹೃದ್ವನಚೈತ್ರನೂ॥
ಯೋಗಿಜನ ಹೃಜ್ಯೋತಿ ಭಕ್ತವತ್ಸಲನತುಳ
ಭೋಗಿ ಕಂಕಣ ಭರ್ಗಭವರೋಗ ವೈದ್ಯ ಸಲೆ
ಭೋಗಿ ತಳ್ಪಾರ್ಜಿತ ಪದಾಂಬೋಜ ಸ್ತುತಿ ಸುಹಿತ ಪಾಲಿಸುಗೆ
ನಂಜೇಶ್ವರಾ ॥ ೧ ॥

**ಅಂತ್ಯ :** ಆಚಾರ್ಯ್ಯ ರೇವಣಾ ಸಿದ್ದೇಶ ಮರುಳಸಿ
ದ್ಧಾಚಾರ್ಯ್ಯ ರಾಮದೇವಾಚಾರ್ಯ್ಯ ಗುರು
. . . . . . . ಪಂಚವಂಣಿಗೆ ಸಿದ್ಧನಂಜೇಶ್ವರಾ ।
ಸ್ವಾಚಾರ್ಯ್ಯಪದ ಸರಸಿರುಹ ಮದುಪ ಚಿಕ್ಕನಂ
ಜಾಚಾರ್ಯ್ಯರಚಿತವಹ ಹಂಪೆಯ ಹರೀಶ್ವರ ಶಿ

ವಾಚಾರ್ಯ್ಯ ಸುತ ರಾಘವನ ಕೃತಿಗೆ ನವದಶಕ ಸಂಧಿ......
...ಧಿ ೧೯ ಕ್ಕಂ ಪದನೂ ೧೪೮೭ಕ್ಕಂ ಮಂಗಳಮಹಾ
ಗ್ರಂಥ ೧೮೮ಕ್ಕಂ ಉಭಯಂ ೧೬೧೫ಕ್ಕಂ ಮಂಗಳ ಮಹಾ ಶ್ರೀ.

ವಿಷಯ : ಶಿವಶರಣರ ಹಾಗೂ ರಾಘವಾಂಕರ ಚರಿತ್ರೆ, ಅಷ್ಟಾವರಣಗಳ ಮಹಿಮೆ

ವಿಶೇಷ : ಸಮಗ್ರ. ಬರಹ ಸುಂದರವಾಗಿದೆ. ಕೊನೆಯ ಪತ್ರ ತ್ರುಟಿತವಾಗಿದೆ. [ಕ. ಹ. ಪ್ರ. ವ. ಸೂ. ತೃತೀಯ ಸಂಪುಟ ಪುಟ ೩೮೧–೪೫೬ ಕ್ರಮಾಂಕ 1404–1408 ನೋಡಿ]

—ಕೆಆರ್‌ಎಸ್

## 645

| ಕೆ. ೧೯೪ | ರಾಘವಾಂಕಚರಿತೆ | ವಾರ್ಧಕಷಟ್ಪದಿ |
|---|---|---|
| ೨೧.೨″ × ೩″ | ಸಿದ್ಧನಂಜೇಶ (ಚಿಕ್ಕನಂಜೇಶ) | ಸು. ೧೬೫೦ |
| ೧–೩೭ ಪತ್ರ | ೯ ಪಂಕ್ತಿ | ೮೫ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ ॥ ಶ್ರೀ ಸಾಂಬಸದಾಶಿವಾಯ ನಮಃ ॥
ಹಂಪೆ ರಾಘವಾಂಕನ ಕಾವ್ಯವಂನು ರತವುದಕ್ಕೆ ಶುಭಮಸ್ತು ॥ ಶೋಭನ ಮಸ್ತು ॥ ಆಯುರಾರೋಗ್ಯ ಐಶ್ವರ್ಯಮಸ್ತು ॥ ಧನ ಕನಕ ವಸ್ತು ವಾಹನ ಸಕಲ ಸಮೃದ್ಧಿರಸ್ತು ॥ ಪಲ್ಲವ ॥
ಶ್ರೀಪರಮ ಕೈಲಾಸದಿಂ ದಕ್ಷಿಣಕಾಶಿಯೊಳ
ಗಾ ಪುಣ್ಯ ಸುಕ್ಷೇತ್ರ ಪಂಪಾಖ್ಯ ನಗರದೊಳು
ಪಾಪನಾಶಂ ಕವೀಶಂ ರಾಘವೇಶಂ ಮೆರದ ಸಜ್ಜನರು ಮೆಚ್ಚೆ ॥
ಪದನೂ ॥ ಶ್ರೀಗಿರಿಜೆಯು ಶ್ಯಾಬ್ಜ ಷಟ್ಚರಣ ಕ್ಯಾತ್ಯಾಯ
ನೀಗುರುಸ್ತನ ಕುಂಕುಮಾಂಕಿತಾಮಲವೃಕ್ಷ
ಶ್ರೀ ಗಿರಿಸುತಾ ಯವ್ವನಾಮೃತ ಸರೋಹಂಸನಮಯಾ ಹೃದ್ವನಚೈತ್ರನೂ॥

× × ×

ಪುರದ ಸಿಂಹಾಸನಾಧಿಪ ಸಿದ್ಧನಂಜೇಶ
ಚರಣಶತಪತ್ರ ಮಧುಕರ ಚಿಕ್ಕ ನಂಜೇಶ
ವಿರಚಿಸಿದ ರಾಘವಾಂಕನ ಕೃತಿಯು ಶಿವಭಕ್ತತತಿಯ ಘನವಿಮಲಪಾತಿಯೂ
॥ ೨೧ ॥

ಅಂತ್ಯ : ಈ ತೆರದಿ ಬಸಮುಖ್ಯಾಖಿಲ ಪುರಾತನರು
ಪ್ರೀತಿಯಿಂ ಜಂಗಮವ ಭಜಿಸಿ ಶಿವಲೋಕಕ್ಕೆ
ನೇತಾರರಾದರೆಲೆ ರಾಘವ ಕೇಳು ಗುರುಲಿಂಗ ಜಂಗಮದ ಮಹಿಮೆ

ಸಾತಿಸಯ ವಿಂಗಿಲೆಸಲಂ ಗುರುಲಿಂಗ ಜಂಗಮು
ವ್ರತಭಕ್ತ್ಯಾಂಗ ದಿವ್ಯಾಭರಣಮಾಗಿರ್ಪ್ಪ
ಭೂತಿ ರುದ್ರಾಕ್ಷೆಗಳ ಮಹಿಮೆಯಂ ಸಂತಸದೊಳಸುರ್ವೆನೆಂದಂ ಹರೀಶಂ
॥ ೫೪ ॥

ಆಚಾರ್ಯ ರೇವಣಾಸಿದ್ಧೇಶ ಮರುಳಸಿ
ದ್ಧಾಚಾರ್ಯಮಿ ದೇವಾಚಾರ್ಯ ಗುರುಪಂಡಿ
ತಾಚಾರ್ಯ ಚ್ಯೂತ ಮಧ್ಯದಿಸಿಂದ ಪಂಚವಂಣಗೆ ಸಿದ್ಧನಂಜೇಶ್ವರಾ ॥
ಆಚಾರ್ಯ ಪದಪದ್ಮ ಮಧುಕರಂ ಚಿಕ್ಕನಂ
ಜಾಚಾರ್ಯರಚಿತವಹ ಹಂಪೆಯ ಹರೀಶ್ವರ ಶಿ
ವಾಚಾರ್ಯಸುತ ರಾಘವಾಂಕ ಕೃತಿಯೊಳಗೆಂಟು ಸಂಧಿಸುವಚೋನುಬಂಧಿ
॥ ೫೫ ॥

ಅಂತು ಸಂಧಿ ೮ಕ್ಕಂ ಪದ ೪೮೧ಕ್ಕಂ ಮಂಗಳಮಹಾ ಶ್ರೀ.

**ವಿಷಯ :** ರಾಘವಾಂಕ ಕವಿಯ ಚರಿತ್ರೆ.

**ವಿಶೇಷ :** ಈ ಗ್ರಂಥ ಅಸಮಗ್ರ. ಅಪೂರ್ಣ. ಒಟ್ಟು ೩೭ ಪತ್ರಗಳು ಇವೆ. ಪತ್ರಗಳು ಅದಲುಬದಲಾಗಿವೆ ಕೇವಲ ೮ ಸಂಧಿ ಮಾತ್ರ ಇದೆ. ೮ನೇ ಸಂಧಿಯ ಕೊನೆಯಲ್ಲಿ ಕೃತಿಕಾರನ ಹೆಸರು ಚಿಕ್ಕನಂಜಾಚಾರ್ಯ ಎಂದಿದೆ. ಸುಂದರವಾದ ಅಕ್ಷರ.

—ವೈಸಿಬಿ

646

| ಕ. ೧೨೭೯ | ರಾಘವಾಂಕ ಚರಿತೆ | ವಾರ್ಧಕಷಟ್ಪದಿ |
|---|---|---|
| ೧೩" × ೨.೨" | ಸಿದ್ಧನಂಜೇಶ (ಚಿಕ್ಕನಂಜೇಶ) | ಸು. ೧೬೫೦ |
| ೧–೭೬ ಪತ್ರ | ೧೩ ಪಂಕ್ತಿ | ೭೨ ಅಕ್ಷರ |

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ರಾಘವಾಂಕಯ್ಯನ ಕಾವ್ಯ ಬರವುದಕ್ಕೆ ಶುಭಮಸ್ತು ॥ ವಾರ್ಧಿಕಷಟ್ಪದಿ ॥
ಶ್ರೀಪರಮಕೈಲಾಸದಿಂ ದಕ್ಷಣ್ದೆಸೆಯೊಳ
ಗಾ ಪುಣ್ಯ ಸುಕ್ಷೇತ್ರ ಪಂಪಾಖ್ಯನಗರದೊಳು
ಪಾವ-ಶಕವೀಶಂ ರಾಘವೇಶಂ ಮೆರದೆನು ಸಜ್ಜನರು ಮೆಚ್ಚೆ ॥
ಪದನು ॥
ಶ್ರೀ ಗಿರಿಜೆಯಾಸ್ಯಾಬ್ಜ ಷಟ್ಚರಣ ಕಾತ್ಯಾಯ
ನೀ ಗುರುಸ್ತನ ಕುಂಕುಮಾಂಕಿತಾಮಲಪಕ್ಷ
ಶ್ರೀಗಿರಿಸುತಾಯವ್ವನಂಮೃತ ಸರೋಹಂಸನುಮೆಯ ಹೃದ್ವನಚೈತ್ರನು

ಯೋಗಿಜನಹೃಜ್ಯೋತಿ ಭಕ್ತವತ್ಸಳನತುಳ
ಭೋಗಿ ಕಂಕಣಭರ್ಗ ಭವರೋಗ ವೈದ್ಯನಲೆ
ಭೋಗಿತಳ್ಪಿರ್ಚಿತ ಪದಾಂಭೋಜನುತಿಸಂಹಿತ ಪಾಲಿಸುಗೆ ನಂಜೇಶ್ವರಾ
॥ ೧ ॥

**ಅಂತ್ಯ :** ಆಚಾರ್ಯರ್ ರೇವಣಾಸಿದ್ಧೇಶ ಮರುಳ ಸಿ
ದ್ಧಾಚಾರ್ಯರ್ ರಾಮದೇವಾಚಾರ್ಯರ್ ಗುರು ಪಂಡಿ
ತಾಚಾರ್ಯರ್ ಚೌಕಮಧ್ಯದಿನಿಂದ ಪಂಚಮಂಣಿಗೆ ಸಿದ್ಧನಂಜೇಶ್ವರಾ
ಸ್ವಾಚಾರ್ಯರ್ ಪದಪದ್ಮಮಧುಕರ ಚಿಕ್ಕನಂ
ಜಾಚಾರ್ಯರ್ ರಚಿತವಹ ಹಂಪೆಯ ಹರೀಶ್ವರ ಶಿ
ವಾಚಾರ್ಯರ್ ಸುತ ರಾಘವನ ಕೃತಿಗೆ ನವದಶಕ ಸಂಧಿ ಸುವಚೋನುಬಂಧಿ
॥ ೧೧೦ ॥

ಅಂತು ಸಂಧಿ ೧೯ಕ್ಕಂ ಪದನು ೧೪೯೫ಕ್ಕಂ ಗ್ರಂಥ ೩೦೦ಕ್ಕಂ ಮಂಗಲ ಮಹಾ ಶ್ರೀ ಶ್ರೀ. ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೬೭ನೆಯ ಯುವಸಂತ್ಸರದ ಮರ್ಗಶಿರ ಸು ೨ಯಲು ಶುಕ್ರವಾರ ಪ್ರಾತಃ ಕಾಲಕ್ಕೆ ರಾಘವಾಂಕನ ಕಾವ್ಯ ಸಂಪೂರ್ನ ಶ್ರೀಮತ್ಸಜ್ಜನ ಶುದ್ಧ ಶಿವಾಚಾರ ಸಂಪಂನರಾದ ದೇವಾ ಪೃಥ್ವೀ ಮಹಾಮಹಂತಿನೊಳಗಾದ ಧನುಗೂರ ಬಗೆ ಹೊಸತೊಳಲ ಶಾಂತಮಲ್ಲಿಕಾರ್ಜುನ ದೇವರ ಪಾದಕ್ಕೆ ಯಿಕ್ಕೆರೆ ಹಿರೇ ಮಟದ ಪಟ್ಟದ ಗುರುಪಾದಸ್ವಾಮಿಯವರ ಕರಕಮಲೋದ್ಭವನಾದ ಬಯಿಹರ ವೀರಪ್ಪನ ಭದ್ರಯ್ಯನ ಮಗ ಚೆಂನವೀರಮರಿಯು ಬರಕೊಟ್ಟ ರಾಘವಾಂಕಯ್ಯನ ಕಾವ್ಯಕ್ಕೆ ಶುಭಮಸ್ತು ಮಂಗಲಮಸ್ತು

**ವಿಷಯ :** ರಾಘವಾಂಕನ ಜೀವನಚರಿತ್ರೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

## 647

| ಕೆ. ೧೨೬೮ | **ರಾಘವಾಂಕ ಚರಿತೆ** | ವಾರ್ಧಕಷಟ್ಪದಿ |
|---|---|---|
| ೨೧.೫"×೨.೨" | ಸಿದ್ಧನಂಜೇಶ (ಚಿಕ್ಕನಂಜೇಶ) | ಸು. ೧೬೫೦ |
| ೧–೭೩ ಪತ್ರ | ೧೨ ಪಂಕ್ತಿ | ೧೦೦ ಅಕ್ಷರ |

**ಆದಿ :** ಶ್ರೀ ಗುರು ನೀಲಕಂಠ ಪ್ರಸನ್ನ × × ವಿರೋಧಿನಾಮಸಂವತ್ಸರದ ಶ್ರಾವಣ ಶು ೨ ಗುರುವಾರದ ೯ನೆ ಫಳಿಗೆಯಲ್ಲು ರಾಘವಾಂಕರ ಕಾವ್ಯ ವನ್ನು ಬರೆಯುವದಕ್ಕೆ ಶುಭಮಸ್ತು × × ×

ಶ್ರೀ ಪರಮಕೈಲಾಸದಿಂ ದಕ್ಷಿಣಾಸೆಯೊಳ
ಗಾ ಪುಣ್ಯಕ್ಷೇತ್ರ ಪೊಂಪಾಖ್ಯನಗರದೊಳು
ಪಾಪನಾಶು ಕವೀಶು ರಾಘವೇಶು ಮೆರೆದನಾ ಸುಜನರು ಮೆಚ್ಚೆ ॥

ವಾರ್ಧಿಕ ॥

ಶ್ರೀ ಗಿರಿಜೆಯಾಸ್ಯಾಬ್ಜ ಷಟ್ಚರಣ ಕಾತ್ಯಾಯ
ನೀ ಗುರುಸ್ಥಲ ಕುಂಕುಮಾಂಕಿತಾಮಲವಕ್ಷ
ಶ್ರೀ ಗಿರಿಸುತಾಯೌವನಾಮೃತಸರೋಹಂಸನುಮೆಯ ಹೃದ್ವನಚೈತ್ರನು ॥
ಯೋಗಿಜನ ಹೃಜ್ಯೋತಿ ಭಕ್ತವತ್ಸಲನತುಳ
ಭೋಗಿ ಕಂಕಣನಮಳ ಭರ್ಗ ಭವರೋಗವೈದ್ಯ ಸಲೆ
ಭೋಗಿ ತಳ್ಪಾರ್ಚಿತ ಸ್ತುತಿ ವಿತತಿಯುಂ ಪಾಲಿಸುಗೆ ನಂಜೇಶ್ವರ ॥ ೧ ॥

ಅಂತ್ಯ : ಆಚಾರ್ಯ ರೇವಣಾಸಿದ್ಧೇಶ ಮರುಳಸಿ
ಸಿದ್ಧಾಚಾರ್ಯ ರಾಮಿದೇವಾಚಾರ್ಯ ಗುರುಪಂಡಿ
ತಾಚಾರ್ಯ ಚೌಕಮಧ್ಯದಿ ನಿಂದು ಪಂಚವಂಣಿಗೆ ಸಿದ್ಧನಂಜೇಶ್ವರ ।
ಸಾಚಾರ್ಯ ಪದ ಸರಸಿರುಹಮಧುಪ ಚಿಕ್ಕನಂ
ಜಾಚಾರ್ಯ ರಚಿತವಹ ಹಂಪೆಯ ಹರೀಶ್ವರ ಶಿ
ವಾಚಾರ್ಯಸುತ ರಾಘವಾಂಕನಾ ಕೃತಿಯಹಾಯ್ತು ನವದಶಲು ಸಂಧಿ ಸಂವ
ಚೋನಂಬಂಧೀ ॥ ೧೧೦ ॥

ಅಂತೂ ಸಂಧಿ ೧೯ಕ್ಕಂ ಪದನು ೧೪೭೭ಕ್ಕಂ ಮಂಗಳಮಹಾಶ್ರೀ ಶ್ರೀ ಮೂಗನಾಯ್ಕನಕೋಟೆಮಂಠದ ಚೆಂನವೀರದೇವರು ತಮುಕೂರ ರಂಗ ದಲೆ ಚನ್ನಬಸಪ್ಪನ ಕುಮಾರಗೆ ಬರಕೊಟ್ಟ ರಾಘವಾಂಕನ ಕಾವ್ಯ ಮಂಗಳ ಮಹಾಶ್ರೀ ಶ್ರೀ.

ವಿಷಯ : ಕವಿ ರಾಘವಾಂಕನ ಚರಿತ್ರೆ.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ.

—ಜಿಜಿಎಂ

## 648

| ಕೆ. ೧೪೫೩ | ರಾಘವಾಂಕ ಚರಿತೆ | ವಾರ್ಧಕಷಟ್ಪದಿ |
|---|---|---|
| ೧೩.೫" × ೧.೭" | ಸಿದ್ಧನಂಜೇಶ (ಚಿಕ್ಕನಂಜೇಶ) | ಸು. ೧೬೫೦ |
| ೧–೧೨೨ ಪತ್ರ | ೮ ಪಂಕ್ತಿ | ೬೩ ಅಕ್ಷರ |

ಆದಿ : ಶ್ರೀ ಮದ್ಗುರು ಬಸವಲಿಂಗಾಯ ನಮಃ ॥ ರಾಘವೇಶ್ವರನ ಕಾವ್ಯವ ಬರ ಉದಕ್ಕೆ ಶುಭಮಸ್ತು ॥ × × ×

ವಾರ್ಧಕಷಟ್ಪದಿ ॥

ಶ್ರೀ ಪರಮ ಕೈಲಾಸದಿಂ ದಕ್ಷಿಣಾಶೆಯೊಳ
ಗಾ ಪುಣ್ಯ ಸುಕ್ಷೇತ್ರ ಪಂಪಾಖ್ಯನಗರದೊಳಂ
ಪಾಪನಾಶಂ ಕವೀಶಂ ರಾಘವೇಶಂ ಮೆರೆದನು ಸಜ್ಜನರು ಮೆಚ್ಚೆ ॥ ಪ ॥
ಶ್ರೀಗಿರಿಜೆಯಶಾಸ್ಯಾಬ್ಜ ಷಟ್ಚರಣ ಕಾತ್ಯಯ
ನೀ ಗುರುಸ್ತನ ಕುಂಕುಮಾಂಕಿತಾಮಲವಕ್ಷ
ಶ್ರೀ ಗಿರಿಸುತಾ ಯವ್ವನಾಂಮೃತ ಸರೋಹಂಸನುಮೆಯ ಹೃದ್ವನ ಚೈತ್ರನೂ
ಯೋಗಿಜನ ಹೃಜ್ಯೋತಿ ಭಕ್ತವತ್ಸಲನತುಳ
ಭೋಗಿ ಕಂಕಣಭರ್ಗ ಭವರೋಗವೈದ್ಯ ಸಲೆ
ಭೋಗಿ ತಳ್ಪಾರ್ಚಿತ ಪದಾಂಭೋಜ ಸ್ತುತಿ ಸಹಿತ ಪಾಲಿಸುಗೆ
ನಂಜೇಶ್ವರಾ ॥ ೧ ॥

**ಅಂತ್ಯ :** ಆಚಾರ್ಯ ರೇವಣಶಿಧೇಶ ಮರುಳುಸಿ
ಧಾಚಾರ್ಯ ರಾಮಿದೇವಾಚಾರ್ಯ ವರಪಂಡಿ
ತಾಚಾರ್ಯ ಚವುಕ ಮಧ್ಯದಿ ನಿಂದ ಪಂಚವಂಣಗೆ ಸಿಧನಂ . .
ಸ್ವಾಚಾರ್ಯ ಪದಸರಸೀರುಹ ಧುಪ ಚಿಕ್ಕನಂ
ಜಾಚಾರ್ಯ ರಚಿತವಹ ಹಂಪೆಯ ಹರೀಶ್ವರ ಶಿ
ವಾಚಾರ್ಯಸುತ ರಾಘವಾಂಕ ಕೃತಿಗೆ ನವದಶಕ ಸಂಧಿ ಸಂವಚೋನುಬಂಧಿ
॥ ೧೧೦ ॥
ಅಂತು ಸಂಧಿ ೧೯ಕ್ಕಂ ಪದನು ೧೪೭೬ಕ್ಕಂ ಮಂಗಳಮಹಾಶ್ರೀ.

**ವಿಷಯ :** ಕವಿ ರಾಘವಾಂಕನ ಚರಿತ್ರೆ.

**ವಿಶೇಷ :** ಸ್ಫುಟಾಕ್ಷರ, ಸಮಗ್ರ.

—ವೈಸಿಬಿ

649

ಕೆ. ೧೫೩೯/೧ **ರಾಘವಾಂಕ ಚರಿತೆ** ವಾರ್ಧಕಷಟ್ಪದಿ
೧೪.೨" × ೧.೯" ಸಿದ್ಧನಂಜೇಶ (ಚಿಕ್ಕನಂಜೇಶ) ಸು. ೧೬೫೦
೧–೧೫೪ ಪತ್ರ ೯ ಪಂಕ್ತಿ ೭೦ ಅಕ್ಷರ

**ಆದಿ :** ಶ್ರೀ ಗುರುಬಸವ ಲಿಂಗಾಯ ನಮಃ । ರಾಘವಾಂಕನ ಕಾವ್ಯ ಬರವುದಕ್ಕೆ
ಶುಭಮಸ್ತು × × × ವಾರ್ಧಿಕಾಷಟ್ಪದಿ ॥
ಶ್ರೀಪರಮ ಕೈಲಾಸದಿಂ ದಕ್ಷಿಣಾಸೆಯೊಳ
ಗಾ ಪುಣ್ಯಸಂಕ್ಷೇತ್ರ ಪಂಪಾಖ್ಯನಗರದೊಳು
ಪಾಪನಾಶಂ ಕವೀಶಂ ರಾಘವಾಂಕ ಮೆರದನು ಸಜ್ಜರು ಮೆಚ್ಚಲು ॥

ಪದ ॥ ಶ್ರೀ ಗಿರಿಜೆಯಾಸ್ಯಾಬ್ಜ ಷಟ್ಚರಣ ಕಾತ್ಯಾಯ
ನೀ ಗುರುಸ್ತನಕುಂಕುಮಾಂಕಿತಾಮಲಪಕ್ಷ
ಶ್ರೀ ಗಿರಿಸತಾಯವ್ವನಾಮ್ರುತ ಸರೋಹಂಸನುಮೆಯ ಹೃದ್ವನ
ಚೈತ್ರನೂ ॥
ಯೋಗಿಜನ ಹೃಜ್ಜ್ಯೋತಿ ಭಕ್ತವತ್ಸಲನತುಳ
ಭೋಗಿ ಕಂಕಣಭರ್ಗ ಭವರೋಗವೈದ್ಯ ಸಲೆ
ಭೋಗಿ ತಲ್ಪಾರ್ಚಿತ ಪದಾಂಭೋ ಜಾತಸ್ತುತಿ ಸುಹಿತ ಪಾಲಿಸುಗೆ
ನಂಜೇಶ್ವರಾ ॥ ೧ ॥

ಅಂತ್ಯ : ಕರಜ ಮುಖಲೀಲಾ ವಿಲೋಚನ ಪ್ರಿಯ ಭವ್ಯ
ಮೆರೆದುರುತರಂಗಿಣೀ ಫೇನಪ್ರಭಾಮಿಳಿತ
ವರತರ ಕಪರ್ದಹಿಮಭಾನು ಕೃಶಾನು ವ್ಯಗ್ಭಕ್ತಜನಕಲ್ಪದ್ರುಮ ॥
ಹರಿಕು.

ವಿಷಯ : ರಾಘವಾಂಕ ಮಹಾಕವಿಯ ಚರಿತ್ರೆ, ಕೆಲವು ಶಿವಶರಣರ ಚರಿತ್ರೆ.

ವಿಶೇಷ : ಅಸಮಗ್ರ. ಮತ್ತು ಈ ಕೆಳಗಿನ ಪತ್ರಗಳು ಕಟ್ಟಿನಲ್ಲಿಲ್ಲ: ೪೬, ೫೮, ೬೦–೬೪, ೬೬, ೬೮, ೭೮–೮೨, ೮೮, ೮೯, ೧೨೦–೧೨೫, ೧೨೭–೧೨೯, ೧೩೨, ೧೩೭, ೧೩೯, ೧೪೦. ಇದೇ ಕಟ್ಟಿನಲ್ಲಿ ಕಪೋತವಾಕ್ಯ ಮುಂತಾದ ೫ ಕೃತಿಗಳಿವೆ.

—ಜಿಜಿಎಂ

## 650

ಕೆ. ಬಿ. ೬೫೨/೧ | ರಾಘವಾಂಕ ಚರಿತೆ | ವಾರ್ಧಕಷಟ್ಪದಿ
೧೨.೫"×೪" | ಸಿದ್ಧನಂಜೇಶ (ಚಿಕ್ಕನಂಜೇಶ) | ಸು. ೧೬೫೦
೧–೭೮ ಪತ್ರ | ೧೧ ಪಂಕ್ತಿ | ▒ ಅಕ್ಷರ

ಆದಿ : ಶ್ರೀ ಗುರುಬಸವ ಲಿಂಗಾಯ ನಮಃ ॥ ಶ್ರೀತೋಂಟದ ಸಿದ್ಧಲಿಂಗಾಯ ನಮಃ ॥ ರಾಘವಾಂಕಯ್ಯನವರ ಕಾವ್ಯ ಬರೆಯುದಕ್ಕೆ ಶುಭಮಸ್ತು ॥
ವಾರ್ಧಿಕ ॥

ಪಲ್ಲ ॥ ಶ್ರೀ ಪರಮಕೈಲಾಸದಿಂ ದಕ್ಷಿಣಾಸೆಯೊಳ
ಗಾ ಪುಣ್ಯ ಸುಕ್ಷೇತ್ರ ಪಂಚಾಖ್ಯನಗರದೊಳು
ಪಾಪನಾಶಂ ಕವೀಶಂ ರಾಘವೇಶ್ವರಂ ಮೆರವನಂ ಸಜ್ಜನರು ಮೆಚ್ಚೆ

× × × ×

ಪುರದ ಸಿಂಹಾಸನಾಧಿಪ ಸಿದ್ಧನಂಜೇಶ
ಚರಣಶತಪತ್ರ ಮಧುಕರ ಚಿಕ್ಕನಂಜೇಶ
ವಿರಚಿಸಿದ ರಾಘವಾಂಕನ ಕೃತಿಯು ಶಿವಭಕ್ತತತಿಯು ಘನ
ವಿಮಲ ಮತಿಯಾ ॥ ೨೧ ॥

ಅಂತ್ಯ : ಅವರ ಕಾಣುತ್ತೆ ಶ್ರೀ ಭಸಿತ ರುದ್ರಾಕ್ಷಿಗಳ
ಶಿವಲಿಂಗವುಮನಡಕೆಗೈಯ್ಯುತ್ತೆ ಕೊಲ್ಲಟಿಗ
ಸವನಂತ್ತೆಯಾಡೊಂಬರೊಡತಿಯಹ ಚಿತ್ರವತಿಯೆಂಬ .. ..
.....................

ವಿಷಯ : ಕವಿ ರಾಘವಾಂಕನ ಚರಿತ್ರೆ.

ವಿಶೇಷ : ಅಸಮಗ್ರ ಕೃತಿ. ಶಿಥಿಲಪ್ರತಿ. ಸುಂದರ ಬರವಣಿಗೆ. ಇದರೊಂದಿಗೆ 'ಕರಣಹಸಿಗೆ' ಮುಂತಾದ ಕೃತಿಗಳಿವೆ.

—ಎಂಪಿಎಂ

## 651

| ಕೆ. ೮೩೪/೩ | ರಾಜನೀತಿ | ಭಾಮಿನೀಷಟ್ಪದಿ |
|---|---|---|
| ೧೫"×೧.೩" | ಕುಮಾರವ್ಯಾಸ | ಸು. ೧೪೩೦ |
| ೩೪–೪೩ ಪತ್ರ | ೬ ಪಂಕ್ತಿ | ೬೮ ಅಕ್ಷರ |

ಆದಿ : ರಾಜನೀತಿ ॥
ನಭಯಂಲೋಲಗದೊಳಂ ವಿರಿಂಚ್ಚಿ
ಪ್ರಭುವಿನನುಮತದಿಂದ ಧರಣೀ
ವಿಭು ಮಹಾಕ್ರತು ರಾಜಸೂಯವನೊಲಿದು ಕೈಕೊಂಡ್ಡಾ ॥ ಪ ॥

ಪದ ॥ ಕೇಳು ಜನಮೇಜಯ ಧರಿತ್ರೀ
ಪಾಲ ಖಾಂಡ್ಡಾವನದ ವಹ್ನಿ
ಜ್ವಾಲೆ ತೆಗದದು ಕೂಡೆ ಹೊಗದುದು ಹೊಸಮೆಳೆಯಾ
ಮೇಲೆಗಾಳಗದುಬ್ಬಿನಲಿ ಶಿರಿ
ಲೋಲ ಸಹಿತರ್ಜುನರು ವಿಕ್ರಮ
ದೇಳಿಗೆಯ ಪರಿತೋಷದಲಿ ಮರಳಿದರು ಪಟ್ಟಣಕೇ ॥ ೧ ॥

ಅಂತ್ಯ : ಕಳುಹಿದನು ಸುರಮುನಿಯನುದರದೊ
ಳಿಳಿದುದಂತಸ್ತಾಪ ಯುಗ್ಮದ
ಒಲುಹು ನೇನಡಿಗಡಿಗೆ ಕಂಪ್ಪಿಸಿ ಕೈಯ್ಯ ಗಲ್ಲದಲಿ

ವೊಲದೊಲದು ಬಿಡೆ ಭಾವದಲಿ ಕಳ
ವಳಿಸಿ ಹದುಳಿಸಿ ಮತ್ತೆ ಭೂಪತಿ
ತಿಲಕ ಚಿಂತಿಸಿ ನೆನವುತಿರ್ದ್ದನು ವೀರನರಯಣನಾ ॥ ೯೮ ॥
ರಾಜನೀತಿ ಸಂಪೂರ್ನ್ನ ಮಂಗಳಮಹಾಶ್ರೀ.

**ವಿಷಯ :** ಭಾರತದಲ್ಲಿ ಧರ್ಮಜನು ರಾಜಸೂಯಯಾಗವನ್ನು ಕೈಗೊಂಡ ವಿವರ.

**ವಿಶೇಷ :** ಸಮಗ್ರ, ಬರಹ ಚೆನ್ನಾಗಿದೆ. ಕೆಲವು ಗರಿಗಳಿಗೆ ಹುಳು ಹೊಡೆದಿದೆ. ಇದೇ ಕಟ್ಟಿನಲ್ಲಿ ವಿದುರನೀತಿ, ಐರಾವತ, ಶಕುನಫಲ ಮೊದಲಾದ ಇತರ ಎಂಟು ಕೃತಿಗಳಿವೆ.

—ಕೆಆರ್‌ಎಸ್

## 652

| ಕೆ. ಎ. ೫೮೬/೮ | **ರಾಜನೀತಿ** | ಭಾಮಿನೀಷಟ್ಪದಿ |
|---|---|---|
| ೧೧.೫"×೭.೯" | ಕುಮಾರವ್ಯಾಸ | ಸು. ೧೪೩೦ |
| ೧೧೨–೧೧೯ ಪತ್ರ | ೨೩ ಪಂಕ್ತಿ | ೨೫ ಅಕ್ಷರ |

**ಆದಿ :** ಶುಭಮಸ್ತು ॥ ರಾಜನೀತಿ ಬರೆಯುವವಕ್ಕೆ ನಿರ್ವಿಘ್ನಮಸ್ತು ॥
ಸಭೆಯೊಳೋಲಗದಲಿ ವಿರಿಂಚಿ
ಪ್ರಭುವಿನನುಮತದಿಂದ ಧರಿಣೀ
ವಿಭುಂ ಮಹಾಕ್ರತು ರಾಜಸೂಯ್ಯವನೊಲಿದು ಕೈಕೊಂಡಾ ॥

ಪದನು ॥ ಕೇಳು ಜನಮೇಜಯ ಧರಿತ್ರೀ
ಪಾಲ ಖಾಂಡಾವನದ ವನ್ಹಿ
ಜ್ವಾಲೆ ತೆಗದುದು ಕೂಡೆ ಹೊಗದುದು ಹೊದರ ಹೊಸಮೆಳೆಯಾ
ಮೇಲುಗಾಳಗದುಬ್ಬಿನಲಿ ಸಿರಿ
ಲೋಲಸಹಿತರ್ಜುನನು ವಿಕ್ರಮ
ದೇಳಿಗೆಯ ಪರಿತೋಷದಲಿ ಮರಳಿ ಪಟ್ಟಣಕೆ ॥ ೧ ॥

**ಅಂತ್ಯ :** ಕಳುಹಿದನು ಸುರಮುನಿಯ ಉದರದೊ
ಳಿಳಿದು ದಂತಸ್ತಾಪಯಜ್ಞದ
ಬಲುಹ ನೆನದಡಿಗಡಿಗೆ ಕಂಪಿಸಿ ಕೈಯ್ಯ ಗಲ್ಲದಲಿ
ವೊಲದೊಲದುಬಿಡೆ ಭಾವದಲಿ ಕಳ
ವಳಿಸಿ ಹದುಳಿಸಿ ಮತ್ತೆ ಭೂಪತಿ
ತಿಲಕ ಚಿಂತಿಸಿ ನೆನಲುತಿದ್ದನು ವೀರನರಯಣನಾ ॥ ೧೧೯ ॥
ರಾಜನೀತಿ ಅಧ್ಯಾಯ ಸಮಾಪ್ತ ಮಂಗಳಮಹಾ ಶ್ರೀ.

ವಿಷಯ : ರಾಜನೀತಿ.

ವಿಶೇಷ : ಇದರೊಂದಿಗೆ ವಿವೇಕಚಿಂತಾಮಣಿ, ವಿದುರನೀತಿ ಮೊದಲಾದ ಕೃತಿಗಳಿವೆ.

—ವೈಸಿಬಿ

653

ಕೆ. ಬಿ. ೫೨೩/೯ ರಾಜನೀತಿ ಭಾಮಿನೀಷಟ್ಪದಿ

೮"x೬.೫" ಕುಮಾರವ್ಯಾಸ ಸು. ೧೪೩೦

೯೩–೯೬ ಪತ್ರ ೧೫ ಪಂಕ್ತಿ ೧೭ ಅಕ್ಷರ

ಆದಿ : ಶ್ರೀಗಣೇಶ ಶಾರದ ಗುರುಭ್ಯೋ ನಮಃ ॥ ರಾಜನೀತಿ ಬರಿಯುವದಕ್ಕೆ ನಿರ್ವಿಘ್ನಮಸ್ತು ॥

ಶ್ರೀರಾಮ ॥ ಸಭೆಯಲೋಲಗದೊಳು ವಿರಿಂಚಿ
ಪ್ರಭುವಿನನುಮತದಿಂದ ಧರಣೀ
ವಿಭುಮವುಂತ್ರಕು ರಾಜಸೂಯ್ಯವನೊಲಿದು ಕೈಕೊಂಡ ॥
ಕೇಳು ಜನಮೇಜಯ ಧರಿತ್ರೀ
ಪಾಲ ಖಾಂಡಾವನದ ವಹ್ನಿ
ಜ್ವಾಲೆ ತೆಗದುದು ಕೂಡೆ ಹೊಗದದು ಅಂದರ ಹೊಸಮೆಳಯಾ
ಮೇಲುಗಾಳಗದುಬ್ಬಿನಲಿ ಸಿರಿ
ಲೋಲ ಸಹಿತರ್ಜುನನು ವಿಕ್ರಮ
ದೇಳಿಗೆಯ ಪರೆಣಷವರಳೆದನು ಪಟ್ಟಣಕೆ ॥ ೧ ॥

ಅಂತ್ಯ : ಹತ್ತುಸಾಪಿರ ಕೈ ಪ್ರಮಾಣ
ದಸ್ತುವಲೆಯದ ಮಣಿಯ ಶಿಲೆಗಳ
ತತ್ತವಣೆಗಳ ಕೆಕ್ಕೆವೆಳಗಿನಲಳಿಯಲಹರಿಗಳಾ
ಕೆತ್ತಿಶಿದ ನವಪದ್ಮರಾಗದ
ಭಿತ್ತಿಗಳ ವೈಢೂರ್ಯ ಶಿಲೆಗಳ
ಮತ್ತವಾರಣ ವರವಿಧಾನದಲೆಸದುದಾಸ್ಥಾನಾ ॥ ೧೪ ॥

ವಿಷಯ : ರಾಜನೀತಿ.

ವಿಶೇಷ : ಅಸಮಗ್ರ. ಇದರೊಡನೆ ಕೃಷ್ಣದಾನ ಮೊದಲಾದ ೧೨ ಕೃತಿಗಳಿವೆ.

—ಎಸ್‌ಎನ್‌ಕೆ

## 654

| | | |
|---|---|---|
| ಕ. ಬಿ. ೬೫೨/೩ | **ರಾಜಯೋಗ** | ಗದ್ಯ |
| ೧೨.೬″×೪.೨″ | ಚೆನ್ನಬಸವಣ್ಣ | ಸು. ೧೧೬೦ |
| ೩೭–೪೨ ಪತ್ರ | ೧೦ ಪಂಕ್ತಿ | ೪೩ ಅಕ್ಷರ |

**ಆದಿ :** ಶ್ರೀಪ್ರಭುದೇವರ ಶ್ರೀಪಾದವೆ ಗತಿ ॥ × × × ॥ ಚೆಂನಬಸವೇಶ್ವರ ದೇವರು ನಿರೂಪಿಸಿದ ರಾಜಯೋಗದ ವಚನ ಬರವುದಕ್ಕೆ ಶುಭಮಸ್ತು ॥ × ×॥
ಆತ್ಮಚಿತ್ತ ವೃತ್ಯತ್ಯ ಸ್ಥಿತಿ ಲಯ ॥ ಶಿವಯೋಗ ಸಿಂಮಂಧವನರಿದಿಹೆ ನೆಂದಡೆ ॥ ಹೇಳಿಹೆ ಕೇಳಿರಂಣ ॥ ದ್ರು ॥ ಪೃಥ್ವಿ। ಅಪ್ಪು। ತೇಜ। ವಾಯು। ಆಕಾಶ। ಪಂಚತತ್ವದ ವಿವರಂ ಪೇಳ್ವೆ ॥ ಮಜು। ಅಸ್ತಿ। ಚರ್ಮ। ಮಾಂಸ। ರುಧಿರೇಕು। ಶುಕ್ಲ। ಮೇಧಸ್ಸು। ಮೆಂಬ ಸಪ್ತ ದಾತು। ಅನಲದರ। ದೀದಹವು। ಶ್ರೋತ್ರ। ನೇತ್ರ। ಪ್ರಾಣ। ಜಿಂಹ್ವೆ। × × ×। ಸ್ಥಾನಂಗಳವಳಿದು। ಅಧ್ಯಾತ್ಮಿಕ।

**ಅಂತ್ಯ :** ಯಿಂಂನ್ನು ಮಹೇಶ್ವರನ ಸ್ಥಲಕ್ಕೆ। ಅಪ್ಪುವೆ ಅಂಗ। ಸ್ವಾದಿಷ್ಟವೆ ಚಕ್ರ। ಗುರುಲಿಂಗ। ನೀಲವರ್ನ। ಷಡುದಳ। × × ×। ಗ್ನಾನಶಕ್ತಿಯಿಂದ ನೋಡುವಡೀಗ। ಮಹೇಶ್ವರಸ್ತಲಕ್ಕೆ। ಪ್ರತಿಷ್ಟ್ಯಯುಂಬಕೃತಿ। ಆಕಲಿಗೆ। ಕಪುರ್ಗಸಿದ್ಯೆತ್ಯ। ತತ್ವ। ಮಕಾರವೆ ಬೀಜ। ಯ.........

**ವಿಷಯ :** ವೀರಶೈವ ವೇದಾಂತ.

**ವಿಶೇಷ :** ಅಸಮಗ್ರ ಕೃತಿ. ಬರವಣಿಗೆ ಸುಂದರವಾಗಿದೆ. ಶಿಥಿಲ ಪ್ರತಿ. ಇದರೊಂದಿಗೆ ‘ಕರಣಹಸಿಗೆ’ ಮುಂತಾದ ಕೃತಿಗಳಿವೆ. ೩೭ನೆಯ ಪತ್ರದಲ್ಲಿ ಕರಣಹಸಿಗೆಯ ಸ್ವಲ್ಪ ವಿಷಯ ಸೇರಿದೆ.

—ಎಂಪಿಎಂ

## 655

| | | |
|---|---|---|
| ಕ. ಬಿ. ೬೯೭/೭ | **ರಾಜಯೋಗ** | ವಚನ |
| ೬″×೮.೩″ | ಚೆನ್ನಬಸವಣ್ಣ | ಸು. ೧೧೬೦ |
| ೯ ಪತ್ರ | ೨೧ ಪಂಕ್ತಿ | ೨೨ ಅಕ್ಷರ |

**ಆದಿ :** ಶ್ರೀಗುರುಬಸವಲಿಂಗಾಯ ನಮಃ ॥ ಚೆಂನ್ನಬಸವದೇವರ ದಿವ್ಯಪಾದವೇ ಗತಿ ॥ ೦ ॥ ಚೆಂನ್ನಬಸವೇಶ್ವರ ದೇವರ ರಾಜಯೋಗಲು ॥ ವಚನ ॥ ಆತ್ಮಸ್ಥಿತಿ ಶಿವಯೋಗ ಸಮುಂದವ। ಅರಿದೆನೆಂದಡೆ। ಹೇಳಿವೆ ಕೇಳಿರಂಣಾ। ಪೃಥ್ವಿ। ಅಪ್ಪು। ತೆಪು। ವಾಯು। ಆಕಾಶವ್ಯೆಂಬ। ಪಂಚತತ್ವದ।

ವಿವರಮಂ ಪೇಳ್ವೆ ಆಸ್ತಿ । ಮಾಂಉಷ । ಚರ್ಮ್ಮ । ರುದಿರ । ಶುಕ್ಲ । ಮೆದಸ್ಸು । ಮಜ್ಜೆ ।ಯೆಂಬ ಸಪ್ತದಾತುವಿನ ।ಆದಾರದಿಂದ ಯಿಹಲು । × × × ಆತಂಗೆ ನಮೊ ನಮೊಯೆಂಬೆನಾಯ್ಯ ಕೂಡಲ ಚಂನ್ನಸಂಗಮದೇವಾ ॥ ೧ ॥

ಅಂತ್ಯ : ಆಕಲ್ಪಿತ ನಿತ್ಯನಿರಂಜನ । ನಿರವಾಯು ನಿರಕಾರ । ಪರಂಜೋತಿ ಲಿಂಗದಲ್ಲಿ । ಜಿವಾತ್ಮ ಲಿಂಗದುತ್ಪತ್ಯ । ಅಂತರಾತ್ಮನೆ ಗುರುವು । ಜಿವಾತ್ಮನೆ ಸಿಷ್ಯನು । ಪರಮಾತ್ಮನೆ ಲಿಂಗ ।ಯಿದು ಪ್ರಸಿದ್ಧವಾಕ್ಯ ।ನೊಡಿರೈ ।ಲಿಂಗದೊಳಗಣ ಬೀಜ । ಜೆಂಗಮ । ಜಂಗಮದ ಪ್ರಕಾಶವೆ ಗುರುಉ । × × × । ಯಿ ಆಂಡಜದೊಳಗಣ । ಬಾಲಕರೆತ್ತ ಬಲ್ಲರೊ । ಗುರು ಗೊಹೇಶ್ವರ ನಿಂಮ್ಮ ಮಹತ್ವವನೂ ॥ ೨೫ ॥ ಚಂನ್ನಬಸವೇಶದೆವರು ನಿರೂಪಿಸಿದ ರಾಜಯೋಗದ ವಚನ ಸಂಪೂರ್ನ್ನವಾಗಿ ।ಮುಗಿಯಿತು ಮಂಗಳ ಮಹಾ ಶುಭಂ ಭವತೂ ॥ ಶ್ರೀ ॥

ವಿಷಯ : ವೀರಶೈವ ವೇದಾಂತ.

ವಿಶೇಷ : ಕೃತಿ ಸಮಗ್ರ. ಪ್ರತಿ ಸುದೃಢ. ಮೋಡಿಯ ಬರವಣಿಗೆ. ಇದರೊಂದಿಗೆ ಮಿಶ್ರಷಟ್‌ಸ್ಥಲದ ವಚನ ಮುಂತಾದ ಕೃತಿಗಳಿವೆ.

—ಎಂಪಿಎಂ

## 656

| ಕ. ೭೯೫ | ರಾಜಶೇಖರದ ನುಡಿ | ಟೀಕು |
|---|---|---|
| ೯.೬" × ೧.೯" | ? | ? |
| ೧–೧೫೦ ಪತ್ರ | ೬ ಪಂಕ್ತಿ | ೪೦ ಅಕ್ಷರ |

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಶ್ರೀಗಣಾಧಿಪತಯ ನಮಃ ॥ ಶ್ರೀ ಸಿದ್ಧಲಿಂಗಪ್ರಸಂನ್ನಾ ॥ ಆನಗೊಡ ಮಠದಾ ಚರಂತ್ರ ಸಿಧಲಿಂಗಪ್ಪನೂ । ಭಕ್ತಿಯಿಂದ ಲಿಖಿಸಿದಾ ರಾಜಶೇಖರದ ತೃತೀಯಾಶ್ವಾಸದ ನುಡಿ ಬರವುದಕ್ಕೆ ಶುಭಮಸ್ತು ॥ × × ॥ ಕಂದಾ॥ಶ್ರೀಶೋಭಾ ಸಮೇತವಾದಾ। ಶರ್ವಾಣಿ । ಶಿವನ ಪತ್ನಿಯಾದ ಪಾರ್ವತಿದೇವಿಯಾ। ಹೃದೆಯ ಕುಶಿಶಯಾಹೃತ್ಕಮಲಕ್ಕೆ । ಹಂಸಂ । ಸೂರ್ಯನಾದಂಥ ನಿಜ ।ತಂನ ।ಸಂಮಂಧವಾದಾ । ಅಂಘ್ರಿಸೇವಕಾ । ಚರಣಕಿಂಕರರಾದಾ ।ಜನ । ಆತ್ಮರಾ ।ತಾಪಾಶಾ । ಸಂತಾಪಾಪೇಕ್ಷೆಗಳಂನ್ನು ಹರಂ । ಸಂಹ್ವರಿಸಿದಂಥಾ । ಪಶುಪತಿ ಬ್ರಂಹ್ಮಾದಿ ಪಶುಗಳಿಗೆ ವಡೆಯನಾದಂಥಾ । ಪರಮೇಶಂ। ಶ್ರೇಷ್ಠಕೊಡೆಯನಾದಂಥಾ। ಶಿವಲಿಂಗಂ ।ಪರಶಿವಲಿಂಗೇಶ್ವರನೂ ।ಆವಗಂ । ಯಲ್ಲಾಗಳೂ । ಯಂಮಂ। ನಂಮಂನೂ । ಪೊರಗೆ ಪಾಲಿಸಲಿ ॥ ೧ ॥

ಅಂತ್ಯ : ಆರನೇ ಆಶ್ವಾಸಂ ॥ ಕಂದಾ ॥ ಶ್ರೀ । ಶೋಭಸಮೇತವಾದ ನಗರಾಜ । ಪರ್ವತರಾಜನ । ಸುತೆ । ಪುತ್ರಿಯಾದ । ಪಾರ್ವತಾದೇವಿಯಾ । ಮಧೂರ್ಯ ವಾದ । ಆನನ ಮುಖವೆಂಬ । ವಿದುಬಿಂಬ । ಚಂದ್ರಬಿಂಬದ । ಚುಂಬನ । ವಕ್ತ್ರ ಸಂಯೋಗಕ್ಕೆ । ಸ್ವೀಕೃತ । ಅಂಗೀಕರಿಸಲ್ಪಟ್ಟ ಪಂಚಾನನಂ । ಐದು ಮುಖವನ್ನುಳ್ಳಂಥ । ಅಘದೋಷವೆಂಬ । ಮದಗಜ ಮದಕರಿಗೆ । ಪಂಚಾನನಂ। ಸಿಂಹ್ವನಾದಂಥಾ। ಶಿವಲಿಂಗಂ। ಪರಶಿವಲಿಂಗೇಶ್ವರನೂ। ಯುಮುಗೆ। ನಮುಗೆ । ಸೌಖ್ಯಮಂ । ಪರಿಣಾಮುಮಂನೂ । ಯಿಾಗೆ । ಪಾಲಿಸಲಿ ॥ ೧ ॥ ವಚನ ॥ ಆಗಳ್ ॥

ವಿಷಯ : ಸತ್ಯೇಂದ್ರಚೋಳರಾಜನ ಕಥೆ.

ವಿಶೇಷ : ಮೂರನೆಯ ಆಶ್ವಾಸದಿಂದ ಐದನೆಯ ಆಶ್ವಾಸ ಪೂರ್ತ ವ್ಯಾಖ್ಯಾನವಿದ್ದೂ ಆರನೆಯ ಆಶ್ವಾಸದ ಆರಂಭದ ಕಂದಪದ್ಯದ ವಿವರಣೆ ಮಾತ್ರವಿದೆ. ಈ ವ್ಯಾಖ್ಯಾನ ಷಡಕ್ಷರದೇವನಿಂದ ರಚಿತವಾದ ರಾಜಶೇಖರ ವಿಳಾಸವೆಂಬ ಗ್ರಂಥಕ್ಕೆ ಸೇರಿದ್ದಾಗಿದೆ. ಬಸವಪ್ಪೈಯ್ಯನ ಮಗ ಸಿದ್ಧಲಿಂಗಪ್ಪನು ಬರೆದ ವ್ಯಾಖ್ಯಾನವೆಂದು ಆಶ್ವಾಸದ ಅಂತ್ಯದಲ್ಲಿ ತಿಳಿದುಬರುತ್ತದೆ. ಪ್ರತಿ ಚೆನ್ನಾಗಿದೆ.

—ಕೆಆರ್‌ಎಸ್

## 657

| ಕೆ. ೬೫೭/೨ | ರಾಜಶೇಖರ ವಿಳಾಸ | ಚಂಪು |
|---|---|---|
| ೧೧.೪" × ೧.೯" | ಷಡಕ್ಷರದೇವ | ೧೬೫೦ |
| ೧೦೭–೧೨೧ ಪತ್ರ | ೧೧ ಪಂಕ್ತಿ | ೬೦ ಅಕ್ಷರ |

ಆದಿ : ಮಿಗೆ ಬಸವಳಿದಿಂತಿಪ್ಪುದುಚಿತವೆ ಸುಕುಮಾರಾ ॥ ೧೧೫ ॥
ಸರಿವರೆಯುದ ಮಕ್ಕಳಂ । ಕರನೆಲ್ಲಿದ ನಾಡಲೆಂದು ಬೆಸಗೊಳಲೆನೆಂದಿರದೆ
ಮರು ಮಾತುಗೊಟ್ಟಪೆ । ಸರಸನ ಹಯದಿಂದೆ ಮಡಿದೆನೆಂಬೆನೆ ಮಗನೆ ॥

ಅಂತ್ಯ : ಜಯ ಜಯ ಸಂದಕ್ಷಿಣಾಮೂರ್ತಿ ವಿಳಸಿತ ರೂಪ
ಜಯ ಜಯ...ರಿ ಬ್ರಹ್ಮ ವ್ಯಗ್ಯ ಪರತರಲಿಂಗ
ಜಯ ಜಯದಾಮ್ನಾಯಗೇಯ ಮಹಿಮೋತ್ತುಂಗ
ಜಯ ಜಯ.........

ವಿಷಯ : ಸತ್ಯೇಂದ್ರಚೋಳನ ಕಥೆ.

ವಿಶೇಷ : ಅಸಮಗ್ರ ಕೃತಿ. ಆದಿ ಅಂತ್ಯಗಳಿಲ್ಲ. ೧೩ನೆಯ ಸಂಧಿಯ ೧೧೫ನೇ ಪದ್ಯ ಕೊನೆಯ ಚರಣದಿಂದ ಪ್ರಾರಂಭವಾಗಿ ೧೪ನೆಯ ಸಂಧಿಯ ೧೬೯ನೇ

ಪದ್ಯವಾದ ಮೇಲೆ ಬರುವ ಲಲಿತ ರಗಳೆಯಲ್ಲಿ ಸ್ವಲ್ಪ ಭಾಗ ಇದೆ. ಗರಿಗಳ ತುಂದಿ ಮುರಿದಿದೆ. ಶಕಟರೇಫ ಪ್ರಯೋಗವಿಲ್ಲ. ಇದೇ ಕಟ್ಟಿನಲ್ಲಿ ಪ್ರಭು ದೇವರ ವಚನಗಳು ಮತ್ತು ವೇದಮಂತ್ರಗಳಿರುವ ಕೆಲವು ಗರಿಗಳಿವೆ.

—ಎಸ್ ಎನ್ ಕೆ

## 658

ಕೆ. ೭೮೧ ರಾಜಶೇಖರ ವಿಳಾಸ ಚಂಪೂ

೧೨.೩″ × ೧.೯″ ಷಡಕ್ಷರದೇವ ೧೬೫೦

೯೦–೧೮೧ ಪತ್ರ ೧೧ ಪಂಕ್ತಿ ೫೪ ಅಕ್ಷರ

ಆದಿ: ಶ್ರೀ ಗುರು ಬಸವಲಿಂಗಾಯ ನಮಃ । ಷಡಕ್ಷರಿದೇವ ನಿರೂಪಿಸಿದ ರಾಜ ಶೇಖರವಿಳಾಸ ಬರವ್ರುದಕ್ಕೆ ಶುಭಮಸ್ತು । ಶೋಭನಮಸ್ತು ॥

ವೃತ್ತ ॥ ಶ್ರೀ ಶೈಲಾದಿ ಪ್ರಸಿದ್ಧಂ ಸುರುಚಿರ ವಿಜಯಸ್ತುತ್ಯ ನುದ್ರಿಕ್ತ ಸತ್ವಾ
ವೇಶಂ ಕಲ್ಯಾಣಂ ಭೂಭೃತ್ಸದನ ಧನದಮಿತ್ರಂ ಧರಾಧಾರಧರ್ಮಂ
ವೈಶದ್ಯಜ್ಯೋತಿ ಚಂದ್ರೋಪಲಸಿತ ಭಸಿತಾನಂತ ಕಾಂತೋತ್ತಮಾಂಗಂ
ಶ್ರೀ ಶೈವಶ್ರೇಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ
॥ ೨ ॥

ನಿಜನೇತ್ರಂ ಲೋಕನೇತ್ರಂ ನಿಜಭರಣಮಿಳಾಚಕ್ರಭಾರಾವಹಂ ಮೇ
ಣ್ನಿಜವಾಹಂ ಧರ್ಮಗೇಹಂ ನಿಜಧನುಧನುಜಾರಾತಿ ಜಾತಾದಿವಾಸಂ
ನಿಜರೂಪಂ ವಿಶ್ವರೂಪಂ ನಿಜರಮಣಿ ಜಗನ್ಮಂಡಳಿ ಮಾತೆ ನಿಚ್ಚಂ
ನಿಜಮಾದಂ ಸುಪ್ರಮೋದಂ ಕುಡಗೆಮಗತುಳ ಶ್ರೇಯಮಂ ಶೈಲಜೇಶಂ
॥ ೩ ॥

ಅಂತ್ಯ: ಶ್ರೀಮನ್ನೆಂದನ ಭಾಸಿ ಸಂಗತ ಮಹಾಪರ್ಣಾ ಶ್ರಿತರಂಗಂ ಸದಾ
ವ್ಯಾಮೋದಪ್ರದ ಸೌಮನಸ್ಯ ಮದ್ನಿಚ್ಛಾಯಂ ಶುಕಾ ಸದ್ವಿಜ
ಸ್ತೋಮಂ ಪ್ರೇಮಕರಂ ಕುವೃತ್ತಿ ರಹಿತಂ ಸರ್ವಾಘಮೌಘಸ್ತುತಂ
ಸ್ವಾಮಿಂ ಶ್ರೀ ಶಿವಲಿಂಗಪಿಾಗೆಮಗಮತ್ರ್ಯೋರ್ವಿಜಮಿಷ್ಟಾರ್ಥಮಂ
॥ ೮೪ ॥

ಸುರಚಿರ ಶಾಲಿವಾಹನ ಶಕಾನ್ವಿತ ರತ್ನ ಸಮುದ್ರ ಬಾಣ ಭೂ
ಪರಿಗಣನಾಂಕ ಬಂಧುರ ಜಯಾಬ್ಧದ ಮಾಗದ ಶುದ್ಧಪಕ್ಷ ವಿ
ಸ್ಫುರಿತ ತೃತೀಯೆಯಲ್ಲಿ ಬುಧವಾರದೊಳೀಕೃತಿ ಪೂರ್ಣವಾಯ್ತು ಶಂ
ಕರಶಿವಲಿಂಗದಂಘ್ರಿ ಕೃಪೆಯಿಂದೆ ಷಡಕ್ಷರಿದೇವ ನಿರ್ಮಿತಂ ॥ ೮೫ ॥
ಮಿಂದುಮಿನಮುದಮರವರ ಮಕುಟ ತಟಗಟಿತ ಮಣಿಗಣ ಮಹಾಪ್ರಭಾ
ಪಟಲ ಪರಿವೃತ ಪರಶಿವ ಶ್ರೀಪಾದ ನಖಚಂದ್ರ ಸಾಂದ್ರ ರುಚಿರುಂದ್ರ

ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀ ಷಡಕ್ಷರಿ ದೇವ ವಿರಚಿತ ಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂದದೊಳ್ಪರಮೇಶ್ವರ ಪ್ರಸನ್ನತಾತದಾಸ್ಥಾನ ವರ್ಣನಂ ಚತುರ್ದಶಾಶ್ವಾಸಂ ಮಂಗಳಮಸ್ತು ಅಂತು ಆಶ್ವಾಸ ೧೪ಕ್ಕಂ ವೃತ್ತ ಕಂದ ಸಹ ೧೮೬೬ಕ್ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ

**ವಿಷಯ :** ಸತ್ಯೇಂದ್ರಚೋಳನ ಕಥೆ.

**ವಿಶೇಷ :** ಕೃತಿ ಸಮಗ್ರ, ಸ್ಫುಟಾಕ್ಷರ. ಇದರೊಡನೆ ಶಬರಶಂಕರವಿಲಾಸವೂ ಇದೆ. ಕಟ್ಟಿನ ಆದಿಯಲ್ಲಿ ಕನ್ನಡ ವ್ಯಾಕರಣಕ್ಕೆ ಸಂಬಂಧಪಟ್ಟ ಒಂದು ಗರಿ ಮತ್ತು 'ವೇತಾಳನ ಕಟ್ಟು' ಮಂತ್ರಶಾಸ್ತ್ರಕ್ಕೆ ಸಂಬಂಧಪಟ್ಟ ಒಂದು ಗರಿ ಇದೆ. ಕಟ್ಟಿನ ಕೊನೆಯಲ್ಲಿ ಬರೆಯುವಾಗ ಕೆಟ್ಟುಹೋದ ಕೆಲವು ಓಲೆಗಳಿವೆ. ಒಂದು ಗರಿಯಲ್ಲಿ ಪೂಜಾಸಂಕಲ್ಪ ಕ್ರಮವಿದೆ.

—ಎಸ್‌ಎನ್‌ಕೆ

## 659

| ಕೆ. ೭೮೪ | ರಾಜಶೇಖರ ವಿಳಾಸ | ಚಂಪು |
|---|---|---|
| ೧೪.೨''×೧.೯'' | ಷಡಕ್ಷರದೇವ | ೧೬೫೦ |
| ೧–೬೧ ಪತ್ರ | ೬ ಪಂಕ್ತಿ | ೫೬ ಅಕ್ಷರ |

**ಆದಿ :** ಶ್ರೀ ಶಾರದಾ ಕುಮಾರ ಗುರುಭ್ಯೋ ನಮಃ । ಶ್ರೀ ಆನಗೊಡ ಸಿದ್ಧೇಶ್ವರಾಯ ನಮಃ । ಶ್ರೀ ವಿಘ್ನೇಶ್ವರಾಯ ನಮಃ । ಶ್ರೀ ಮುರಿಗಾ ಜಗದ್ಗುರವೇ ನಮಃ । ಶ್ರೀ ಶುಭಮಸ್ತು ॥ ಶ್ರೀರಸ್ತು ॥ ಶ್ರೀಮದ್ಘನಲಿಂಗ ಚಕ್ರವರ್ತಿಗಳಾದ ಆನಗೊಡ ಮಠದ ಚರಂತ್ತಿದೇವರ ಪೌತ್ರಿಕನಾದ ಸಿದ್ಧಲಿಂಗಪ್ಪನು ವೋದಿಕೊಳ್ಳುವದಕ್ಕೆ ಬರಕೊಂಡ ರಾಜಶೇಖರವಿಲಾಸ ಪುಸ್ತಕಕ್ಕೆ ಶುಭಮಸ್ತು ॥ ಆಚಂದ್ರಾರ್ಕಮಸ್ತು ॥ ಶ್ರೀರಸ್ತು ॥
ಸ್ರಗ್ಧರವೃತಂ ॥

ಶ್ರೀ ಶೈಲಾದಿ ಪ್ರಸಿದ್ಧಂ ಸುರಚಿರ ವಿಜಯಸ್ತುತ್ಯನುದ್ರಿಕ್ತನತ್ವಾ
ವೇಶಂ ಕಲ್ಯಾಣ ಭೂಭೃತ್ಸದನ ಧನದ ಮಿತ್ರಧರಾಧಾರ ಧರ್ಮಂ
ವೃಶವ್ಯ ಜ್ಯೋತಿ ಚಂದ್ರೋಫಲಸಿತ ಭಸಿತಾನಂತಕಾಂತೋತ್ತಮಾಂಗಂ
ಶ್ರೀಶೈವಶ್ರೈಯಮಂ ಮಾಳ್ಕೆಮಗೆ ಸವರತಂ ನಂದಿಕೇಶಂ ಮಹೇಶಂ ॥ ೧ ॥
ನಿಜನೇತ್ರಂ ಲೋಕನೇತ್ರಂ ನಿಜಭರಣವಿಳಾಚಕ್ರ ಭಾರಾವಹಂ ಮೇಣ್
ನಿಜವಾಹಂ ಧರ್ಮಗೇಹಂ ನಿಜಧನುದನುಜಾರಾತಿಜಾತಾದಿ ವಾಸಂ ।

ನಿಜರೋಪಂ ವಿಶ್ವರೋಪಂ ನಿಜರಮಣಿ ಜಗನ್ಮಂಡಳಿ ಮಾತೆ ನಿಚ್ಚಂ
ನಿಜಮಾದಂ ಸಂಪ್ರಮೋದಂ ಕೊಡುಗೆಮಗತುಳ ಶ್ರೇಯಮಂ ಶೈಲಜೇಶಂ
॥ ೨ ॥

ಅಂತ್ಯ: ಮಾತೆ ಮಹಿದ್ರು ಜಾತೆ ಮಹನೀಯ್ಯ ಸುರಾಸುರ ಸೇವ್ಯಪಾದ ಕಂ
ಜಾತೆ ಕಳಾಪ್ರಣೀತೆ ಕಮನೀಯ್ಯಕಟಾಕ್ಷ ಸುರಕ್ಷಿತಾಮರ
ವ್ರಾತೆ ರಸಾದಿ ಭೂತೆ ರಮಣೀಯ್ಯರಮಾರುತಿ ಮುಖ್ಯ ಶಕ್ತಿ ವಿ
ಖ್ಯಾತೆ ವಿನೀತೆ ಭೂತಪತಿವಲ್ಲಭೆ ಪಾಲಿಪುದೆಂನನಂಬಿಕೇ ॥ ೧೩೪ ॥
ಗದ್ಯಾ ॥ ಮಿದು ವಿನಮದಮರ ವರ ಮಕುಟತಟ ಘಟಿತ ಮಣಿಗಣ
ಮಹಾಪ್ರಭಾ ಪಟಲ ಪರಿವೃತ ಪರಶಿವ ಶ್ರೀಪಾದ ನಖಚಂದ್ರ ಸಾಂದ್ರ
ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋ
ಭೂಯ ಕವಿತಾವಿಶಾರದ ಶ್ರೀ ಷಡಕ್ಷರದೇವ ವಿರಚಿತಮಪ್ಪ ರಾಜಶೇಖರ
ವಿಳಾಸ ವಿಪುಳ ಪ್ರಬಂದದೊಳ್ಕಿರಾತ ದೂತಾಗಮನ ಮೃಗಾಯ
ವರ್ಣನಂ ಪಂಚಮಾಶ್ವಾಸಂ ಸಮಾಪ್ತಂ । ಮಂಗಳ ಮಹಾ ಶ್ರೀ ಶ್ರೀ ಶ್ರೀ॥
ಶ್ರೀ ಸಾಂಬಾಯ ನಮಃ। ಶ್ರೀಯೂನ್ಗೋಡ ಮಠದ ಚರಂತ
ಸಿಧಲಿಂಗಪ್ಪನು ಲಿಖಿಸಿದ ರಾಜಶೇಖರ ಪುಸ್ತಕಕ್ಕೆ ಶುಭಮಸ್ತು
ಶ್ರೀ ನಗರಾಜ ಸುತ ಮಧು
ರಾನನ ವಿಧುಬಿಂಬ ಮಂಬನ ಸ್ವೀಕೃತ ಪಂ
ಚಾನನನಗ್ರ ಮದಗಜ ಪಂ
ಚಾನನನೆಮಗೀಗೆ ಸೌಖ್ಯಮಂ ಶಿವಲಿಂಗಾ ॥ ೧ ॥

ವಿಷಯ : ಸತ್ಯೇಂದ್ರಚೋಳನ ಕಥೆ.

ವಿಶೇಷ : ಶಕಟರೇಫ ಬಳಕೆ ಇಲ್ಲ. ಗ್ರಂಥ ಸಮಗ್ರ. ಸ್ಫುಟಾಕ್ಷರ. ಆದಿಯಲ್ಲಿ ಕೆಲವು ಗರಿಗಳ ಒಂದು ಪಾರ್ಶ್ವ ಹುಳು ತಿಂದು ಮಧ್ಯೆ ಮಧ್ಯೆ ಗ್ರಂಥಲೋಪ ವಾಗಿದೆ. ೫೦ನೇ ಗರಿಯ ಹಿಂಭಾಗದಲ್ಲಿ ಗ್ರಂಥಭಾಗವಿಲ್ಲದೆ 'ತೆಳು ಪುಟ ಬರಿಯಲಿಲ್ಲ' ಎಂದಿದೆ. ಇದರಂತೆಯೆ ೫೧, ೫೩, ೫೭ ಈ ಮೂರು ಗರಿ ಗಳಲ್ಲೂ ಒಂದೇ ಕಡೆ ಒರವಣಿಗೆ ಇದೆ.

—ಎಸ್‌ಎನ್‌ಕೆ

## 660

ಕೆ. ೧೧೮೫ — ರಾಜಶೇಖರ ವಿಳಾಸ — ಚಂಪು
೧೬.೩" x ೩" — ಷಡಕ್ಷರದೇವ — ೧೬೫೦
೧-೨೪೩ ಪತ್ರ — ೭ ಪಂಕ್ತಿ — ೫೩ ಅಕ್ಷರ

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಶ್ರೀ ಸಿದ್ಧಲಿಂಗಾಯ ನಮಃ ॥

ಷಡಕ್ಷರಿ ದೇವರು ನಿರೂಪಿಸಿದ ರಾಜಶೇಖರ ವಿಳಾಸವ ಬರೆವುದಕ್ಕೆ ಶುಭಮಸ್ತು ॥ ಶೋಭನಮಸ್ತು ॥

ವೃ ॥ ಶ್ರೀ ಶೈಲಾದಿ ಪ್ರಸಿದ್ಧಂ ಸುರಚಿರ ವಿಜಯಸ್ತುತ್ಯನುದ್ರಿಕ್ತ ಸತ್ವಾ
ವೇಶಂ ಕಲ್ಯಾಣ ಭೂಭೃತ್ಸದನ ಧನದ ಮಿತ್ರಂ ಧರಾಧಾರ ಧರ್ಮಂ
ವೈಶದ್ಯದ್ಯೋತಿ ಚಂದ್ರೋಪಲಸಿತ ಭಸಿತಾನಂತ ಕಾಂತೋತ್ತಮಾಂಗಂ
ಶ್ರೀ ಶೈವ ಶ್ರೇಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ
॥ ೧ ॥

**ಅಂತ್ಯ :** ಭೂರಿಸುರ ಸಸಿವೃತ ಚರಣಂ ಪಂಕಜಾಸನ ಮಸ್ತಕಪಾಣೀ
ದಾರಶಾಶ್ವತ ಕಾರಣಮೂರ್ತಿ ವಾಮಭಾಗ ವಿಭೂಷಿ ವಿಷ್ಣು
ಧೀರ ಧೀರತಿ ವರ್ಣವಿಲಾಸ ಸಂನೀರಜಾಕ್ಷಿಮುದ್ರುಕಾಂತಂ ಪಾದಂ
ಸಾರಶಂಕರ ಕೃಪಾನಿಧಿ ಶಂಭು ರಕ್ಷಿಸೈ ಮಹೀನಂತ ಚರಿತಂ ॥ ೧೮೫ ॥
ಸುರಚಿರ ಶಾಲಿವಾಹನ ಶಕಾನ್ವಿತ ರತ್ನಸಮುದ್ರ ಬಾಣಭೂ
ಪರಿಗಣನಾಂಕ ಬಂಧುರ ಜಯಾಬ್ದದ ಮಾಘದ ಶುದ್ಧಪಕ್ಷ ವಿ
ಸ್ಫುರಿತ ತ್ರುತೀಯೈಯೆಲ್ಲಿ ಬುಧವಾರದೊಳೀ ಕೃತಿ ಪೂರ್ಣಮಾಯ್ತು ಶಂ
ಕರ ಶಿವಲಿಂಗದಂಘ್ರಿ ಕೃಪೆಯಿಂದೆ ಷಡಕ್ಷರಿದೇವ ನಿರ್ಮಿತಂ ।

ಗದ್ಯ : ಯಿದಂ ವಿನಮದಮರ ವರ ಮಕುಟಕಟ ಘಟಿತ ಮಣಿಗಣ ಮಹಾಪ್ರಭಾ ಪಟಲ ಪರಿವೃತ ಪರಶಿವ ಶ್ರೀ ಪಾದ ನಖ ಚಂದ್ರಾಸಾಂದ್ರರುಚಿರುಂದ್ರ ಚಂದ್ರಿಕಾ ಚಂಚಚ್ಚಕಾರಾಯಮ ಮಾನಸರಸ ಜಿನಮಾನಿತಾ ಭಯಕವಿತಾ ವಿಶಾರದ ಶ್ರೀ ಷಡಕ್ಷರಿದೇವ ವಿಂಚಿತಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂಧದೊಳ್ ಪರಮೇಶ್ವರಂ ಪ್ರಸಂನ ತಾತದಾಸ್ಥಾನ ವರ್ಣನಂ ಚತುರ್ದಶಾಶ್ವಾಸಂ ಸಂಪೂರ್ಣ ಮಂಗಳ ಮಹಾ ! × × ×
ಅಂತು ಆಶ್ವಾಸ ೧೪ಕ್ಕಂ ಕಂದವೃತ್ತ ಸಹವಾದಿಗಣನೆ ೧೮೬೩ಕ್ಕಂ ಮಂಗಳ ಮಹಾ । ಈ ಪುಸ್ತಕ ಬರದವಂ ಹಿರೇಕೆರೆವೂರ ಶಟ್ರು ಜೇವರಿಗೆ–ವ– ಪಸಾರದ ಬಸಪ್ಪನ ಕುಮಾರನಾದ ಚಂನ ಬಸಪ್ಪನವರ ಕುಮಾರ ಹೊಳೆ ಬಸವಪ್ಪಗೆ ಶಾಲಿವಾಹನ ಶಕವರ್ಷ ೧೭೬೬ ನೆ ಪ್ರವರ್ತಮಾನಕ್ಕೆ ಸಲ್ಲುವ ಕ್ರೋಧಿನಾಮ ಸಂವತ್ಸರದ ನಿಜಶ್ರಾವಣ ಬ ೧೪ ಬುಧವಾರ ಘಳಿಗೆ ೧೭ಕ್ಕೆ ಸಮಾಪ್ತಿ ಮಾಡಿ ಬರದುಕೊಟ್ಟ ಪುಸ್ತಕಕ್ಕೆ ಆ ಚಂದಾರ್ಕ ಐಶ್ವರ್ಯಮಸ್ತು ॥

**ವಿಷಯ :** ಸತ್ಯೇಂದ್ರ ಚೋಳನ ಕಥೆ.

ವಿಶೇಷ : ಗ್ರಂಥ ಸಮಗ್ರವಾಗಿದೆ. ಸುಂದರವಾದ ಸ್ಫುಟವಾದ ಅಕ್ಷರ. ಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ವೈಸಿಬಿ

## 661

ಕೆ. ೧೨೫೫ ರಾಜಶೇಖರ ವಿಳಾಸ ಚಂಪು

೧೦.೫'' x ೧.೬'' ಷಡಕ್ಷರದೇವ ೧೬೫೦

೧–೨೨೫ ಪತ್ರ ೯ ಪಂಕ್ತಿ ೪೮ ಅಕ್ಷರ

ಆದಿ : ಶ್ರೀ ಗಣಾದಿಪತಯೇ ನಮಃ ॥ ಶ್ರೀ ಶಿವಲಿಂಗಾಯ ನಮಃ ॥ ಖರನಾಮ ಸಂವತ್ಸರದಲ್ಲಿ ಅಧಿಕ ವೈಶಾಖ ಬಹುಳ ೧೧ಲ್ಲೂ ರಾಜಶೇಖರವಿಳಾಸ ಬರೆಯುವದಕ್ಕೆ ಶುಭಮಸ್ತು ॥ ನಿರ್ವಿಘ್ನಮಸ್ತು ॥
ಶ್ರೀಶೈಲಾದಿಪ್ರಸಿದ್ಧಂ ಸುರುಚಿರ ವಿಜಯಸ್ತುತ್ಯಮದ್ವೈತ ಸತ್ವಾ
ವೇಶಂ ಕಲ್ಯಾಣ ಭೂಭೃತ್ಸದನಂ ಧನದ ಮಿತ್ರಂ ಧರಾಧಾರ ಧರ್ಮಂ
ವೈಶದ್ಯದ್ಯೋತಿ ಚಂದ್ರೋಪಲಸಿತ ಭಸಿತಾನಂತಕಾಂತೋತ್ತಮಾಂಗಂ
ಶ್ರೀಶೈವಶ್ರೇಯಮಂ ಮಾಳ್ಕೆಮಗನವರತಂ ನಂದಿಕೇಶಂ ಮಹೇಶಂ ॥ ೧ ॥

ಅಂತ್ಯ : ಸುರುಚಿರ ಶಾಲಿವಾಹನ ಶಕ ಸಮುದ್ರ ಬಾಣದಾಂ
ಪರಿಗಣನಾಂಕಮಬ್ಧದ ಮಾಘ ಶುದ್ಧ ಪಕ್ಷ ವಿ
ಸ್ಫುರಿತ ತೃತೀಯೆಯಲ್ಲಿ ಬುಧವಾಸರದೊಳೀ ಕೃತಿ ಪೂರ್ಣಮಾಯ್ತು ಶಂ
ಕರ ಶಿವಲಿಂಗದಂಘ್ರಿ ಕೃಪೆಯಿಂದ ಷಡಕ್ಷರಿದೇವ ನಿರ್ಮಿತಂ ॥ ೧೮೫ ॥

ಗದ್ಯ ॥ ಯಿದು ವಿನಮದಮರ ವರ ಮಕುಟತಟಘಟಿತ ಮಣಿಗಣ ಮಹಾ ಪ್ರಭಾ ಪಟಲ ಪರಿವೃತ ಪರಶಿವ ಶ್ರೀಪಾದ ನಖಚಂದ್ರಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯ ಮಾನಸರಸಜನಮಾನಿತೋಭಯ ಕವಿತಾ ವಿಶಾರದ ಶ್ರೀ ಷಡಕ್ಷರೀದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್ಪರಮೇಶ್ವರ ಪ್ರಸನ್ನತದಾಸ್ಥಾನವರ್ಣನಂ ಚತುರ್ದಶಾಶ್ವಸಂ॥ ಅಂತು ಆಶ್ವಾಸ ೧೪ಕ್ಕಂ ಪದ್ಯ ೧೪೬೭ಕ್ಕೆ ಜಯಮಂಗಳ ಮಹಾ ಶ್ರೀ × × ×

ವಿಷಯ : ಸತ್ಯೇಂದ್ರ ಚೋಳನ ಕಥೆ.

ವಿಶೇಷ : ಸಮಗ್ರ. ಪ್ರತಿ ಉತ್ತಮ ಸ್ಥಿತಿಯಲ್ಲಿದೆ.

—ವೈಸಿಬಿ

## 662

ಕೆ. ಎ. ೫೭೬/೧ | **ರಾಜಶೇಖರ ವಿಳಾಸ** | ಚಂಪು

೮" × ೧೧.೫" | ಷಡಕ್ಷರದೇವ | ೧೬೫೦

೧–೧೯೧ ಪತ್ರ | ೧೯ ಪಂಕ್ತಿ | ೨೪ ಅಕ್ಷರ

**ಆದಿ :** ಶ್ರೀ ಗಣೇಶ ಶಾರದ ಗುರುಭ್ಯೋನಮಃ ॥ × × × ×
ವಿರೋಧಿಕೃತ್ಸಂವತ್ಸರದ ಫಾಲ್ಗುಣ ಶು ೫ ಬುಧವಾರದಲ್ಲೂ ರಾಜಶೇಖರ
ವಿಳಾಸವ ಬರೆವುದಕ್ಕೆ ನಿರ್ವಿಘ್ನಮಸ್ತು ॥ × × × × ॥
ಶ್ರೀ ಶೈಲಾದಿ ಪ್ರಸಿದ್ಧಂ ಸುರುಚಿರ ವಿಜಯಂ ಸ್ತುತ್ಯನುದ್ರಿಕ್ತ ಸತ್ವಾ
ವೇಶಂ ಕಲ್ಯಾಣ ಭೂಭೃತ್ಸದನ ಧನದ ಮಿತ್ರಂ ಧರಾಧಾರಧರ್ಮಂ
ವೈಶದ್ಯದ್ಯೋತಿ ಚಂದ್ರೋಪಲಸಿ ಭಸಿತಾನಂತ ಕಾಂತೋತ್ತಮಾಂಗಂ
ಶ್ರೀ ಶೈವ ಶ್ರೇಯಮಂ ಮಾಳ್ಕೆಮಗಸವರತಂ ನಂದಿಕೇಶಂ ಮಹೇಶಂ
॥ ೧ ॥

**ಅಂತ್ಯ :** ॥ ಗದ್ಯ ॥
ಯಿದು ವಿನಮದಮರ ವರ ಮಂಕುಟ ತಟ ಘಟಿತ ಮಣಿಗಣ ಮಹಾ
ಪ್ರಭಾ ಪಟಲ ಪರಿವೃತ ಪರಶಿವ ಶ್ರೀಪಾದ ನಖಚಂದ್ರ ಸಾಂದ್ರ ರುಚಿ
ರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಜನಮಾನಿತೋಭಯ
ಕವಿತಾ ವಿಶಾರದ ಶ್ರೀ ಷಡಕ್ಷರಿದೇವ ವಿರಚಿತಮಪ್ಪ ರಾಜಶೇಖರವಿಳಾಸ
ವಿಪುಳ ಪ್ರಬಂಧನೊಳ್ ಪರಮೇಶ್ವರ ಪ್ರಸನ್ನ ತದಾಸ್ಥಾನ ವರ್ಣನಂ
ಚತುರ್ದಶಾಶ್ವಾಸಂ। ಅಂತು ಅಶ್ವಾಸ ೧೪ಕ್ಕಂ ಪದ್ಯ ೧೮೬೫ಕ್ಕಂ ಇತಿ
ರಾಜಶೇಖರ ವಿಳಾಸ ಸಂಪೂರ್ಣಂ ಮಂಗಳ ಮಹಾ ಶ್ರೀ। ಸ್ವಸ್ತಿಶ್ರೀ
ವಿಜಯಾಭ್ಯುದಯ ಶಾಲಿವಾಹನ ಶಕಾ ವರ್ಷಂಗಳು ೧೭೭೪ನೇ ಸಂದ
ವರ್ತ್ತಮಾನವಾದ ಪರಿಧಾವಿನಾಮ ಸಂವತ್ಸರದ ಜೇಷ್ಠ ಬ ೭ ಬುಧವಾರ
ದಲ್ಲು ಶ್ರೀ ಷಡಕ್ಷರಿದೇವ ವಿರಚಿತ ಶ್ರೀ ರಾಜಶೇಖರ ವಿಳಾಸ ಸಂಪೂರ್ಣ
ವಾಗಿ ಬರದಕ್ಕೆ ಶ್ರೀ ಭದ್ರಕಾಳಿ ಸಮೇತ ಶ್ರೀ ವೀರಭದ್ರಾರ್ಪಣಮಸ್ತು ॥

**ವಿಷಯ :** ಸತ್ಯೇಂದ್ರಚೋಳನ ಕಥೆ.

**ವಿಶೇಷ :** ಕೃತಿ ಸಮಗ್ರ ಮತ್ತು ಪ್ರತಿ ಸುದೃಢ. ಸುಂದರ ಬರೆವಣಿಗೆ. ಇದ
ರೊಂದಿಗೆ 'ಸೌಗಂಧಿಕಾ ಪರಿಣಯ' ವೆಂಬ ಇನ್ನೊಂದು ಕೃತಿ ಇವೆ.

—ಎಂಪಿಎಂ

663

ಕೆ. ೧೫೫೭ **ರಾಜಶೇಖರ ವಿಳಾಸದ ಕಠಿಣ ಶಬ್ದಾರ್ಥ** ಟೀಕು

೧೪"×೧.೭" ಷಡಕ್ಷರದೇವ ೧೬೫೦

೧–೪೬ ಪತ್ರ ೧೧ ಪಂಕ್ತಿ ೮೦ ಅಕ್ಷರ

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ॥ ರಾಜಶೇಖರ ವಿಳಾಸದ ಕಠಿಣ ಶಬ್ದಾರ್ಥಃ ಶ್ರೀ ಶೈಲಾದಿ। ಶ್ರೀಶೈಲ। ಮೊದಲಾದ। ಪರ್ವತಂಗಳಲ್ಲಿ। ಪ್ರಸಿದ್ಧ। ಭೂಷಿತನಾದಂಥ। ಪ್ರಸಿದ್ಧೌ ಖ್ಯಾತ ಭೂಷಿತೌ। ಇತ್ಯಮರಃ। ವಿಜಯ।....ಜಯಶಾತಿಥಾವಿತಿ ವಿಶ್ವಃ। ದುರಜೈತ್ರಾಭಯ ಪಾರ್ಥನಿಂತು ವಿಜಯಶಾಖ್ಯಂ ಯಿಂದಂ ನಾನಾರ್ಥಂ। ಉದ್ರಿಕ್ತ। ಹೆಚ್ಚಲ್ಪಟ್ಟ। ಅತಿರಿಕ್ತಃ ಸಮಧಿಕ। ಇತ್ಯಮರಃ। ವುತ್ಕೃಷ್ಟವಾದ। ಸತ್ವ। ಗಿರಿಜೆಯಂ। ಬಲಜೀವ ಚಯಂ ತ್ರಿಗುಣಾದಿಜಾತೆಯಿಂಬ ಸಘನಧಾತುವಾದ ಗಿರಿವಾಜಿ ಸತ್ವ ವಾಚಕವೆಂದು ನಾನಾರ್ಥಂ। ಆವೇಶ। ಪ್ರವೇಶವುಳ್ಳಂಥ। ಕಲ್ಯಾಣ ಭೂಭೃತ್। ಕನಕಾಚಲದಲ್ಲಿ। ಧನದ। ಕುಬೇರನೆ। ಮಿತ್ರಂ। ಸಖನಾಗಿ ವುಳ್ಳಂಥ ॥

**ಅಂತ್ಯ :** ಸಂಗತ। ಕೂಡಿದ। ಧಾವು। ಶರೀರವುಳ್ಳುದು। ಗೃಹದೇಹತ್ವಿ ಪ್ರಭಾವ ಧಾಮಾನಿತ್ಯಮರಃ। ಗಜವರ್ಣ। ರಂಚಿಕೆಯಿಂದೆ। ಪ್ರವೇಣ್ಯಾಸ್ಥರಣಂ ವರ್ಣಃ ಪರಿಸ್ತೋಮಃ ಕಥೋರ್ದ್ವಯೋಃ ಇತ್ಯಮರಃ। ಸಂಗತ। ಕೂಡಿದ। ಧಾಮ। ಶರೀರವುಳ್ಳುದು। ಗೃಹದೇಹತ್ವಿಟ್ಸ್ರಭಾವಧಾಮಾನಿತ್ಯಮರಃ। ಸಖೆ। ವರ್ಣ। ಅಕ್ಕರಗಳಿಂದೆ ವರ್ಣೋದ್ವಿಜಾದೌ ಶ ಕ್ಲದೌಸ್ತುತಾ ವರ್ಣಂತ ವಾಕ್ಷರೆ ಇತ್ಯಮರಃ। ಸಂಗತ। ಕೂಡಿದ। ಹರಿ। ಸೂರ್ಯಕುಲದ ರಾಜರ। ಧಾಮಂ। ಪ್ರಭಾವವುಳ್ಳುದು। ಗೃಹದೇಹತ್ವಿಟ್ಪ್ರಭಾವಧಾಮಾ ನಿತ್ಯಮರಃ। ದ್ವಾರಕಾವತಿಯು। ವುಜ್ವಲ। ಕರ। ಕಾಂತಿಯಿಂದೆ। ಅಂಚಿತ। ಪೂಜಿತವಾದ। ಸೂಚಿತೇಂಚಿತ ಇತ್ಯಮರಃ। ಪುಷ್ಕರ। ವುದಕ ದಲ್ಲಿ। ಕಾಂತಂ। ವೊಪ್ಪುವುದು। ಅಮರಾವತಿ। ವುಜ್ವಲ। ಬೆಳಗು ತ್ತಿರ್ದ। ಕರ। ಕಿರಣದಿಂದೆ। ಅಂಚಿತ। ಪೂಜಿತವಾದ। ಪುಷ್ಕರ। ಆಕಾಶ ದಲ್ಲಿ। ವ್ಯೋಮಪುಷ್ಕರಮಂಬರಮಿತ್ಯಮರಃ। ಕಾಂತಂ। ಮನೋಹರ ವಾದುದು। ಕಾಂತಂ ಮನೋಹರಂ। ರುಚ್ಯಂ॥ ಮನೋಜ್ಞಂ ಮಂಜು ಮಂಜುಲಮಿತ್ಯಮರಃ।

**ವಿಷಯ :** ರಾಜಶೇಖರವಿಳಾಸದ ಕ್ಲಿಷ್ಟಪದಗಳ ಅರ್ಥ.

**ವಿಶೇಷ :** ಅಸಮಗ್ರ.

—ವೈಸಿಬಿ

## 664

| ೧೬೮೧ | ರಾಜಶೇಖರ ವಿಳಾಸದ ವ್ಯಾಖ್ಯಾನ | ಟೀಕು |
|---|---|---|
| ೯.೭″×೨.೧″ | ಷಡಕ್ಷರದೇವ | ೧೬೫೦ |
| ೧–೧೧೩ ಪತ್ರ | ೧೨ ಪಂಕ್ತಿ | ೩೮ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ರಾಜಶೇಖರ ವಿಲಾಸದ ನುಡಿ ಬರವುದಕ್ಕೆ ಶುಭಮಸ್ತು ॥

ಶ್ರೀ ಶೈಲಾದಿ । ಶ್ರೀ ಶೈಲ ಮೊದಲಾದ ಪರ್ವತಗಳಲ್ಲಿ ಪ್ರಸಿದ್ಧ । ಪ್ರಖ್ಯಾತನಾದಂಥ । ವಿಜಯ । ಅರ್ಜುನನಂತೆ ಸ್ತುತ್ಯಂ । ನುತಿಸಲು ಯೋಗ್ಯನಾದಂಥ । ಉದ್ರಿಕ್ತ । ಉತ್ಕರ್ಷವಾದ । ಸಂತ್ವಾ । ಪ್ರಾಣಿಗಳ । ಆವೇಶಂ । ಪ್ರವೇಯವನುಳ್ಳಂಥ । ಕಲ್ಯಾಣ ಭೂಭ್ರುತ್ । ಕನಕಾಚಲ ದಲ್ಲಿ । ಸದನ । ಮಂದಿರವನ್ನುಳ್ಳಂಥ । ಧನದ । ಕುಭೇರನಿಗೆ । ಮಿತ್ರಂ । ಆಪ್ತನಾದಂಥಾ । ಧರಾಧಾರ । × × × ಮೋಕ್ಷವನು । ಮಾಳ್ಕೆ । ಮಾಡಲಿ ॥ ೧ ॥

**ಅಂತ್ಯ :** ಷಡಕ್ಷರಿ ವಿಭುವಾದಂಥ । ಭವತಃ । ನಿಂನ್ನ । × × × ಮಂದಾರ । ಕಲ್ಪವೃಕ್ಷದ । ಮಂಜರಿ । ಗೊಂಚಲುಗಳು । ಮಧು । ಪುಷ್ಪರಸದ । ಝರಿ । ಸಂವಾತದ । ಮಾಧುರ್ಯ । ಮಧುರತ್ವದ । ದೂರ್ಕ್ಯ । ಹೊರೆಯನುಳ್ಳಂಥ । ಗಿರಃ । ವಾಕ್ಯವು । ಜಿಯಾಸುಃ । ಸರ್ವೋತ್ಕರ್ಷ ವಾಗಲಿ । ರಾಜಶೇಖರದ ನುಡಿ ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ॥

**ವಿಷಯ :** ರಾಜಶೇಖರ ವಿಳಾಸದ ಪ್ರತಿಪದಾರ್ಥ.

**ವಿಶೇಷ :** ಸಮಗ್ರ ಕೃತಿ. ಸುದೃಢ ಪ್ರತಿ. ಸುಂದರ ಹಾಗೂ ಸ್ಪಷ್ಟವಾದ ಬರವಣಿಗೆ.

—ಎಂಪಿಎಂ

## 665

| ಕ. ೭೧೧ | ರಾಜಾವಳಿಕಥೆ | ಗದ್ಯ |
|---|---|---|
| ೧೫″×೨″ | ದೇವಚಂದ್ರ | ೧೮೦೦ |
| ೧–೧೪೭ ಪತ್ರ | ೮ ಪಂಕ್ತಿ | ೧೧೧ ಅಕ್ಷರ |

**ಆದಿ :** ಶ್ರೀ ಮತ್ಪಂಚಗುರುಭ್ಯೋ ನಮಃ ಕನಕಗಿರಿ ವಿಜಯ ಪಾರ್ಶ್ವನಾಥಾಯ ನಮಃ ಮಲೆಯೂರು ಆದಿ ಪರಮೇಶ್ವರಾಯನಮಃ ಉದ್ಯೋಗಪುರದ ಚಂದ್ರಪ್ರಭಜಿನಾಯ ನಮಃ ॥

ಕಂದ ॥ ಶ್ರೀಮತ್ಸಮಸ್ತ ಭವನ ಶಿ
ರೋಮಣಿ ಸದ್ವಿನೇಯ ವಿನಮಿಂತಾಖಿಲ ಜಿನ ಜಿಂ

ಮಣಿಗಭಿವಂದಿಸಿ ನಾ
ನೀ ಮಹಿಯೊಳ್ಪೇಳ್ವೆನಖಿ ರಾಜಾನ್ವಯಮಂ ॥
ಅದೇತೆಂದೊಡೆ ..........
ಭಾವರೂಪದಿಂ ನಮಸ್ಕಾರಂಗೆಯ್ದು ಚತುರ್ವಿಧ ಫಲಾಪೇಕ್ಷೆಯಂ
ಕುರಿತು ಸಂಮ್ಯಜ್ಞಾನಿಗಳಪ್ಪ ದೇವಮಾನುಷ್ಯರಂ ನುತಿಯಿಸುತ್ತಂ ಯಿಾ
ಕಥಾವತಾರಮಂ ಪೇಳ್ವೆಂ

**ಅಂತ್ಯ :** ಪಿರಿದುಂ ಪುಣ್ಯೋದಯಂ ತಂನುದಯಮನರಿಮತಿಪ್ಪುರ್ವದಂ ಸತ್ಯವಿದ್ಯಾ
ಚರಿತಂ ತೇಜಸ್ವಿ ಸೌಖ್ಯಾಂಬುಧಿಯೆನಿಸಿದ ವಾಗ್ವಲ್ಲರಿ ವೈಣಿಕಂ ವಿ
ಸ್ಫುರಿತಾನಂದ ಪ್ರಭೂತಂ ಮುದಮನೆ ತಳೆದಂ ವಿಶ್ವವಿದ್ಯಾ ವಿನೋದಂ
ಧರಣೀಶಂ ಸರ್ವದಿಗ್ವ್ಯಾಪಿತನಮಳಯಶಂ ಕೃಷ್ಣರಾಜೇಂದ್ರಚಂದ್ರಂ ॥

ಗದ್ಯ ॥ ಇದು ನವ್ಯ ಪ್ರವಚನಕಾಲ ಪ್ರವರ್ತನ ಪುರುಷೋತ್ತಮ ಸರ್ವಜ್ಞ ಪದಾಂ
ಭೋಜ ಪಟ್ಪದ ಆರ್ಹತಿ ವಿಪ್ರದೇವಚಂದ್ರಪಂಡಿತ ವಿರಚಿತ ರಾಜಾವಲಿ
ಕಥಾಸಾರದೊಳು ಶ್ರೀ ಕೃಷ್ಣರಾಜವಂಶಾಭ್ಯುದಯ ವರ್ಣನಂ ದ್ವಾದಶಾಧಿ
ಕಾರಂ ॥

**ವಿಷಯ :** ಅನೇಕ ರಾಜವಂಶೀಯರ ಕಥೆಯನ್ನೂ ಹಬ್ಬ ಹುಣ್ಣಿಮೆ ಉಪಾಕರ್ಮ.
ಅಲ್ಲಲ್ಲಿರುವ ಕ್ಷೇತ್ರಗಳ ಪರಿಚಯ ಮತ್ತು ಅನೇಕ ಆಚಾರ್ಯರು ಇವರು
ಗಳ ಪರಿಚಯವನ್ನು ಮಾಡಿಕೊಟ್ಟಿರುತ್ತಾರೆ. ಜೈನ ಪರಂಪರೆಯಿಂದ
ಬಂದ ಅಕ್ಷಯತದಿಗೆ ಮೊದಲಾದ ವಿಷಯಗಳನ್ನು ಕನಕಗಿರಿ ಕ್ಷೇತ್ರದಲ್ಲಿ
ನೆಲಸಿದ್ದ ಅನೇಕ ಮುನಿಪುಂಗವರನ್ನು ವರ್ಣಿಸಿರುತ್ತಾರೆ.

**ವಿಶೇಷ :** ರಾಜಾವಳಿ ಕಥೆಯನ್ನು ಚಾಮರಾಜನಗರದ ತಾಲ್ಲೋಕು ಮಲೆಯೂರು
ಗ್ರಾಮದ ಆರ್ಹತವಿಪ್ರನೆಂಬ ದೇವಚಂದ್ರನು ಚಂಪೂರೂಪವಾಗಿ ಗ್ರಂಥ
ವನ್ನು ಬರೆದಿರುತ್ತಾನೆ. ಗ್ರಂಥ ಮಧ್ಯಭಾಗದಲ್ಲಿ ಅನೇಕ ಓಲೆಗಳಿಲ್ಲ.
ಗ್ರಂಥವು ಬಹಳ ತ್ರುಟಿತವಾಗಿದೆ.

—ಎಂಸಿಪಿ

## 666

| ಕೆ. ೭೭೭ | ರಾಜೇಂದ್ರವಿಜಯ | ಚಂಪು |
|---|---|---|
| ೧೨″×೨″ | ಮುರಿಗೆ ದೇಶಿಕೇಂದ್ರ | ಸು. ೧೭೦೦ |
| ೧–೪೦ ಪತ್ರ | ೧೧ ಪಂಕ್ತಿ | ೭೦ ಅಕ್ಷರ |

**ಆದಿ :** ಶ್ರೀ ಗುರುಬಸವಾಲಿಂಗಾಯ ನಮಃ ॥ ರಾಜೇಂದ್ರವಿಜಯಕ್ಕೆ ಶುಭಮಸ್ತು ॥
ಶಾರ್ದೂಲವಿಕ್ರೀಡಿತ ವೃತ್ತ ॥

ಶ್ರೀಮತ್ಕಾಂಡಜಜಾಂಡ ಮಂಡಲ ಪಿಚಂಡಾವನ್ನಾಯು ವಾಜಿಸ್ಥಿರು ।
ಭೂಮಿ ದ್ರೋರ್ಮಿರ್ಕ ನಾಮಯಾಳಿ ಹರ ಶಿಷ್ಟಾಪಾಲ ದುಷ್ಟಾರ್ದ್ದನಂ ॥
ಸೋಮಂ ಪ್ರಾಂಜಳನೂರ್ಜಿತಂ ಜಯತು ನಿತ್ಯಾನಂದ ಮೌನೀಂದ್ರಹೃ
ದ್ಧಾಮಂ ನಿರ್ಜ್ಜರ ಚಕ್ರವರ್ತಿ ಮಹಿಮಂ ದೇವೇಷ್ಟಲಿಂಗೇಶ್ವರಂ ॥ ೧ ॥

ಅಂತ್ಯ : ವೀರಾಚಾರ ವಿಚಾರಸಾರ ಜನಮಂದಾರಾಘದೂರಾಢ್ಯ ತಾ ।
ರಾರುಜಾಲ ಪರಾಪರೋರು ಮಹಿಮಾಧಾರಾಭ್ರಚಾರಾಪಗಾ ॥
ಕ್ಷೀರಾವಾಲ ಪೃಷಂತಿ ರಾಜಿತ ಜಟಾಕೋಟೀರ ಧಾರಾಭಿ ಗಂ
ಭೀರೋಧಾರ ಸುಮೇರು ಚಾಪ ಸಲಹೈ ಶ್ರೀಶಾಂತವೀರೇಶ್ವರಾ ॥ ೨೦ ॥

ಗದ್ಯ ॥ ಇದು ಮಧುಭಂಜನಾರ್ಜುನೋದರ × × × ರಾಜೇಂದ್ರ ಹಂಮಿರ ವಿಕ್ರಮಾತುಳ ಪ್ರಬಂಧದೊಳ್ಬದ್ರಾಯುಷ್ಯ ರಾಜಚರಿತ ಬಸವಲಿಂಗನುತಿ ಪ್ರಕಥನಂ ನವಮ ಪ್ರಕರಣಂ ಸಮಾಪ್ತಂ । ಶಿವಮಸ್ತು ॥

ವಿಷಯ : ಹಮ್ಮೀರವೆಂಬ ಪುರಕ್ಕೆ ದೊರೆಯಾದ ತ್ರೈಲೋಕ್ಯ ಚೂಡಾಮಣಿಯ ಮಗ ಹಮ್ಮೀರನ ಕಥೆ.

ವಿಶೇಷ : ಶಕಟರೇಫ ಪ್ರಯೋಗವಿದೆ. ಇದೇ ಕಟ್ಟಿನಲ್ಲಿ ಭೈರವೇಶ್ವರಕಾವ್ಯವೆಂಬ ಮತ್ತೊಂದು ಕೃತಿಯಿದೆ.

—ಎಸ್‌ಬಿ

## 667

ಕೆ. ೧೧೬೮/೪ | **ರಾಜೇಂದ್ರವಿಜಯ** | ಚಂಪು
೧೧.೫" × ೨" | ಮುರಿಗೆ ದೇಶಿಕೇಂದ್ರ | ಸು. ೧೭೦೦
೧೦೨–೧೫೬ ಪತ್ರ | ೧೧ ಪಂಕ್ತಿ | ೫೨ ಅಕ್ಷರ

ಆದಿ : ಶ್ರೀ ಗುರುಬಸವಲಿಂಗಾಯ ನಮಃ ॥ ಮುರಿಗೆಸ್ವಾಮಿಯವರು ನಿರೂಪಿಸಿದ ರಾಜೇಂದ್ರ ವಿಜಯಕ್ಕೆ ಶಿವಮಸ್ತು ॥ ನಿರ್ವಿಘ್ನಮಸ್ತು॥ ಆಯುಃರಾರೋಗ್ಯ ಐಶ್ವರ್ಯಮಸ್ತು ॥

ಶಾರ್ದೂಲವೃತ್ತ ॥
ಶ್ರೀಮಂತ್ಕಾಂಡಜಜಾಂಡ ಮಂಡಲ ಪಿಚಂಡ ವರಾಯಂವಾಜಿಸ್ಥಿರುಃ
ಭೂಮಿಂದ್ರೋವಿಂತನಾಮಯಶಾಳಿಬರ ಶಿಷ್ಟಾಪಾಲ ದುಷ್ಟಾರ್ದ್ದನಂ
ಸೋಮಂ ಪ್ರಾಂಜಳನೂರ್ಜಿತಂ ಜಯತು ನಿತ್ಯಾನಂದ ಮೌನೀಂದ್ರ ಹೃ
ದ್ಧಾಮಂ ನಿರ್ಜರ ಚಕ್ರವರ್ತ್ತಿ ಮಹಿಮಂ ದೇವೇಷ್ಟ ಲಿಂಗೇಶ್ವರಂ ॥ ೧ ॥

ಅಂತ್ಯ : ಶಾರ್ದೂಲ ವಿಕ್ರೀಡಿತ ವೃತ್ತ ॥
ವಿರಾಚಾರ ವಿಚಾರಸಾರ ಜನಮಂದಾರಾಘದೂರಾಢ್ಯ ತಾ

ರಾರಾಜಾಲ ಪರಾಪರೋರು ಮಹಿಮಾಧಾರಾಭೃಚಾರಾಪಗಾ
ಕ್ಷೀರಾಪಾರ ವೃಷಂತಿರಾಜಿತ ಜಟಾಕೋಟೀರಧಾರಾಭಿ ಗಂ
ಭೀರೋಧಾರ ಸಮೇರು ಚಾಪ ಸಲಹೈ ಶ್ರೀ ಶಾಂತ ವೀರೇಶ್ವರಾ ॥ ೨೦ ॥

ಗದ್ಯ ॥ ಇದು ಮಧುಭಂಜನಾರ್ಜುನೋಧರ ಪುರಂಧರ ಪುರೋಗಮ ನಾನಾ ಸುರೋರಗ ನಿಶರ ನವೀನ ಸುರಚಿರ ಪ್ರಚುರಾನರ್ಘ್ಯ ಮಣಿಗಣ ಖಚಿತರನೋತ್ತುಂಗ ಶೃಂಗಾರಸಾರಕೋಟಿ ಕೋಟೀರಸ್ಫಾರರುಚಿಕದಂಬ ಪ್ರತಿಬಿಂಬಿತ ವಿಮಳ ವಿಳಸಿತ ನಖ ಮುಕುರ ರಾಜಿತ ಸ್ಫುರಣ ಚರಣಾರ ವಿಂದ ಚಂದ್ರಶೇಖರ ಪರಮ ಶಿವಶರಣ ರಾಜೇಂದ್ರ ಹಂಮೀರ ವಿಕ್ರ ಮಾತುಳ ಪ್ರಬಂಧದೊಳ್ ಭದ್ರಾಯುಷ್ಯರಾಜಚರಿತ ಬಸವಲಿಂಗನುತಿ ಪ್ರಕಥನಂ ನವಮ ಪ್ರಕರಣಂ ಅಂತು ಪ್ರಕರಣ ೯ಕ್ಕೆ ಪದನು ಗಣನೆ ಎಷ್ಟಾ ಯಿತೆಂದೊಡೆ ೬೫೪ ವಚನ ೧೧೨ಕ್ಕಂ ಮಂಗಳ ಮಹಾ ಶ್ರೀ.

**ವಿಷಯ :** ಹಮ್ಮೀರಪುರಕ್ಕೆ ದೊರೆಯಾದ ತ್ರೈಲೋಕ್ಯ ಚೂಡಾಮಣಿಯ ಮಗ ಹಮ್ಮೀರನ ಚರಿತ್ರೆ.

**ವಿಶೇಷ :** ಸ್ಫುಟಾಕ್ಷರ. ಇದೇ ಕಟ್ಟಿನಲ್ಲಿ ಭಿಕ್ಷಾಟನ ಕಾವ್ಯ, ಭೈರವೇಶ್ವರಕಾವ್ಯ ಮತ್ತು ಭಾವಚಿಂತಾರತ್ನ ಎಂಬ ಮೂರು ಗ್ರಂಥವಿವೆ.

—ವೈಸಿಬಿ

## 668

| ಕೆ. ೧೦೪೫ | **ರಾಮಕಥಾಕಲ್ಪವೃಕ್ಷ** | ಗದ್ಯ |
|---|---|---|
| ೧೭.೭" × ೧.೫" | ಮುಮ್ಮಡಿ ಕೃಷ್ಣರಾಜ | ೧೮೫೦ |
| ೧–೩೨ ಪತ್ರ | ೬ ಪಂಕ್ತಿ | ೮೦ ಅಕ್ಷರ |

**ಆದಿ :** ಶ್ರೀ ಕೃಷ್ಣರಾಜ ಮಹಾರಾಜ ಕಂಠೀರವರಿಂದ ಶಕ ೧೭೮೭ನೇ ರಕ್ತಾಕ್ಷಿ ಸಂವತ್ಸರದ ಚೈತ್ರ ಶುದ್ಧ ೯ ಮಿ ಶುಕ್ರವಾರದಲ್ಲೂ ವಿರಚಿತವಾದ ಶ್ರೀ ರಾಮ ಕಥಾ ಕಲ್ಪವೃಕ್ಷವೆಂಬ ಗ್ರಂಥ ಪ್ರಾರಂಭಃ ॥ × × ×
ಮುಂಮಡಿ ಶ್ರೀಕೃಷ್ಣರಾಜ ಕಂಠೀರವರು । ಶ್ರೀಮದ್ರಾಮಾಯಣ । ವಿಷ್ಣು ಪುರಾಣ । ಪಾದ್ಮ । ಕೂರ್ಮ । ಅಧ್ಯಾತ್ಮರಾಮಾಣ । ಶಿವ ವಿಷ್ಣು ಧರ್ಮೋತ್ತರ । ಜೈಮಿಂನ್ಯಾದಿ ಗ್ರಂಥಗಳಲ್ಲಿರುವ ಅನೇಕ ರಾಮಕಥೆಗಳಂ ಪರಿಶೋಧನೆಯಂ ಮಾಡಿ ಕ್ಷೀರಸಮುದ್ರ ಮಥನವಂ ಗೈದು ಅಮೃತವ ತೆಗದಂತೆ ಸಾರವಂ ಸಂಗ್ರಹಿಸಿ

**ಅಂತ್ಯ :** ನಿಜರಾಜಧಾನಿಯೊಳ್ ಕುಮಾರಕರಿಗೆ ಪಟ್ಟಾಭಿಷೇಕವಂ ಮಾಡಿ ಬ್ರಹ್ಮೇಂ ದ್ರಾದಿ ದೇವತೆಗಳಿಂ ಪ್ರಾರ್ಥಿತರಾಗಿ ಕ್ಷೀರಾಬ್ಧಿಯೊಳ್ ನಿಜಾನಂದ ವೈಭ

ವದಿಂ ಚತುರ್ದಶ ಭುವನಗಳಲ್ಲಿರುವ ಕಥೆಯಂ ಬಂಣಿಶಿರುವ ಯಂಟನೇ ಸ್ತಬಕಕ್ಕೆ ಮಂಗಳ ಮಹಾಶ್ರೀ. × × × ಸರ್ವ ಸಾರ ಸಂಗ್ರಹ ಶ್ರೀರಾಮ ಕಥಾಕಲ್ಪವೃಕ್ಷವೆಂಬ ರಾಮಾಯಣ ಗ್ರಂಥವಂ ಸಂಪೂರ್ಣಂ ॥

**ವಿಷಯ :** ಶ್ರೀರಾಮನ ಕಥೆ.

**ವಿಶೇಷ :** ಸಮಗ್ರ. ಬರಹವು ಸುಂದರವಾಗಿದೆ. ಪತ್ರಕ್ಕೆ ಒಂದೊಂದು ಕ್ರಮಾಂಕ ವಿರುವುದಕ್ಕೆ ಬದಲಾಗಿ ೧೯ನೆಯ ಪತ್ರಕ್ಕೆ ಹಿಂಭಾಗದಲ್ಲಿ ಮುಂದಿನ ಕ್ರಮಾಂಕವನ್ನು ಕೊಟ್ಟಿರುವುದನ್ನು ಗಮನಿಸಬಹುದು. ಈ ಕ್ರಮ ವ್ಯತ್ಯಾಸ ದಿಂದ ಗ್ರಂಥಲೋಪವಾಗಿಲ್ಲ. [ಕ ಹ ಪ್ರ ವ ಸೂ. ತೃತೀಯ ಸಂಪುಟ ಪುಟ ೪೦೪ ಕ್ರಮಾಂಕ 1428 ನೋಡಿ]

—ಕೆಆರ್‌ಎಸ್

669

| ಕೆ. ೯೬೯ | ರಾಮಕಥಾಮೃತ | ವಾರ್ಧಕಷಟ್ಪದಿ |
| --- | --- | --- |
| ೨೪.೯" × ೨.೩" | ವೆಂಕಾಮಾತ್ಯ | ಸು. ೧೭೭೦ |
| ೨–೪೭೭ ಪತ್ರ | ೧೪ ಪಂಕ್ತಿ | ೧೧೨ ಅಕ್ಷರ |

**ಆದಿ :** .. ತರು ಕುಸುಮ ನಿಸ್ಸೃತ ಮರಂದರುಂ ನೆಕ್ಕರಿಸಿ ವ್ಯಾಕೋಚ
ವಿಚಕಿಲದ ಸವುರುಭದೊಳಕ್ಕರಂ ಪುಟ್ಟಿಸುವದನವರತ ..

× × × ×

ಕಾಮಿತಪ್ರದ ಕಮಲನಾಭ ಕಲ್ಯಾಣ ಗುಣ
ಧಾಮ ..... ಧಿ ಸುಧಾಕಿರಣ ಶುಭ ನೇತ್ರ
ಸಾಮಗಾನಪ್ರಿಯ ಸದಾ ಸಾಮ ಚಾರಿತ್ರ ನುತ ಸರ್ವ ಲೋಕೇಶ ಯಿಾಶಾ
ಭೂಮಿ ಜಾರಮಣ ಬುಧ ನಿಕರ ಸೇವಿತ ಚರ
ಣಾಮ ಪುರದರಸ ರಘುವಂಶ ಚೂಡಾರನ್ನ
ಪ್ರೇಮದಿಂ ಸಲಹು ಸಹಜಾನಂದಮಯರೂಪ ಭಜಕಜನ ಹೃದಯದೀಪಾ
॥ ೩೩ ॥

ಅಂತು ಪೀಠಿಕಾ ಸಂಧಿ ಸಮಾಪ್ತ ಮಂಗಳ ಮಹಾ ಶ್ರೀ.

**ಸೂಚನೆ ॥** ಸಕಲ ನಿಗಮಾಗಮ ಪುರಾಣೇತಿಹಾಸಗಳ
ಪ್ರಕರ ಸಂಮ್ಮತಮೆನಿಪ ಶ್ರೀರಾಮಚರಿತ್ರೆಯಂ
ಶಂಕಶೌನಕಾದಿ ರಿಷಿ ನಿವಹ ನಲಿವಂದದಿಂ ಹರನೊರೆದ ಗಿರಿಜಾತೆಗೆ ॥

**ಅಂತ್ಯ :** ಇದು ಸಕಲ ಪುರುಷಾರ್ಥ ಸಾಧನಂ ಮೇಲ್ಭರಾ
ಭ್ಯುದಯದಾವೋದವೆನುತಖಿಲ ಜನರೆಲ್ಲರುಂ
ಹೃದಯ ಸಿದ್ಧಿಯೊಳೋದಿ ಕೇಳುತದರರ್ಥಮಂ ತಾಳಿ ಸಂತೋಷ ಗೊಳಲೂ
ಪದುಮಾಕ್ಷರಾಮ ಪುರೆದರಸನಖಿಲಾರ್ಥಗಳ
ಮುದದಿಂದ ದಯಗೈದು ಮುಕುತಿ ಸಾಂಮ್ರಾಜ್ಯಮಂ
ತುದಿಯೊಳಾಳೋಚಿಸುವನಿದು ನಂ......ಂದರಿವುದಖಿಳಜನರೂ ॥ ೩೧ ॥
ಅಂತು ಸಂಧಿ ೭೧ಕ್ಕಂ ಪದನೂ ೩೬೧೩ಕ್ಕಂ ಮಂಗಳ ಮಹಾ ಶ್ರೀ.
× × × ರಾಮಪುರಿ ಹಂಪೆಯಮಾತ್ಮ್ಯತ ... ನೂಭವ ವೆಂಕಾಹ್ವಯ......ಶ್ರೀಮದ್ರಾಮಾಯಣ ಮಹಾಪ್ರಬಂಧದಲ್ಲಿ ಶ್ರೀ ಯುದ್ಧಕಾಂಡಸ್ಸಮಾಪ್ತಃ ಶ್ರೀ × × × ಸಂಧಿ ೧೯೬ಕ್ಕಂ ಪದನೂ ೯೮೬೩ಕ್ಕಂ ಮಂಗಳ ಮಹಾ ಶ್ರೀ.

**ವಿಷಯ :** ಶ್ರೀರಾಮನ ಕಥೆ.

**ವಿಶೇಷ :** ಆದಿಯಲ್ಲಿ ಹಾಗೂ ಮಧ್ಯಭಾಗದಲ್ಲಿ ಗ್ರಂಥವು ಲೋಪವಾಗಿರುವುದರಿಂದ ಗ್ರಂಥವು ಅಸಮಗ್ರವಾಗಿದೆ. ಪತ್ರಗಳಿಗೆ ಹುಳು ಹೊಡೆದಿದ್ದು ಹಲವಾರು ಕಡೆ ತುಂಬಾ ಶಿಥಿಲವಾಗಿವೆ. ೨, ೧೩೦–೧೪೪, ೧೬೮–೨೦೦ನೆಯ ಗರಿಗಳಿಲ್ಲ; ೧೬೧ನೆಯ ಗರಿಯಿದ್ದರೂ ೧೧ರಿಂದ ೨೦ನೆಯ ಪದ್ಯದವರೆಗೆ ಗ್ರಂಥ ಲೋಪವಾಗಿದೆ. ೧೪೫–೨೦೭ನೆಯ ಗರಿಗಳ ಅಂಚಿನಲ್ಲಿ ಚಿತ್ರವಿದೆ. ಗ್ರಂಥಾಂತ್ಯವಾದ ಮೇಲೆ 'ನರಸಿಂಹ್ಯ ಬರದ ಶ್ರೀರಾಮು ಚರಿತೆ' ಎಂದು ಪ್ರತಿಕಾರನ ವಿವರವಿದೆ.
[ಕ.ಹ.ಪ್ರ.ವ.ಸೂ. ತೃತೀಯ ಸಂಪುಟ ಪುಟ ೪೦೪–೪೦೫ ಕ್ರಮಾಂಕ 1428–1429 ನೋಡಿ]

—ಕೆಆರ್‌ಎಸ್

## 670

| ಕೆ. ೭೨೧ | **ರಾಮಚಂದ್ರಚರಿತ ಪುರಾಣ (ಪಂಪರಾಮಾಯಣ)** | ಚಂಪು |
|---|---|---|
| ೧೮" × ೨" | ನಾಗಚಂದ್ರ | ಸು. ೧೧೦೦ |
| ೧–೧೪೯ ಪತ್ರ | ೯ ಪಂಕ್ತಿ | ೯೪ ಅಕ್ಷರ |

**ಆದಿ :** ॥ ಓಂ ॥ ಶ್ರೀ ಆಸ್ಯ ಉಸಾಯುನಮಃ ॥ ಶ್ರೀಮತ್ಪಂಚಗುರುಭ್ಯೋನಮಃ। ಶುಭಮಸ್ತು ॥
ಶ್ರೀ ಕೇಳೀನಿಳಯಂ ನಿಜಾಂಘ್ರಿಕಮಲಂ ವಿದ್ಯಾನಟೀನಾಟ್ಯವೇ
ದೀ ಕಲ್ಪಂ ಮುಖಚಂದ್ರಬಿಂಬಮಖಿಳೇಂದ್ರೋತ್ತುಂಸ ಮಾಣಿಕ್ಯ ದೀ

ಪ್ರಾಕೀರ್ಣ್ಣಂ ಹರಿಪೀಠ ಪಾರ್ಶ್ವನೆನಿಪಂ ಪೂಜಾರ್ಹನಾರ್ಹಂತ್ಯ ಲ
ಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾಳ್ಕೆಷ್ಟಾರ್ತ್ಥ ಸಂಸಿದ್ಧಿಯಂ ॥೧॥

ಅಂತ್ಯ : ಕೃತವಿದ್ಯಸ್ಸರ್ವಮಚಿತ್ರರಾಗಿ ಪದಪಿಂದಾರಯ್ಯೆ ಕರ್ನ್ನಾಟ ಸಂ
ಸ್ಕೃತ ಕಾವ್ಯಂಗಳೊಳರ್ತ್ಥದಿಂ ರಚನೆಯಿಂನೇರ್ಪ್ಪಟ್ಟ ವಿದ್ವಚ್ಚಮ
ತ್ಕೃತಿಯಪ್ಪಂತಿರೆ ನಾಗಚಂದ್ರಸುಕವೀಂದ್ರಂ ಪೇಳ್ದವೊಲಾದ್ಯರ
ದ್ಭುತನರ್ಪ್ಪೇಳ್ದಭಿರಾಮ ರಾಮ ಕಥೆಯಂ ಸಯ್ಪಿಂಗಡಪ್ಪಾದರೆ ॥ ಶ್ರೀ ॥
ಗದ್ಯ ॥ ಇದು ಪರಮ ಜಿನಸಮಯ ಕುಮುದಿನೀ ಶರಶ್ಚಂದ್ರ ಬಾಳಚಂದ್ರ
ಮುನೀಂದ್ರಚರಣ ನಖ ಕಿರಣ ಚಂದ್ರಿಕಾ ಚಕೋರಂ ಭಾರತೀ ಕರ್ಣ್ನ
ಪೂರಂ ಶ್ರೀಮದಭಿನವ ಪಂಪ ವಿರಚಿತಮಪ್ಪ ರಾಮಚಂದ್ರ ಪುರಾಣ
ದೊಳ್ ನಿರ್ವಾಣ ಕಲ್ಯಾಣವರ್ನ್ನನಂ ಷೋಡಶಾಶ್ವಾಸಂ ॥ ಶ್ರೀ ಶ್ರೀ ಶ್ರೀ
ಶ್ರೀಮಚ್ಚತುರ್ವಿಂಶತಿ ತೀರ್ಥಕರೇಭ್ಯೋನಮಃ ನಮಸಿದ್ಧೇಭ್ಯಃ ಶ್ರೀ.

ವಿಷಯ : ಜೈನ ರಾಮಾಯಣ ಕಥೆ.

ವಿಶೇಷ : ಗ್ರಂಥ ಸಮಗ್ರವಾಗಿದೆ. ಅಕ್ಷರಗಳು ಸ್ಫುಟವಾಗಿವೆ. ಕಿನೆಯ ಪತ್ರ ಸ್ವಲ್ಪ
ಮುರಿದು ಲುಪ್ತವಾಗಿದೆ. ೧ರಿಂದ ೧೦ ಪತ್ರಗಳನ್ನು ಅಲ್ಲಲ್ಲಿ ಹುಳು
ತಿಂದು ರಂಧ್ರಗಳಿವೆ

—ಎಸ್‌ಬಿ

671

ಕೆ. ೭೬೩ **ರಾಮಚಂದ್ರಚರಿತ ಪುರಾಣ (ಪಂಪ ರಾಮಾಯಣ)** ಚಂಪು

೧೫″ × ೧.೮″ ನಾಗಚಂದ್ರ ಸು. ೧೧೦೦

೧-೨೧೫ ಪತ್ರ ೮ ಪಂಕ್ತಿ ೭೬ ಅಕ್ಷರ

ಆದಿ : ಶ್ರೀಮತ್ಪಾರ್ಶ್ವತೀರ್ಥಂಕರಾಯ ನಮಃ ಶುಭಮಸ್ತು ॥
ಶ್ರೀ ಕೇಳೀನಿಳಯಂ ನಿಜಾಂಘ್ರಿಕಮಳಂ ವಿದ್ಯಾನಟೀ ನಾಟ್ಯವೇ
ದೀಕಲ್ಪಂ ಮುಖಚಂದ್ರ ಬಿಂಬಮಖಿಲೇಂದ್ರೋತ್ತಂಸ ಮಾಣಿಕ್ಯದೀ
ಪ್ರಾಕೀರ್ಣಂ ಹರಿಪೀಠ ಪಾರ್ಶ್ವನೆನಿಪಂ ಪೂರ್ಜನಕರ್ಾಹರ್ಂತ್ಯ
ಲಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾಳ್ಕೆಷ್ಟಾರ್ಥ ಸಂಸಿದ್ಧಿಯಂ ॥
ತನಸ್ಸಂತಾನಮೆಂಟ್ಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ ಮೆಯ್ಯುಂ
ದೇನಾನುಂಗುಂದೆ ಲೋಕಾಗ್ರದೊಳಿರೆ ಸಹಜಾನಂದ ಚೈತನ್ಯರೂಪಂ
ಜ್ಞಾನಜ್ಞೇಯ ಪ್ರಮಾಣ ಪಸರಿಸೆ ಗಣನಾತೀತರಾಗಿರ್ದ್ದ ಮುಕ್ತಿ
ಶ್ರೀನಾಥಸ್ಸಿದ್ಧರಾತ್ಯಂತಿಕಂ ಸುಖಪದವಿ ಸಿದ್ಧಿಯಂ ಮಾಳ್ಕೆ ನಮ್ಮೊಳ್

ಅಂತ್ಯ : ವೃ ॥ಕೃತ ವಿದ್ಯರ್ಸಮ ಚಿತ್ರರಾಗಿ ಪದಪಿಂದಾರಯ್ಯೆ ಕರ್ನಾಟ ಸಂ
ಸ್ಕೃತಕಾವ್ಯಂಗಳೊಳರ್ಥದಿಂ ರಚನೆಯಿಂ ನೇರ್ಪಟ್ಟು ವಿದ್ವಚ್ಚಮ

ಮತ್ಕೃತಿಯಪ್ಪಂತಿರೆ ನಾಗಚಂದ್ರ ವಿಬುಧಂ ಪೇಳ್ದಂದದಿಂದಾದ್ಯರ
ದ್ಯತನರ್ಪೇಳ್ವಭಿರಾಮಕಥೆಯಂ ಸಯಿಪಂ ಗಡಪ್ಪಾರ್ವನರೇ॥
ಗದ್ಯ ॥ ಇದು ಪರಮಜಿನಸಮಯ ಕುಮುದಿನೀ ಶರಚ್ಚಂದ್ರ ಬಾಲಚಂದ್ರ ಮುನೀಂದ್ರ ಚರಣನಖ ಕಿಱಣಚಂದ್ರಿಕಾ ಚಕೋರಂ ಭಾರತೀಕರ್ಣ ಪೂರಂ ಶ್ರೀಮದಭಿನವ ಪಂಪ ವಿರಚಿತಮಪ್ಪ ರಾಮಚಂದ್ರಚರಿತಪುರಾಣ ದೊಳಂ ರಾಮಜಿನ ಪರಿನಿರ್ವಾಣ ಕಲ್ಯಾಣ ವರ್ಣ್ಣನಂ ಷೋಡಶಾಸ್ವಾಸಂ॥

ವಿಷಯ : ಜೈನ ರಾಮಾಯಣ.

ವಿಶೇಷ : ೧೧೪ನೆಯ ಓಲೆ ಇಲ್ಲ. ಪ್ರಾರಂಭದ ಓಲೆ ಶಿಥಿಲವಾಗಿದೆ. ಇದೇ ಗ್ರಂಥ ದಲ್ಲಿ ಸಂಖ್ಯಾರಹಿತ ಒಂದು ಕನ್ನಡ ಪದ್ಯಗಳುಳ್ಳ ಓಲೆಯಿದೆ. ಅಕ್ಷರ ಸುಂದರವಾಗಿದೆ.

—ಎಂಸಿಪಿ

## 672

| ಕೆ. ೧೭೨೨/೨ | ರಾಮಚಕ್ರ | ಗದ್ಯ |
|---|---|---|
| ೪.೩″ × ೧.೧″ | ? | ? |
| ೧–೬ ಪತ್ರ | ೫ ಪಂಕ್ತಿ | ೨೦ ಅಕ್ಷರ |

ಆದಿ :

| ರಾ ೯ | ಶ್ರೀ ೧೬ | ಲ ೫ | ವಿ ೪ |
|---|---|---|---|
| ರುಂ ೭ | ರಾ ೨ | ಲ ೧೧ | ಸು ೧೪ |
| ಯಿಂ ೧೨ | ಮಾ ೧೩ | ಹ ೮ | ಜಾ ೧ |
| ವಾ ೬ | ಭ ೩ | ಶ್ರೈ ೧೦ | ಗು ೧೫ |

ರಾಮಚಕ್ರದ ಗ್ರಂಥ ॥ ಪದ ಶೋಡಶ ಬಾಣ ವಿರಚಿಮುಖಂ। ಗಿರಿ। ಲೋಚನ। ರುದ್ರ ಮಹಾಮ। ರವಿ। ಮಂಗಳ। ಶಂಭೂ। ಪದಂ। ರಸ। ರಾಮ। ದಶ। ತಿಥಿ। ಚಕ್ರಂ ॥

ಟೀಕು ॥ ತಮವಾಶಂ ಚರಾಮಂಚ। ವಣಗಿದ ಮರ। ಹೆಗಲ ಮೇಲೆಯಿದಿ। ಸತ್ತ ಮರ ಮಕ್ಕಳಿಲ್ಲದ ಭಂಜೆ। ಯೇಂದು ಹೇಳುವದೂ ॥

ಅಂತ್ಯ : ಭರತಂ ಸರ್ವ್ವ ಸಿದ್ಧಿಂ ಚ। ಬಸುರು। ಹೊಟ್ಟೆಬೇನೆ। ತಲೆನೋವೂ। ಯಿಂದು ಮಹಾವನ ಮಗ್ಗಿಯ ದೇವರು। ಯಿಂದ ಬಂದದೂ ॥ ೧೫ ॥
ರಾಮಚಕ್ರದ ಟಿಪ್ಪಣ ಸಮಾಪ್ತ ಮಂಗಳ ಮಹಾ ಶ್ರೀ.

ವಿಷಯ : ಪ್ರಶ್ನ ಶಾಸ್ತ್ರ.

**ವಿಶೇಷ :** ಸಮಗ್ರ. ಬರಹ ಚೆನ್ನಾಗಿದೆ. ಇದೇ ಕಟ್ಟಿನಲ್ಲಿ ಪ್ರಶ್ನ ಚಿಂತಾಮಣಿ ಎಂಬ ಇನ್ನೊಂದು ಕೃತಿ ಇದೆ.

—ಕೆಆರ್‌ಎಸ್

## 673

ಕೆ. ಬಿ. ೬೧೨/೫ ರಾಮದೇವರ ಪ್ರಶ್ನೆ ಗದ್ಯ
೭.೨"×೪.೩" ? ?
೧–೬ ಪುಟ ೧೮ ಪಂಕ್ತಿ ೧೪ ಅಕ್ಷರ

**ಆದಿ :** ರಾಮಪ್ರಸ್ನೆ ಲೆಖ್ಕದ ಮೇಲೆ ನೋಡಿ ಹೇಳುವದು। ಸಿದ್ಧಿ ತಪ್ಪದು। ವಾರಗಳ ಹೆಣಿಸಿಕೊಂಬುವದು

| | | | |
|---|---|---|---|
| ೧ | ೭ | ೬ | ೪ |
| ೧೫ | ೮ | ೫ | ೧೦ |
| ೧೪ | ೯ | ೧೩ | ೧೨ |
| ೨ | ೧೬ | ೧೧ | ೩ |

ಶ್ರೀರಾಮದೇವರಾ ಪ್ರಸ್ನೂವೊ ಬರೆಯುವದಕ್ಕೆ ಶುಭಮಸ್ತು॥ ಶ್ರೀ ಕ್ರಿಷ್ಣ ದೇವರಾ ಪಾದವೇ ಗತ್ತಿ। ಊರೂಮಾರಾಡಿ ರಂಗಸ್ವಾಮಿ ಪಾದವೆ ಗತ್ತಿ॥ ಸುಭಮಸ್ತು॥ ಶ್ರೀರಸ್ತು॥ ಯಿಾ ಪ್ರಸ್ನೂಮೆ ನೋಡುವ ಕ್ರಮಾ। ಆದಿತ್ಯವಾರಾ। ಬ್ರುಹಸ್ಪತ್ತಿವಾರಾ। ಶೆನಿವಾರಾ। ಯಿಾ ದಿವಸ ಗುಂಧ ಅಕ್ಷತೆ ದೀಪ ದೂಪ ಕಾಣಿಕೆಯಿಟ್ಟು ಆದಿನಾರು [೧೬] ಲೆಖ್ಖದ ಭಾಗಿ ಮೇಲೆ ಮೂರುಬಾಗಾದಲ್ಲಿ ಮಿಕಾ ಲೆಖ್ಖ ಅಷ್ಟನಪ್ಪನೆ ನೋಡಿ ಹೇಳೂ ವದೂ। ಸಿದಾಂತ್ತ ತಪ್ಪಾದ್ದು॥

ಶ್ರೀರಾಮದೇವರು ಚಿತುರಾಂಗಬಲ ಸಮೇತಾವಾಗಿ ಲೈಂಕಾದ್ವಿಪಕ್ಕೆ ಸೀತಾ ಅಂಮಾನಾವರ ತಾರುವಾ ಮಾರ್ಗಾದಾರಿ ಕೀಸ್ಕಿಂದಾಪರ್ವತಾದಲ್ಲಿ। ಸುಗ್ರಿವಾಗೆ ಅಬೆಯುವನಿಂತ್ತು। ರಾಮಾದೇವರು। ಸ್ನಾನಾಂಚೆತ್ರು। ರಾಮಚಂದ್ರಕಾರ್ಯಾ ಶುಭಮಾಸ್ತ ಲೇಸು॥ ೧೮ ॥

**ಅಂತ್ಯ :** ರಾಮಾದೇವರು। ಲಕ್ಷ್ಮ್ರಣ ವಿಭೀಷಣಗೆ ಪಟ್ಟಾ ಕಟ್ಟಿದ। ಲೈಂಕಾದ್ವೀಪ ಪಟಣ ಪಟವಾ। ಕಟಿದಾಸ್ತಲ್ಲಾ। ಮಾಹಲೇಸೂಂಟ್ಟೂ ಸಂದ್ರುಹೇನ ಪ್ರತಿಯೀತಂ। ಸಂಪದಾವಹದ್ದೂ ಸೂಕ ಹೆಚುವದ್ದೂ ಚಿಂತ್ತೆ ಬ್ಯಾಡಾ। ಸತ್ಯಾ। ನಂಬೂ। ಲೇಸೂ ಆದಿತ್ತೂ ಯಿಾ ಪ್ರಸ್ನೂಮೆಂ ೧೮ಲೂ ಮೂಜಗದಲ್ಲಿ ನೋಡುವದೂ ಸಂಪೂರ್ನ ಶ್ರೀ.

ವಿಷಯ : ಪ್ರಶ್ನ ಫಲ.

ವಿಶೇಷ : ಅಸ್ಪಷ್ಟಾಕ್ಷರ, ಕಾಗದ ಹಳೆಯದು. ಇವರೊಡನೆ ಬಾಲಗ್ರಹ, ಜ್ವರ ಇವುಗಳಿಗೆ ಯಂತ್ರ, ಕಲ್ಯಾಣಮ್ಮನವರ ಕಾಲಜ್ಞಾನ, ಘಟ್ಟಿವಾಳಯ್ಯನ ಕಾಲಜ್ಞಾನ, ಸರ್ವಜ್ಞಮೂರ್ತಿಯ ಕಾಲಜ್ಞಾನ, ವಿವೇಕಚಿಂತಾಮಣಿ ಪ್ರಶ್ನೆ, ಸಿದ್ಧರಾಮ ದೇವರ ಕಾಲಜ್ಞಾನ, ಗಣೇಶ್ವರಸ್ತುತಿ, ವಿಭೂತಿ ಮತ್ತು ಪಾದೋದಕ ಮಹಾತ್ಮ್ಯಗಳಿವೆ.

—ಎಸ್‌ಎನ್‌ಕೆ

674

ಕೆ. ೮೫೭/೧ **ರಾಮನಾಥ ಚರಿತೆ** ಸಾಂಗತ್ಯ

೧೪'' × ೧.೩'' ನಂಜುಂಡ ಸು. ೧೫೦೦

೧-೭೫ ಪತ್ರ ೫ ಪಂಕ್ತಿ ೬೦ ಅಕ್ಷರ

ಆದಿ : ಶ್ರೀ ಗಣಾದಿಪತಾಯೆ ನಮಃ ॥ ಶ್ರೀ ಗುರುಭ್ಯೋಯೆಂ ನಮಃ । ನಂಜುಂಡ ಲಿಂಗಾಯ ನಮಃ । ತೆರಖಿಣಾಂಬಿಯಾ ಚೆಂನವೀರಭದ್ರ ದೇವರ ಪಾದವೆ ಗತ್ತಿ । ಭದ್ರ್ಮಂಕಾಳಿಯ ಶ್ರೀ ಪಾದವೇ ಗತಿ । × × × ರಾಮನ ಸಾಂಗಂತ್ಯಕೆ ನಿರ್ವಿಗ್ನ ಮಸ್ತು ॥

ಶ್ರೀ ಗಿರಿಜಾಸ್ಯಾಂಬುಜ ದಿನನಾಯಖ
ಭೋಗಿ ಭೂಷಣ ಭಾಳನೇತ್ರ ।
ಭಾಗೀರಥೀಧರ ಭವರೋಗ ವೈದ್ಯನೇ
ನಾಗು ಶಂಕರ ಶರಣೆನಗೆ ॥

ಅಂತ್ಯ : ಯಿಂದು ಪರದ ಸೋದರ ರಾಮನಾತನ
ಪದಕ್ರುತಿಯೊಳಗಾಜಿಸೆಯ
ವಿದಿತ ಸ್ವಾಸದೊ......ಸಂಧಿ
ಮುಬ್ರದಂಪದಚಯ ಸಂಬಂದಿ ॥ ೧೯ ॥

ಅಂತು ಸಂಧಿ ೮೭ಕ್ಕಂ ಪದನು ೯೮೮ಕ್ಕ ಮಂಗಳ ಮಹಾ ಶ್ರೀ ॥ ಶುಭಮಸ್ತು ॥ × × × ಪಾರಿದಾವಿ ಸತ್ಸರದ ಶ್ರಾವಣ ಶುದ್ಧ ೧ ಅರಭ್ಯದಲಿ ನರಿಹಳ್ಳೀ ಅಪ್ಪಜೈಯ್ಯನವರ ಮಗ ಲಿಂಗೈಯನು ಬರದಾ ರಾಮನ ಸಾಂಗತ್ಯಕ್ಕೆ ಶುಭಮಸ್ತು ॥ × × ×

ವಿಷಯ : ಕುಮಾರರಾಮನ ಕಥೆ.

ವಿಶೇಷ : ಸಮಗ್ರ. ಶಕಟರೇಫದ ಬಳಕೆಯಿದೆ ಬರವಣಿಗೆ ಸುಂದರವಾಗಿದೆ. ಗರಿಗಳನ್ನು ಮಧ್ಯೆ ಮಧ್ಯೆ ಹುಳು ತಿಂದಿವೆ. ಇದರೊಂದಿಗೆ 'ನೀತಿಶಾಸ್ತ್ರ ಸಮುಚ್ಚಯ' ಎಂಬ ಇನ್ನೊಂದು ಕೃತಿಯಿದೆ.

—ಎಂಪಿಎಂ

675

| ಕ. ೯೩೭ | ರಾಮನಾಥ ಚರಿತೆ | ಸಾಂಗತ್ಯ |
|---|---|---|
| ೧೪.೨'' × ೨'' | ನಂಜುಂಡ | ಸು. ೧೫೦೦ |
| ೭೭–೧೫೪ ಪತ್ರ | ೯ ಪಂಕ್ತಿ | ೭೫ ಅಕ್ಷರ |

ಆದಿ : ಶ್ರೀ ಗಣಾಧಿಪತಯೇ ನಮಃ ॥ ಶುಭಮಸ್ತು ॥ ರಾಮನ ಸಂಗತ್ಯ ॥
ಶ್ರೀ ಗಿರಿಜಾಸ್ಯಾಂಬುಜ ದಿನನಾಯಕ
ಭೋಗಿಭೂಷಣ ಭಾಳನೇತ್ರ
ಭಾಗೀರಥೀಧರ ಭವರೋಗವೈದ್ಯ ನೀ
ನಾಗು ಶಂಕರ ಶರಣೆಂಬೆ ॥ ೧ ॥
ನೊಸಲ ಕಣ್ಣಿಂದೀಶ್ವರ ಕೌಸ್ತುಭದಿಂ
ದಸುರಾರಾತಿಯಂತಂತೆ
ಅಸಹಾಯಶೂರ ಕುಮಾರ ರಾಮುಗನಿಂದ
ಜಸವಡದನು ಕಂಪನೃಪತಿ ॥ ೨ ॥

ಅಂತ್ಯ : ಪಡಿಮಾತೇನಾ ಪಾತಕ ತೊಂಡನ
ಕೆಡಹಿ ಕೊರಲ ಕೊಯ್ಯುವೆನು
ನುಡಿದಿನ್ನು ಫಲವೇನೆನುತ ಮಂತ್ರಿಯನವ
ನೊಡನೆ ಕರೆಯಲಟ್ಟಿದನು ॥ ೧೫೫ ॥
ಅಂತು ಸಂಧಿ ಕ್ಕಂ ಪದನು ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ.

ವಿಷಯ : ಕುಮಾರರಾಮನ ಕಥೆ.

ವಿಶೇಷ : ಕೃತಿ ಅಸಮಗ್ರವಾಗಿದೆ. ಮೊದಲು ಐದು ಆಶ್ವಾಸಗಳಿಲ್ಲ. ಆರನೆಯ ಆಶ್ವಾಸದಿಂದ ಒಂಬತ್ತನೆಯ ಆಶ್ವಾಸ ಎರಡನೆಯ ಸಂಧಿ ಪೂರ್ತ ಇದೆ. ಇಪ್ಪತ್ತೊಂದನೆಯ ಸಂಧಿಯಿಂದ ಮೂವತ್ತನಾಲ್ಕನೆಯ ಸಂಧಿವರೆಗಿದೆ. ಅಕ್ಷರಗಳು ಸ್ಫುಟವಾಗಿವೆ. ಬರವಣಿಗೆ ಶುದ್ಧವಾಗಿದೆ. ಶಕಟರೇಫವನ್ನು ಬಳಸಿದೆ. ಸಾಮಾನ್ಯವಾಗಿ ಎಲ್ಲ ಪತ್ರಗಳನ್ನೂ ಹುಳು ಹೊಡೆದಿದೆ. ಪ್ರತಿ ಬಹಳ ಶಿಥಿಲವಾಗಿದೆ. ೯೩, ೯೪, ೯೫ನೆಯ ಪತ್ರಗಳ ಅಂಚು ಗಳು ಮುರಿದಿವೆ. ೯೫ನೆಯ ಪತ್ರದಲ್ಲಿ ನಾಲ್ಕು ಸಾಲುಗಳು ಮಾತ್ರ ಇವೆ. ಆರನೆಯ ಆಶ್ವಾಸ ನಾಲ್ಕನೆಯ ಸಂಧಿ ೧೫೧ನೆಯ ಪದ್ಯದಿಂದ ಎಂಟನೆಯ ಆಶ್ವಾಸ ಒಂದನೆಯ ಸಂಧಿ ೫ನೆಯ ಪದ್ಯದವರೆಗಿಲ್ಲ.
[ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ–ತೃತೀಯ ಸಂಪುಟ. ಪುಟ ೪೧೦–೪೧೪ ನಂ. 1435, 1436, 1437, 1438, 1439, 1440 –ನೋಡಿ]

—ಎನ್‌ಬಿಎ

676

ಕೆ. ೧೨೨೨ **ರಾಮನಾಥ ಚರಿತೆ** ಸಾಂಗತ್ಯ

೧೪"×೧.೩" ನಂಜುಂಡ ಸು. ೧೫೦೦

೧–೨೦೨ ಪತ್ರ ೬ ಪಂಕ್ತಿ ೬೦ ಅಕ್ಷರ

**ಆದಿ :** ರಾಮನ ಸಂಗತ್ಯ ॥
ಶ್ರೀ ಗಿರಿಜೇಶಾಂಬುಜ ದಿನನಾಯಕ
ಭೋಗಿಭೂಷಣ ಭಾಳನೇತ್ರಾ
ಭಾಗೀರಥಿಧರ ಭವರೋಗ ವೈದ್ಯನೆ
ನಾಗಶಂಕರ ಶರಣಾರ್ಥಿ ॥ ೧ ॥

× × ×

ಯದುಕುಲಮರ್ತ್ಯರೆಂದೆಂಬ ಕುಲಾಗತ
ವಿಧಿತ ಬಿರುದನಾಂತೆಸವಾ
ಚದುರ ಮಾಧವನಾತ್ಮಜ ನಂಜುಂಡನಾ
ನೊದವಿ ಪೇಳಿದೆನೀ ಕೃತಿಯಾ ॥ ೭೦ ॥

**ಅಂತ್ಯ :** ಅನಿತರೊಳ......ತಾತ್ಮಜರ
ಸುನಯದಿಂದೆಯಿತಂದೂ
ಮನವಲಿದಿಂತೆಂದೆಚ್ಚರಿಸಿದ ರಾ
ಮಾನುಜೇಶ್ವರನ ನಂದನನಾ ॥ ೨೪ ॥
ಯೋಳರಿರಾ...ಕಳ್ತಲೆಯುಂಬ
ಕಾಳರಕ್ಕಸನೋಡಿಸಲೂ
ಧಾಳಿ ಬಂದನು ರವಿಕಿರಣಗಳೆಂಬ
ಕಾಲಾಳ ಮೋಹರದ ಮಧ್ಯದೊ...

**ವಿಷಯ :** ಕುಮಾರರಾಮನ ಕಥೆ.

**ವಿಶೇಷ :** ಅಸಮಗ್ರ. ಬರಹ ಚೆನ್ನಾಗಿದೆ. ಅಲ್ಲಲ್ಲಿ ಪತ್ರಗಳಿಗೆ ಹುಳು ಹೊಡೆದಿದೆ. ೪೭ನೆಯ ಪತ್ರವಿಲ್ಲ.
[ಕ.ಹ.ಪ್ರ.ವ.ಸೂ. ತೃತೀಯ ಸಂಪುಟ. ಪುಟ ೪೦೦–೪೧೪ ಕ್ರಮಾಂಕ 1435–1440] ನೋಡಿ.

—ಕೆಆರ್ ಎಸ್

677

ಕೆ. ೧೨೨೩ **ರಾಮನಾಥ ಚರಿತೆ** ಸಾಂಗತ್ಯ
೧೨.೮" × ೧.೨" ನಂಜುಂಡ ಸು. ೧೫೦೦
೧–೮೯ ಪತ್ರ ■ ಪಂಕ್ತಿ ೫೦ ಅಕ್ಷರ

**ಆದಿ :** ಶ್ರೀ ಗಿರಿಜ್ಯಾಂಬುಜ ದಿನನಾಯಕ
ಭೋಗಿ ಭೂಶಣ ಬಾಳನೇತ್ರಾ
.. ಗೀಡತಿಧರ ಭ...ರೋಗ ವೈದ್ಯನೆ
ನಾಗಶಂಕರಗೆ ಶರಣೆಂಬೆ ॥ ೧ ॥

**ಅಂತ್ಯ :** ಮಂನೆಯರುಮ...ಶ್ರೀ ಪ್ರಾಧಾನರೂ
ಉಂನಂತ...ರಾವುತರೂ
ಚಂನ ರಾಮನ ಕರತಂದು ಪಟವ ಕಟಿ
ತಂನ ರಾಜ್ಯದಲಿ ಸುಕದಲಿರ್ದಾ
ಚೇನ ಜೂಟನೆ ಭೂಜಂಗ ವಂದಿತ ಪಾದಾ
ಕಂದರ್ಪನೆನಿಪ ಚಿಂನ್ಮಯನೆ
ಯಿಂದುಧರನೆ ಜಾಟಾಂಗಿಯ ರಾಮನಾ

**ವಿಷಯ :** ಕುಮಾರರಾಮನ ಕಥೆ.

**ವಿಶೇಷ :** ಅಸಮಗ್ರ. ಸ್ಥಿತಿ ಉತ್ತಮವಾಗಿಲ್ಲ. ಗರಿಗಳು ಅಲ್ಲಲ್ಲಿ ಮುರಿದು ಲುಪ್ತ ವಾಗಿವೆ. ೫, ೨೭, ೭೩, ೮೩ನೆಯ ಕ್ರಮಾಂಕದ ಪತ್ರಗಳಿಲ್ಲ. ೯, ೩೨, ೩೭, ೪೦, ೪೧, ೬೨, ೬೭, ೮೭, ೮೮ನೆಯ ಕ್ರಮಾಂಕದ ಪತ್ರಗಳಲ್ಲಿ ಅರ್ಧಭಾಗ ಮುರಿದು ಲೋಪವಾಗಿವೆ. ೧೬, ೪೨ನೆಯ ಕ್ರಮಾಂಕದ ಪತ್ರಗಳಲ್ಲಿ ಒಂದು ಕಡೆ ಮಾತ್ರ ಬರಹವಿದೆ.
[ಕ. ಹ. ಪ್ರ. ವ. ಸೂ. ತೃತೀಯ ಸಂಪುಟ ಪುಟ ೪೧೦-೪೧೪. ಕ್ರಮಾಂಕ. 1435–1440 ನೋಡಿ]

—ಕೆಆರ್‌ಎಸ್

678

ಕೆ. ೧೨೪೫ **ರಾಮನಾಥ ಚರಿತೆ** ಸಾಂಗತ್ಯ
೧೬.೬"×೧.೬" ನಂಜುಂಡ ಸು. ೧೫೦೦
೧–೨೫೪ ಪತ್ರ ೬ ಪಂಕ್ತಿ ೮೪ ಅಕ್ಷರ

**ಆದಿ :** ದೇವಗಣಾಧಿಪತಯೆ ನಮಃ × × ರಾಮನಾಥನ ಸಾಂಗತ್ಯದ ಪುಸ್ತುಕ ಬರವದಕ್ಕೆ ನಿರ್ವಿಘ್ನಮಸ್ತು ॥ × ×
ಶ್ರೀ ಗಿರಿಜಾ...ಬಂಜ ದಿನನಾಯಂಕ

ಭೋಗಿಭೂಷಣ ಭಾಳನೇತ್ರ
ಭಾಗೀರಥೀಧರ ಭವರೋಗವೈದ್ಯ ನೀ
ನಾಗು ಶಂಕರ ಶರಣೆನಗೆ ॥ ೧ ॥

**ಅಂತ್ಯ :** ಯಿದು ಯದುಕುಲಾವಮಾತ್ಯ ವಂಶದೊಳಗುದಯಿಸಿದ
ಸದಮಯಶೋವಿರಾಜಿತ ವಿಜಯ ನೃಪತನುಜ
ವಿದಿತ ವಿತರಣ ವಿನಯವಿಕ್ರಮ ವಿಭಾಸಿಯೆಂದನಿಪ ಮಾಧವನಾಮನ
ಉದರಾಬ್ಧಿಭವ ಚಂದ್ರ ನಂಜುಂಡನೊಲಿದೊರೆದ
ಕದನ ಕಲಿಕಾಲಕಸಿ ಕೇತು ಕಲಿಶುಚಿರಾಮ
ನುದಿತಕೃತಿ ಬಂಧದೊಳ್ ಮುಪ್ಪದುಪದನ್ಯಾಂಸದೊಳಗಾಶ್ವಾಸವೇಳನೆ ಯದು
ಅಂತೂ ಆಶ್ವಾಸ ೭ಕ್ಕಂ ಸಂಧಿ ೨೮ಕ್ಕಂ ಪದನು ೩೩೪೧ಕ್ಕಂ ಮಂಗಳ
ಮಹಾ × ×
ಯಿಂತ್ತು ರಾಮನು ಸಜ್ಜಾಗೃಹದೊಳು ಬಂ
ದುಂತ್ತಮ ಮುಪ್ಪದುತಳ್ಪದೊಳೂ
ಅತ್ಯಂತ ಹರುಷದಿಂ ಪವಡಿಸಿದುನನು
ಪೆತ್ತಿ ಪೇಳುವರಳವಲ್ಲ ॥

**ವಿಷಯ** ಕುಮಾರರಾಮನ ಕಥೆ.

**ವಿಶೇಷ :** ಅಸಮಗ್ರ. ಮೊದಲ ಕೆಲವು ಪತ್ರಗಳಿಗೆ ಹುಳು ಹೊಡೆದಿದೆ.

—ಜಿಜಿಎಂ

## 679

| ಕೆ. ೧೪೬೧ | **ರಾಮನಾಥ ಚರಿತೆ** | ಸಾಂಗತ್ಯ |
|---|---|---|
| ೧೨.೧″ × ೧.೮″ | ನಂಜುಂಡ | ಸು. ೧೫೦೦ |
| ೧–೩೧೧ ಪತ್ರ | ೮ ಪಂಕ್ತಿ | ೫೮ ಅಕ್ಷರ |

**ಆದಿ :** ಶ್ರೀ ಗಿರಿಜಾಸ್ಯಾಂಬುಜದ ಸನಾಯಕ
ಭೋಗಿ ಭೂಷಣ ಭಾಳ ನೇತ್ರಾ
ಭಾಗೀರಥಿಧರ ಭವರೋಗವೈದ್ಯ ನೀ
ನಾಗು ಶಂಕರ ಶರಣೆನಗೆ ॥ ೧ ॥

**ಅಂತ್ಯ :** ಗಂಗಾ ತರಂಗ ತುರಂಗ ಸಂಘಾತ ಲಿಂ
......ಮತ್ತವಾಂಗಾ
ಅಂಗಜ ಗಜ ಮಾತಂಗ ವಂದ್ವಾನನವು
ಲಾಂಗನಭವನೊಪ್ಪಿದನೂ ॥ ೧೧೯ ॥

ಯಿದು ಸಮಸ್ತ ಸುರಾಸುರವನಾಲಿ ಮಾಲ ಕೀಲಿತ...ಭಾ ಪುಂಜ ರಂಜಿತ ಚಂದ್ರಚೂಡ ಚರಣಾರವಿಂದ ಮಧೂಳಿ ಮಧುಕರಾಯಮಾ ಮಾಧವ ಸೂನು ಕವಿತಾ ವಿಶಾರದ ನಂಜುಂಡ ವಿರಚಿತ.. ರಾಮಚರಿತ ಮಹಾ ಪ್ರಬಂಧದೊಳಾಶ್ವಾಸ......ವರ್ನ್ನನಂಯೇಕಾದಶಶ್ವಾಸಂ ॥ ಸಾಂಗತ್ಯಂ ಸಮಾಪ್ತಂ ಮಂಗಳ ಮಹಾ ಶ್ರೀ......ವರದ ಜೇಷ್ಟ ಬಹುಳ ೮ಲ್ಲು ಸೋಮವಾರ ಶ್ರೀಮದ್ರಾಜಾಧಿರಾಜ ಸಿದ್ಧೇಗೌಡರೈಯ್ಯನ ಮಗ ಅಂಕೈಯ್ಯನವರಿಗೆ ಚೆಂನ್ನಪಟ್ಟಣದ ತಿರುಮಲಯ್ಯ ..ಬರದ ಬರಹ ಸಾಂಗತ್ಯದ ಪುಸ್ತಕಕ್ಕೆ ಸಮಾಪ್ತ ಮಂಗಳ ಮಹಾ ಶ್ರೀ.

**ವಿಷಯ :** ಕುಮಾರರಾಮನ ಕಥೆ.

**ವಿಶೇಷ :** ಸಮಗ್ರ. ಕೆಲವು ಪತ್ರಗಳ ಅಂಚುಗಳು ಮುರಿದಿವೆ. ಕೊನೆಯ ಗರಿಯ ಸ್ವಲ್ಪಭಾಗ ಮುರಿದು ಲುಪ್ತವಾಗಿದೆ. ಶಕಟರೇಫವಿದೆ. ಬರಹ ಚೆನ್ನಾಗಿದೆ.

—ಕೆಆರ್ ಎಸ್

## 680

| ಕೆ. ೧೫೨೭ | **ರಾಮನಾಥ ಚರಿತೆ** | ಸಾಂಗತ್ಯ |
|---|---|---|
| ೧೫.೮''×೧.೫'' | ಸಂಜುಂಡ | ಸು. ೧೫೮೦ |
| ೧–೧೩೨ ಪತ್ರ | ೭ ಪಂಕ್ತಿ | ೫೪ ಅಕ್ಷರ |

**ಆದಿ :** ಶುಭಮಸ್ತು × × × ಕನಕಗಿರಿಯ ಪದ್ಮಾವತಿಯಂಮನವರ ದಿವ್ಯಶ್ರೀ ಪಾದವೆ ಗತಿ । ಬೆಳುಗುಲಿಯ ಬ್ರಹ್ಮದೇವರ ಪಾದವೆ ಗತಿ ॥ ಕಲ್ಲ ಹಳ್ಳಿಯ ದೇವರುಗಳುಡ ಹೇಳಿದ ರಾಮನಾಥನ ಸಾಂಗತ್ಯಕ್ಕೆ ಮಂಗಳ ಮಹಾ ಶ್ರೀ ಶ್ರೀ

ಶ್ರೀ ಗಿರಿಜಾಸ್ಯಾಂಬುಜ ದಿನ ನಾಯಕ
ಭೋಗಿ ಭೂಷಣ ಭಾಳನೇತ್ರ
ಭಾಗೀರತೀಧರ ಭವರೋಗ ವೈದ್ಯ ನೀ
ನಾಗು ಶಂಕರ ಶರಣೆನಗೆ ॥ ೧ ॥

**ಅಂತ್ಯ :** ಸುಟ್ಟಿವರಾರು ಪುರವಸಮರ...
...........
...........
......ಟ್ಟುವ್ವೆ ಮಿಕ್ಕದೇವರನು ॥ ೧೬ ॥
ಪಶುನಾಮವನಿತ್ತುಳಿದ ದೇವತೆಗಳಿಗೆ

ಪಶುಪತಿತ್ವವನಾಂತವಗೆ
ಪಸುಗಳ ಪಾಸಟಿಯೆಂದು ನುಡಿದು......

ವಿಷಯ : ಕುಮಾರರಾಮನ ಕಥೆ.

ವಿಶೇಷ : ಅಸಮಗ್ರ. ಈ ಪ್ರತಿಯಲ್ಲಿ ಪೀಠಿಕಾ ಸಂಧಿಯಿಲ್ಲ. ಆದರೆ ಮೊದಲಿನಲ್ಲಿ ಬೇರೆ ಒಂದು ಪತ್ರದಲ್ಲಿ ಪೀಠಿಕಾ ಸಂಧಿಯ ೧೪ ಪದ್ಯಗಳನ್ನು ಬರೆದಿದೆ. ೨೫ನೆಯ ಸಂಧಿಯಲ್ಲಿ ೧೭ ಪದ್ಯಗಳವರೆಗಿದೆ.

—ಜಿಜಿಎಂ

## 681

ಕೆ. ೧೬೧೭ **ರಾಮನಾಥ ಚರಿತೆ** ಸಾಂಗತ್ಯ
೧೩'' × ೧.೮'' ನಂಜುಂಡ ಸು. ೧೫೦೦
೧-೩೪೧ ಪತ್ರ ೭ ಪಂಕ್ತಿ ೬೦ ಅಕ್ಷರ

ಆದಿ : ಶ್ರೀ ಜ್ಯೋತಿರ್ವುಹೇಶರಾಯ ನಮಃ ॥ ಶಾರದಾ ಗುರುಭ್ಯೋ ನಮಃ ॥
ಗಣಾದಿಪಾಯ ನಮಃ
ಶ್ರೀ ಗಿರಿಜಾಸ್ಯಂಬುಜ ದಿನನಾಯಕ
ಭೋಗಿ ಭೂಷಣ ಫಾಲನೇತ್ರಾ ॥
ಭಾಗೀರಥೀಧರ ಭವರೋಗ ವೈದ್ಯ ನೀ
ನಾಗು ಶಂಕರ ಶರಣೆಮಗೆ ॥ ೧ ॥

ಅಂತ್ಯ : ಆ ಸಮಯದೊಳೆ ಸಿವೇಂದ್ರಜಾಲದೊಳಂ
ದಾಸು ಕುಮಾ... ॥
ವಾಸ...ಸಿ ಕೊಂಡಿಂದ್ರನನನು ಮತ ।
ವಾಸಿ ಬಂದನು ಸಭೆಯೊಳಗೆ ॥ ೭೬ ॥
ಬಂದು ಭೂಮಿಗೆ ಮೈಯಿಕ್ಕಿ ಬಿದ್ದವನೆಳ್ದು
ನಿಂದು ನೊಸಲಿಗಂಜಳಿಯಶಾ ॥
ವಂದಿ..........
................ ॥

ವಿಷಯ : ಕುಮಾರರಾಮನ ಕಥೆ.

ವಿಶೇಷ : ಕೃತಿ ಅಸಮಗ್ರ. ಕೆಲವು ಗರಿಗಳು ತ್ರುಟಿತವಾಗಿವೆ. ಅಕ್ಷರಗಳು ಸ್ಫುಟವಾಗಿವೆ.

—ಎಂಪಿಎಂ

682

ಕೆ. ೮೬೩ **ರಾಮನಾಥ ಚರಿತೆ** **ಸಾಂಗತ್ಯ**

೧೨.೯'' × ೧.೨'' ಗಂಗ ಸು. ೧೬೫೦

೧–೧೦೪ ಪತ್ರ ೬ ಪಂಕ್ತಿ ೬೮ ಅಕ್ಷರ

**ಆದಿ :** ಶ್ರೀ ಶಾರದಾಯೆ ನಮಃ ॥ ರಾಮನ ಕಥೆ ಗಂಗು ಪ್ರತಿ ॥
ಶ್ರೀ ಗಿರಿಜಾಸ್ಯಾಂಬುಜ ದಿನ ನಾಯಂಕ
ಭೋಗಿ ಭೂಷಣ ಭಾಳನೇತ್ರಾ ॥
ಭಾಗೀರತಿಧರ ಭವರೋಗವೈಧ್ಯ ನೀ
ನಾಗು ಶಂಕರ ಶರಣೆನಗೆ ॥ ೧ ॥

× × ×

ಕಂನ್ನಡ ಕವಿಜಾಣ ರಂನನು ಪದಜಾತಿ
ಯಿಂನ್ನು ಮುಂನ್ನವೆ ಪಾಂಚಾಲ ॥
ಚೆಂನ್ನ ಬುಜಂಗದರನ ಭೃತ್ಯ ಗಂಗನ ಸಂ
ಪಂನ ಪೇಳಿದ ಕ್ರುತಿಯಾ ॥ ೮ ॥

**ಅಂತ್ಯ:** ನೊ...ಳನು ಮಗಳನು
ಪಾಡರಿಹನು ಚಿಂತೆಯುಲಿ ॥
ಬೇಡ ಮಗಳೆ ಕೂಡಿದ ಜನರೊಂದೊಂದ
ನಾಡಿಕೊಂಬರು ಮಾನ್ಯವನೂ ॥ ೯೯೧ ॥
ನಿಂನ್ನ ನಿನ್ನಾಳು ವದಕೆಯೆಕೆದ ನೀರುಂಟು
ಯೆಂನ್ನೊಳಂ ನು......

**ವಿಷಯ :** ಕುಮಾರರಾಮನ ಕಥೆ.

**ವಿಶೇಷ :** ಅಸಮಗ್ರ. ಹಲವಾರು ಪತ್ರಗಳಿಗೆ ಹುಳುಹೊಡೆದು ರಂಧ್ರಗಳಾಗಿವೆ. ೧೭, ೫೨, ೭೪, ೭೮, ೭೯, ೯೨, ೯೭ನೆಯ ಪತ್ರಗಳಿಲ್ಲ. ೨೧, ೨೫, ೯೧, ೯೩—೯೭, ೯೯, ೧೦೩ನೆಯ ಕ್ರಮಾಂಕಗಳ ಪತ್ರಗಳು ಬಹು ಪಾಲು ಮುರಿದು ಲುಪ್ತವಾಗಿವೆ.

—ಕೆಆರ್‌ಎಸ್

## 683

ಕೆ. ೧೨೯ ರಾಮನಾಥ ಚರಿತೆ ಸಾಂಗತ್ಯ

೧೩.೩'' × ೧.೮'' ಗಂಗ ಸು. ೧೬೫೦

೪–೬೪ ಪತ್ರ ೮ ಪಂಕ್ತಿ ೬೪ ಅಕ್ಷರ

ಆದಿ : ಕರದಿರೇತಕೆಯೆಂದೆನುತ ಲಿಂಗಂಣನು
ಕರವ ಮುಗಿದು ಬೆಸಗೊಂಡಾ ॥ ೬೬ ॥
ಚೆಂನಿಗ ರಾಮನ ಕರತಂನಿ ಯೆಂನುತಾಲಿ
ವೊಲಿದು ವಲಗದೊಳು ನುಡಿದಾ
ಕೇಳುತ್ತ ಹರುಸವ ಮಾಡುತ್ತ ಲಿಂಗಂಣ
ನಿಲ್ಲದೆ ತಂನ ಮನದೊಳಗೆ ॥ ೬೭ ॥ (ಒಂದನೆಯ ಸಂಧಿಯಲ್ಲಿ)

ಅಂತ್ಯ : ವಳಗಂಗೋಟರವುರ ತೆಲುಗ ಮಂನೆಯರೆಲ್ಲ
ಯಿಳವು ಲೆತ್ತವ ಬೇಗಲೆಂದಾ
ಹೇಳಿದ ಮಾತ ಕೇಳುತ ರಾಮನಾಥನು
ಮುರಿದು ಸುತ್ತಿದನು ಕೇಶವನೂ ॥ ೧೯ ॥
ಹರಳ ಕಡೆಯುವನಿಕಿದ ರಾಮನಾಥನೂ
ಬೆರಳ ಮುಂದ್ರಿಕೆಯುನಿಕಿದಾನು
ಧರಣಿರಾಯ... (ಎಂಟನೆಯ ಸಂಧಿಯಲ್ಲಿ)

ವಿಷಯ : ಕುಮಾರರಾಮನ ಕಥೆ.

ವಿಶೇಷ : ಅಸಮಗ್ರ. ಬರಹ ಚೆನ್ನಾಗಿದೆ. ೧೮, ೧೯, ೩೯, ೪೫, ೫೦, ೫೫ನೆಯ ಕ್ರಮಾಂಕದ ಪತ್ರಗಳಿಲ್ಲ.
[ಕ. ಹ. ಪ್ರ. ವ. ಸೂ. ತೃತೀಯ ಸಂಪುಟ ಪುಟ ೪೧೫–೪೨೦ ಕ್ರಮಾಂಕ. 1441–1448 ನೋಡಿ]

—ಕೆಆರ್ಎಸ್

## 684

ಕೆ. ೧೨೨೪ ರಾಮನಾಥ ಚರಿತೆ ಸಾಂಗತ್ಯ

೮.೫" × ೧.೭" ಗಂಗ ಸು. ೧೬೫೦

೫೭–೧೮೫ ಪತ್ರ ೯ ಪಂಕ್ತಿ ೪೪ ಅಕ್ಷರ

ಆದಿ : ಪದ ॥ ಅರ್ಜನಸಮ ವೈರಿ ಕುಮುದಮಾರ್ತಾಂಡನೆ
ರಕ್ಕಸವೈರಿದಲ್ಲಣಸೇ
ಸಕ್ಕರೆಯಿಲ್ಲನ ವೈರಿಯುಣಗನಲ್ಲಿರೆ

ವರ್ಕ್ಕರಿಂದಲಿ ಪಿಡಿದವನೇ ॥ ೧ ॥ (೫೭ನೆಯ ಪತ್ರದಿಂದ)

× × ×

ಪ್ರಥಮ ಸಂಧಿ ಸಪೂಪ್ತ ಮಂಗಳ ಮಹಾ ಶ್ರೀ.
ಶ್ರೀ ಗಿರಿಜಾಮುಖಾಂಬುಜ ದಿನನಾಯಕ
ಭೋಗಿಭೂಷಣ ಭಾಳನೇತ್ರ
ಭಾಗೀರತೀಧರ ಭವರೋಗವೈದ್ಯ ನೀ
ನಾಗು ಶಂಕರ ಶರಣಾರ್ತಿ ॥ ೧ ॥ (೭೮ನೆಯ ಪತ್ರದಿಂದ)

**ಅಂತ್ಯ :** ಕಂದರ್ಪರೂಪ ರಾಮೈಯನಾನ ಚರಿತೆಯ
ಚಂದಚಂದದಲಿ ಕೇಳ್ವರಿಗೆ
ಬಂದಾನ ಹೋಗಿ ಸಂತಾನ ಬರಲೆಂಬಲ್ಲಿಗೆ
ಸಂಧಿ......ಪೂರಾಯ ॥ ३೦೯ ॥
ಅಂತೂ ಸಂಧಿ ೬ಕ್ಕಂ ಪದನೂ ೧೪೭೯ಕ್ಕಂ ಮಂಗಳ ಮಹಾ ಶ್ರೀ.

**ವಿಷಯ :** ಕುಮಾರರಾಮನ ಕಥೆ.

**ವಿಶೇಷ :** ಅಸಮಗ್ರ. ಗ್ರಂಥದ ಸ್ಥಿತಿ ಉತ್ತಮವಾಗಿಲ್ಲ. ೧೨೯, ೧೬೧ನೆಯ ಕ್ರಮಾಂಕದ ಪತ್ರಗಳ ಅರ್ಧಭಾಗ ಮುರಿದು ಲೋಪವಾಗಿದೆ. ೧೧೮ನೆಯ ಕ್ರಮಾಂಕದ ಪತ್ರದಲ್ಲಿ ಒಂದು ಕಡೆ ಮಾತ್ರ ಬರಹವಿದ್ದರೂ ಗ್ರಂಥ ಲೋಪವಿಲ್ಲ. ೭೯, ೧೦೬, ೧೦೮, ೧೧೨, ೧೨೧, ೧೨೨ನೆಯ ಕ್ರಮಾಂಕದ ಪತ್ರಗಳಿಲ್ಲ.

—ಕೆಆರ್ ಎಸ್

685

| ಕೆ. ೧೨೫೦ | **ರಾಮನಾಥ ಚರಿತೆ** | ಸಾಂಗತ್ಯ |
|---|---|---|
| ೮.೨" × ೧.೮" | ಗಂಗ | ಸು. ೧೬೫೦ |
| ೧–೧೨೦ ಪತ್ರ | ೯ ಪಂಕ್ತಿ | ೫೦ ಅಕ್ಷರ |

**ಆದಿ :** ಶುಭುಮಸ್ತು ॥ ಗಂಗೂರ ಪ್ರತಿ ರಾಮನ ಸಂಗತ್ಯವ ಬರೆಯುದಕ್ಕೆ ನಿರ್ವಿಘ್ನಮಸ್ತು ॥
ಪದ ॥ ...ಜೇಶಾಂಬುಜ ದಿನನಾಯಕ
ಭೋಗಿಭೂಷಣ ಭಾಳನೇತ್ರಾ
ಭಾಗೀರಥೀಧರ ಭವರೋಗ ವೈದ್ಯನೆ
ನಾಗಶಂಕರ ಶರಣಾರ್ತಿ ॥ ೧ ॥ × × ×
...ಕವಿ ಜಾಣ ರನ್ನನು ವಿತ್ಪಂನ್ನ
ಯಿಂನು ಮಂಂನವೆ ಪಂಚಾಳಾ

ಚೆನ್ನಭುಜಂಗನ ಭೃತ್ಯ ಗಂಗೈಯ್ಯ ಸಂ
ಪನ್ನ ಹೇಳಿದನೀ ಕೃತಿಯು ॥ ೮ ॥

**ಅಂತ್ಯ :** ರಾಮನ ಕಥೆಯನಂ ಕೇಳಿದವರಿಗೆ
ಭೂಮಿದಾನಮನಿತ್ತ ಫಲಊ
ಪ್ರೇಮದಿ ಸಕಲೈಶ್ವರ್ಯವಹುದುಯೆಂದು
ರಾಮೇಶ್ವರ ಮುಕ್ತಿಯಿಾವಾ ॥ ೩೧೯ ॥
ಅಂತು ಸಂಧಿ ೩ಕ್ಕಂ ಪದನು ೨೧೧೫ಕ್ಕಂ ಜಯ ಮಂಗಳ ಮಹಾ ಶ್ರೀ.

**ವಿಷಯ :** ಕುಮಾರರಾಮನ ಕಥೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ.

—ಜಜಎಂ

## 686

| ಕೆ. ಎ. ೪೩೨/೧ | ರಾಮನಾಥ ವಿಲಾಸ | ಚಂಪು |
|---|---|---|
| ೯.೨"×೧೧.೬" | ಸದಾಶಿವಯೋಗಿ | ೧೫೫೪ |
| ೧–೧೬೧ ಪುಟ | ೨೧ ಪಂಕ್ತಿ | ೨೯ ಅಕ್ಷರ |

**ಆದಿ :** ಶ್ರೀ ಗುರು ರಾಮನಾಥಲಿಂಗಾಯಂ ನಮಃ ॥ ಶುಭಮಸ್ತು ॥ ರಾಮನಾಥ ವಿಲಾಸ ಸ್ವಸ್ತಿ ಸಮಸ್ತ ವಿಷಯ ವಿಶ್ರುತ ವಿನೂತನಾಗಣ್ಯ ಪುಣ್ಯಪ್ರದೇಶ ಮಾದ ಹೊಯ್ಸಳರಾಜ್ಯದೊಳೊಪ್ಪುತಿರ್ಪ ಮಂದ್ರಾಪುರದೊಳ್ ತತ್ಪುರ ವಾಸಿಯಾದ ಸಕಲ ಬ್ರಹ್ಮಾಂಡ ಪರಿಪೂರ್ಣ ಚತುರ್ದಶ ಭುವನಾಧೀಶ್ವರ ಶ್ರೀ ರಾಮೇಶ್ವರಲಿಂಗಮೂರ್ತಿಯಿಂ ವೀರಶೈವ ದೀಕ್ಷೆಯಂ ಪಡೆದುಂದಂ ಪುಸಿಯೆಂದು ತಿಳಿದಂ ಶಂಕೆಯ ಮಾಡಿದ ಶೈವರ್ಗೆಯಾ ರಾಮೇಶ್ವರ ಲಿಂಗಮಂ ಸಾಕ್ಷಿಯಿಂ ನುಡಿಯಿಸಿ ಮೆಱೆದು ಭೂಲೋಕದೊಳಾ ವೀರಶೈವ ಮಂತಮೆ ವೇದಾಗಮಶಾಸ್ತ್ರ ಪುರಾಣಂಗಳೊಳುತ್ತರಮೆಂಬುದಂ ಪ್ರಾಚುರ್ಯಂಗೈದ ರಾಮನಾಥಾಚಾರ್ಯರ ಚಾರಿತ್ರಮಂ ಪೇಳ್ವೀ ರಾಮನಾಥವಿಲಾಸವೆಂಬ ಪೆಸರನುಳ್ಳ ಮಹಾವಸ್ತುಕ ಪ್ರಬಂಧದೊಳೀಕೃತಿ ಪೀಠಿಕಾ ರೂಪಮಾದ ಪ್ರಥಮೋಲ್ಲಾಸಮಂ ಪೇಳ್ವೆನದೆಂತೆಂದೊಡೆ × ×
ವರಶೃಂಗಾರದ ಸೋಮಣಾರ್ಯತನುಜಂ ಗಂಗಾಧರಂ ತತ್ಸುತಂ
ಶರಣಾಗ್ರೇಸರ ಸಾಮವೇದಿ ಗುರುಂವಾದೀಮತ್ತನುಜೋತ್ತಮಂ
ಹರ ಪೂಜಾನಿರತಂ ಸದಾಶಿವಲಸನ್ನಾಮಂ ಮಹಾ ಕಾವ್ಯ ನಿ
ಸ್ತರಣ ಪ್ರೌಢನಶೇಷ ಸದ್ಗುಣಧಿಯೆಂದೆಲ್ಲರ್ಪೊಗಳ್ವಬುಧರ್ ॥ ೪೪ ॥

**ಅಂತ್ಯ:** ಇದು ಶ್ರೀಮದಖಿಲ ಭುವನ ಭವನಾಂತರ್ಗತಾನಂತ ವಿಮಲತರ ವಿಚಿತ್ರ ವಿದ್ವತ್ಕವಿಕಾಲ ಸಾರ್ವಭೌಮ ಸರ್ವಜ್ಞ ಸದಾಶಿವಯೋಗೀಶ್ವರ ವಿರಚಿತ ಮಾದ ರಾಮನಾಥವಿಲಾಸವೆಂಬ ಮಹಾಪ್ರಬಂಧದೊಳಂ ರಾಮನಾಥಾ ಚಾರ್ಯರ ಐಕ್ಯಕಥನವೆಂಬ ಹದಿನಾಱನೇಯುಲ್ಲಾಸಂ ಸಂಪೂರ್ಣಂ

ಕಂದ ॥ ಗಿರಿನಗವಾರಿಧಿಚಂದ್ರಂ
ನಿರುತಂ ಶಕವರ್ಷ ರಾಕ್ಷಸಾಬ್ದಂ ಶ್ರಾವಣ
ವರಕೃಷ್ಣ ಪಂಚಮಿಯೊಳಂ
ಬರೆದಂ ಬ್ರಹ್ಮಂ ಸದಾಶಿವಾಖ್ಯನ ಕೃತಿಯಂ ॥ ಶ್ರೀ ಶ್ರೀ.

**ವಿಷಯ :** ವೀರಶೈವ ಮತದ ಹಿರಿಮೆಯನ್ನು ಸಾರಿದ ರಾಮನಾಥಾಚಾರ್ಯನ ಕಥೆ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ ಡಿ. ನಂ. ೧೧೪೪ ಮತ್ತು ಡಿ. ನಂ. ೨೪೧ ರಿಂದ ೧೯೪೩–೪೪ನೆಯ ಇಸವಿಯಲ್ಲಿ ಎಸ್. ನಾಗರಾಜರಾವ್ ಭಾಸ್ಕರ್ ಎನ್ನುವವರು ಮದರಾಸಿನಲ್ಲಿ ಪ್ರತಿ ಮಾಡಿದ್ದಾರೆ.

—ಹಜಿಎಂ

## 687

ಕೆ. ೧೩೫೬/೪ | **ರಾಮಪೀಟನ ಕ್ರಮ** | ಗದ್ಯ
೧೬.೪"×೧.೯" | ಮುಮ್ಮಡಿ ಕೃಷ್ಣರಾಜ | ೧೮೫೦
೩೩೮ನೆಯ ಪತ್ರ | ೬ ಪಂಕ್ತಿ | ೩೮ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ ॥ ಶುಭಮಸ್ತು ॥ ಶಾಲಿವಾಹನ ಶಕ ವರ್ಷಂಗಳು ೧೭೪೦ ನೆ ವರ್ತಮಾನವಾದ ಈಶ್ವರ ಸಂವತ್ಸರದ ಆಶ್ವೀಜ ಬ ೧೩ ಶುಕ್ರವಾರ ... ಚಿಸಿದ ರಾಮಪೀಟನ ಕ್ರಮ ॥

ಶ್ಲೋ ॥ ರಾಮೋ ರಾಮಾನುಜ ಶ್ಚೈವ ಭರತೋ ಲಕ್ಷ್ಮಣಾನುಜಃ ।
ಏಕೈ ತಸ್ಯ ತು ದೇವಸ್ಯ ರತ್ನ ಸಂಖ್ಯಾಯಃ... ...

**ಅಂತ್ಯ :** ...ಶತ್ರುಘ್ನ ಬಾಜುಗೆ ಯಲೆ। ೯ಕ್ಕೆ ಹಾಸುಂಯುಕ್ಕಾ ೧। ಧೊರೆ ಶತ್ರುಘ್ನ ೨। ರಾಣಿ ಶ್ರುತಕೀರ್ತಿದೇವಿ ೩। ಗುಲಾಮ ಗುಹ ೪। ಹತ್ತು ಸಂಖ್ಯೆ ಉಳ್ಳಯಲೆಯಿಂ . ಯಲೆವರಿಗೆಯಲಿ ೫। ಅಂತು ೯ ಯಲೆ। ಯಿಶಾ ಯಲೆಗಳಿಗೆ ಚಿಹ್ನೆಗಳು ಚಾಮರದ ಗುರುತು। ಯಿಶಾ ಮೇರೆ ಬಾಜು ನಾಲ್ಕರಿಂದ ಯಲೆ ೩೬ ಯೀರುವ...ರೆಗೆ ವರಹಾದ ಆಟ। ಬೂಜಿನ ಆಟ। ಸಹಾ ಬುದ್ಧಿವಂತರು ನೋಡಿಕೊಂಡಾಡುವುದು ॥

**ವಿಷಯ :** ರಾಮಪೀಟು ಎಂಬ ಆಟದ ವಿವರಣೆ.

**ವಿಶೇಷ :** ಅಸಮಗ್ರ. ಪತ್ರ ಮುರಿದು ಕೆಲವು ಪದಗಳು ಲುಪ್ತ. ಪ್ರತಿಯ ಆದಿಯ ೧೧ ಪತ್ರಗಳಲ್ಲಿ ವಿಷಯ ಸೂಚಿ ಕೊಟ್ಟಿದೆ. ಇದೇ ಕಟ್ಟಿನಲ್ಲಿ ಚಾಮುಂಡಿಕಾ ಲಘು ನಿಘಂಟು, ಗಂಜೀಫು ಲಕ್ಷಣ ಮೊದಲಾದ ೧೮ ಕೃತಿಗಳಿವೆ.

—ವೈಸಿಬಿ

688

ಕೆ. ಎ. ೪೪೨ ರಾಮಾನುಜ ವಿಜಯ ಗದ್ಯ

೯"×೧೧.೩" ದೊಡ್ಡತಿಮ್ಮದಾಸ ಸು. ೧೭೦೦

೧–೧೪೬ ಪುಟ ೨೦ ಪಂಕ್ತಿ ೧೯ ಅಕ್ಷರ

**ಆದಿ :** ಬಲ್ಲಿಗೆ ಪ್ರಕರಣ ೧೩ಕ್ಕಂ ಮಂಗಳ ಮಹಾಶ್ರೀ × × ಮತೆ ರಾಮಾನುಜಾಯ ನಮಃ ತಾತಾಚಾರ್ಯ ಸ್ವಾಮಿಯತ್ತಿರುವಡಿಗಳೆ ಶರಣಂ। ಯಂಚೆರುಮಾಸಾರ ತಿರುವಡಿಗಳೇ ಶರಣಂ। ಕಂದವಿದ್ಯಾ।

ಕಮಲಾಲಯಂ ಸುಪ್ರಿಯಂ

ಕಮಲ್ಯಾಂ ಕಮಲಸುತನ ಪಡೆದ ಪವಿತ್ರಂಸಿ

ಕಮಲಾ ಪ್ರಕೋಟಿ ..

ಕಮಲಕರ ಪೂರ್ನಚೆಲ್ವ ವೆಂಕಟರಮಣಾ॥

ಮುಂದಳ ಕಥಾ ಪ್ರಸಂಗ। ಯೇ ಮಹಾದೇವನೆ। ಸಕಲಲೋಕ ರಕ್ಷಕನೆ। ಶ್ರೀಣ ಶ್ರೀನಾಥನೆ। ಯೆ ಶ್ರೀರಂಗನಾಯಕರ ಸಂನ್ನಿಧಿಯಲ್ಲಿ ಬಿಜಿಮಾಡಿರ್ದರೂ ಯಂದು। ನನಗೆ ಬಾಧಿಗಲಿಸಿದಿರಲ್ಲಾ। ಯೆತಿರಾಜರು ಸಕಲ ಮಾನ್ಯ ಸದ್ಗೋಷ್ಟಿಯಿಂದ ... ವಾರಿಗಳ ಕೂಡೆ ತರ್ಕವಂ ಮಾಡಿಯಾನೂ ಯಂದು ಕೃಪೆಮಾಡಿಬಿಡಿ।

**ಅಂತ್ಯ :** ನಾರಾಯಣ ಸ್ವಾಮಿಯನ್ನು ಅಭಿಮಾನಿಸಿ ಉದ್ರಾಚಲಕ್ಕೆ ಬಿಜಿಮಾಡಿದರೂ। ಉದ್ರಾಚಲದಲ್ಲಿ ಕೇಶವನಾರಾಯಣ ಸ್ವಾಮಿಯನ್ನು ಉದ್ಧರಿಸಿ ಅಭಿಮಾನಿಸಿ ಪಾಶಾಂಡಿ ಮತಗಳ ನಿರ್ದುಮಾವಂ ಮಾಡಿ ಅಲ್ಲಿಂದಲೂ। ಶ್ರೀಮದುರಾಂತ್ರಕ್ಕಕ್ಕೆ ಬಿಜಿಮಾಡಿ ಮದುರಾಂತ್ರಕ್ಕಾಧ। ಆಧಿನಾರಾಯಣ ಸ್ವಾಮಿಯ ರಕ್ಷಿಸಿದುದ್ವಾಯರ್ಥವಂನ್ನು ಉಪದೇಶಿಸಿ ಶಿಷ್ಯರ ಮಾಡಿಕೊಂಡು ಸಾಕಲ ಮತಂಗಳಂ ಕಾಂಡ್ರಿಸಿ ಶ್ರೀನಾರಾಯಣ ಸ್ವಾಮಿಯ ವಿಂದ ...

**ವಿಷಯ :** ಶ್ರೀರಾಮಾನುಜಾಚಾರ್ಯರ ಚರಿತ್ರೆ ಮತ್ತು ವಿಶಿಷ್ಟಾದ್ವೈತದ ನಿರೂಪಣೆ.

**ವಿಶೇಷ :** ಅಸಮಗ್ರ. ಅಶುದ್ಧ.

—ವೈಸಿಬಿ

689

| ಕ. ೭೦೦ | ರಾಮಾಯಣ | ಪಟ್ಟಿ |
|---|---|---|
| ೧೯''×೧.೫'' | ಕುಮುದೇಂದು | ಸು. ೧೨೭೫ |
| ೧–೧೧೮ ಪತ್ರ | ೭ ಪಂಕ್ತಿ | ೮೮ ಅಕ್ಷರ |

**ಆದಿ :** ವಿಜೆಯಂನಾಥಾಯ:ನಮಃ । ಶುಭಮಸ್ತು । ರಾಗ । ಘನಮಂಜರಿ
ರಾಮ ಕಥೆಯಂ ಮನಃ
ಪ್ರೇಮದಿಂ ಕೇಳ್ವರಿಗೆ
ಕಾಮಿತಾರ್ಥಂ ತಪ್ಪದಪ್ಪುದರಿದೆ ।
ಶ್ರೀ ಮಹಿತನಖಿಳ ಸುಖ
ದಾಮನನವದ್ಯತರ
ಸಾಮನವನತ ಸುರೋರಗೇಂದ್ರಂ ॥ ೧ ॥

× × ×

ಚರಿತ ರಘುವಂಶ ಕೃತಿ
ಚರಿತಾರ್ಥರಂತವರು
ಚರಿತಾದಿನಾಯಕಂ ರಾಮಚಂದ್ರಂ
ಚರಿತ ಕವಿ ಕುಮುದೇಂದು
ಪರವಾದಿ ಗಿರಿವಜ್ರ
ವಿರಚಿಸಿದನಿದನನ್ಯ ಸಾಮಾನ್ಯನೆ ॥ ೮ ॥

**ಅಂತ್ಯ :** ಕಡಲ್ಗಳೆಯೊಂದಾಗೆ ಮಾಣವೆ
ಘುಡುಂಘುಡಿಪ ಕಡೆಗಾಲದ ಭದ್ರ
ಗಡಣದೊಳು ಗಡಣಿಸಿ ಬಿಡದೆ ಪುರಿರುತ್ತಮಿದ್ರ್ಭವೆನೆ
ಸಿಡಿಲು ಮಿಂಚಿನ ಮೊಳಗಿನುರವಣೆ
ಪಡೆಯೆ ಭಯಮಂ ದಹನ ಶರಲಂ
ಕಿಡಿಸುತಂ ಬಂದುದು ಮುಕುಂದನ ತೋರದಾರುಣ ವಾರಣಾಸ್ತ್ರಂ ॥ ೭೦ ॥

**ವಿಷಯ :** ಜೈನ ರಾಮಾಯಣ.

**ವಿಶೇಷ :** ಅಸಮಗ್ರ. ಅಕ್ಷರ ಸ್ಫುಟ ಹಾಗೂ ಸುಂದರ. ಶಕಟರೇಫ ಪ್ರಯೋಗವಿದೆ. ೧೦ಳನೇ ಪತ್ರ ಮುರಿದಿದೆ. ಕೊನೆಯ ೫ ಪತ್ರಗಳು ಅಲ್ಲಲ್ಲಿ ತ್ರುಟಿತವಾಗಿವೆ.

—ಎಂಎನ್ಎಲ್

690

ಕ. ೧೦೩೫ | ರಾಮಾಯಣ | ಗದ್ಯ
೧೯.೩"×೨" | ಚಾಮರಾಜ | ೧೬೧೭–೩೭
೧–೭೩೩ ಪತ್ರ | ೧೧ ಪಂಕ್ತಿ | ೧೧೦ ಅಕ್ಷರ

**ಆದಿ :** ಶ್ರೀಮದ್ರಾಮಾಯಣದ ವ್ಯಾಖ್ಯಾನದಲ್ಲಿ ಬಾಲಕಾಂಡ ॥ × × ಶ್ರೀ ತಿಂಮರಾಜ ಭೂಪಾಲ ವಂಶ ಸಿಂಧು ಸುಧಾಕರಾಃ । ಚಾಮರಾಜ ಮಹೀಪಾಲೋದಿಷ್ವಾಕುಲ ಸಮವಿಕ್ರಮಾಃ । ಶ್ರೀ ಮಹೀಶ ಪುರಾಧೀಶ ಶ್ಚಂದ್ರ ಬಿಂಬ ಸಮಾನನ । ಲಕ್ಷ್ಮೀಪತಿ ಕೃಪಾಲಬ್ಧ ಸಮೃದ್ಧಿ ಶುದ್ಧ ಮಾನಸಃ । ಮತಿಮನತಿ ತೇಜಸ್ವಿ ವಿದ್ವತ್ಕಲ್ಪ ಮಹೀರುಹಂ । ವಾಲ್ಮೀಕಿ ಮುನಿನಾ ಪ್ರೋಕ್ತೋ ಶ್ರೀಮದ್ರಾಮಾಯಣಾಸ್ಯ ಚ ॥ × × × ಶ್ರೀಯಃ ಪತಿ ದಿವ್ಯಚರಣಾರವಿಂದಂಗಳಲ್ಲಿ ನಿರತಿಶಯ ಭಕ್ತಿಯುಕ್ತರಾದ ವಾಲ್ಮೀಕಿ ಮುನೀಶ್ವರರಿಂದ ಪ್ರಣೀತವಾದ ಶ್ಲೋಕೈಕ ಶ್ರವಣ ಮಾತ್ರ ಸಮಸ್ತ ಕವಿ ಕಲ್ಮಷಾಪನೋದನ ಪಟುತರ ಮಹ ಧರ್ಮಾರ್ಥಕಾಮ ಮೋಕ್ಷಂಗಳೆಂಬ ಚತುರ್ವಿಧ ಪುರುಷಾರ್ಥ ಸಾಧನವಾದ ಪಂಚಮವೇದ ವೆನಿಸಿಪ್ಪ ಶ್ರೀಮದ್ರಾಮಾಯಣದಲ್ಲಿ ಆದಿಕಥಾ ವೃತ್ತಾಂತವಾವುದೆನಲಾಗಿ ಪರಮ ತಪಸ್ವಿಯಾದ ವಾಲ್ಮೀಕಿ ಮಹಾಮುನಿ ತಪಸ್ಸಿನಲ್ಲಿ ಸ್ವಾಧ್ಯಾಯ ದಲ್ಲಿ ನಿರಂತರ ಪರಿಸನ್ನಮಳವದೋಕ್ತಿ ವಿಲಾಸಗಳಲ್ಲಿ ಪಟುತರ ಬುದ್ಧಿ ಯುಳ್ಳ ನುಡಿಜಾಣ್ಮೆಯುಳ್ಳ ಮಹಾಮುನಿಗಳಿಗೆ ಯುತ್ತಮವಾದ ನಾರದ ಮುನೀಶ್ವರನಿಗೆ ಸದ್ವಿನಯ ಭಯಭಕ್ತಿಗಳಿಂದಭಿವಂದಿಸಿ ವೊಂದಾನೊಂದು ಪ್ರಶ್ನೆಯಂ ಮಾಡಿ ಕೇಳುತ್ತಲಿದ್ದನು. ಯೆಲೆ ನಾರದ ಮುನೀಶ್ವರನೆ ಯಿೀಗ ಲೋಕದಲ್ಲಿ ಜ್ಞಾನಾದಿ ಸಕಲ ಸದ್ಗುಣಂಗಳಿಂದ ಯುಕ್ತನಾಗಿ ಅತಿ ಪರಾಕ್ರಮಿಯಾಗಿ ಧರ್ಮರಹಸ್ಯವನು ಬಲ್ಲವನಾಗಿ ಮಾಡಿದ ಉಪಕಾರ ವನು ಬಲ್ಲವನಾಗಿ × × × ಇಂಥಾ ಪುಣ್ಯಪುರುಷನ ಪ್ರಸಂಗವನು ಕೇಳುವದಕ್ಕೆ ನಂನ ಮನಸ್ಸಿಗೆ ಲವಲವಿಕೆಯಾಗುತಿದ್ದಿತು.

**ಅಂತ್ಯ :** ಅಯೋಧ್ಯಾಪಟ್ಟಣವು ಅನೇಕ ಸಾವಿರ ವರ್ಷ ನಿರ್ಮಾನುಷ್ಯವಾಗಿ ಋಷಭ ನೆಂಬಂಥಾ ರಾಯನನು ಪಡೆದು ಕೆಲವು ಕಾಲದ ಮೇಲೆ ಪಟ್ಟಣವಾಧೀತು. ಯಿಶಾ ಉತ್ತರ ರಾಮಾಯಣವೆಂಬ ಆಖ್ಯಾನವು ಪ್ರಚೇತಸ್ಸಿನ ಕುಮಾರಾಗಿ ದ್ದಂಥಾ ವಾಲ್ಮೀಕಿಯು ಬ್ರಹ್ಮದೇವರ ವರಪ್ರಸಾದದಿಂದ ಮಾಡಿದಂಥವ ನಾದ ಕಾರಣ ಬ್ರಹ್ಮದೇವರು ಆವಾಗಲೂ ಕೇಳುವದಾಗಿ ದೇವತೆಗಳಿಗೂ ಪೂಜ್ಯವಾಯಿತೂ ಯೆಂಬ ವೃತ್ತಾಂತದಲ್ಲಿ ಶ್ರೀಮದುತ್ತರ ರಾಮಾಯಣ ದಲ್ಲಿ ೧೧೧ನೇ ಆಶ್ವಾಸಕ್ಕೆ ಮಂಗಳ ಮಹಾ ಶ್ರೀ.

ವಿಷಯ : ರಾಮಾಯಣದ ಕಥೆ.

ವಿಶೇಷ : ೨೩೩ ಪತ್ರಗಳಿಂದ ಕೂಡಿದ ಈ ಸಮಗ್ರ ರಾಮಾಯಣದಲ್ಲಿ ಅಲ್ಲೊಂದು ಇಲ್ಲೊಂದು ಅಂದರೆ ೩೯, ೫೩, ೧೭೨, ೫೯೨, ೫೯೯ನೆಯ ಪತ್ರಗಳು ಮುರಿದು ಲುಪ್ತವಾಗಿವೆ. ೭೦ನೆಯ ಪತ್ರ ಲುಪ್ತ. ಬರಹ ಸುಂದರ ವಾಗಿದೆ. ಪ್ರತಿ ಮಾಡಿದವನ ವಿವರ ಹೊಂಗನೂರಿನಲ್ಲಿನ ಭಾಗವತ ಗೋಪಾಲಯ್ಯ ಎಂದು ೨೩೩ನೆಯ ಪತ್ರದಲ್ಲಿ ಬಂದಿದೆ.

—ಕೆಆರ್‌ಎಸ್

## 691

| ಕ. ಎ. ೩೪೪/೮ | ರಾಮಾಯಣ | ಷಟ್ಪದಿ |
|---|---|---|
| ೧೧"×೨.೮" | ? | ? |
| ೧–೮ ಪತ್ರ | ೨೬ ಪಂಕ್ತಿ | ೨೬ ಅಕ್ಷರ |

ಆದಿ : ಗಜವದನ ಗೌರಿ ಶಾರದೆಗೆ
ಅಜನರಸಿ ಸುಜನ ಸ
ರೊಜಗಳಿಗಭಿವಂದಿಸಿ ವರವಾಲ್ಮಿಕಿ ಮುನಿಪದವಂ
ಭಜಿಸಿ ರಾಮಾಯಣಂ ಪೇಳ್ವೆಸೂ ॥
ಕುಶನ ಕೇಳ್ಬೆ ಪುಷ್ಯ ಶುದ
ದಶಮಿಯುಲಿ ಪ್ರಾರಂಭವಾಯಿತು
ಉಸುರಲದು ಸಂಪೂರ್ನ ಮಾತದಿ ಆಯ್ತು ದೆಸೆಗೆ ॥
ಆ ಕಪೆಂದ್ರರ ಸಹಸಂಮೆಂತುಟೊ
ನಾಲ್ಕು ದಿವಸಕೆ ಶೆತು ನಡದುದು
ನಾಕದಲಿ ಭೇರಿಗಳು ಮೊಳಗಿದವು ಅನೇಕರವದಿ ।
ವಸಿಗೆಯುಸದವು ನಾಲ್ಕು ದಿಕ್ಕಿಗೆ
ಪೊಸತು ಶರದಿಯು ಕಟ್ಟಿತೆಂಬುದ
ಕುಸುಮ ಮಳೆಗಳ ಸುರಿದರಂದಿನ ದೆಸೆಗೆ ಸುರರೂ ॥ ೨ ॥

ಅಂತ್ಯ : ಉರಗದ ಪಾ...ದ ಬಿಗುವಿನಲಿ ಮೈ
ಮರೆತರೆಂಬುದ ಕೇಳಿ
ಗರುಡ ಬಂದೆಬ್ಬಿಸಿ ಖಳನ್ಯಾರರಿಯುದಂತೆ
ಮರಿದಿವಸ ಉದಯದಲಿ ಕೋಟೆಯ
ತರಿದರಂದಿನ ಘಸಣೆಗೋಸ್ಕರ
ಪುರದಜನ ತಲ್ಲಣಿಸೆ ರಾವಣ ...

ವಿಷಯ : ರಾಮಾಯಣದಲ್ಲಿ ಸೇತುಬಂಧನ ಮಾಡಿ ಲಂಕೆಯನ್ನು ಪ್ರವೇಶಿಸುವಿಕೆ.

ವಿಶೇಷ : ಅಸಮಗ್ರ. ಅಶುದ್ಧ. ಇದರೊಂದಿಗೆ ಗರುಡಾಚಲ, ಗಿರಿಜಾಕಲ್ಯಾಣ, ಅನುಭವಾಮೃತ, ನಾನಾರ್ಥ ರತ್ನಾಕರ, ಕರ್ಣಾಟಕ ಶಬ್ದಮಂಜರಿ, ಕಬ್ಬಿಗರ ಕೈಪಿಡಿ, ಅನುಭವಾಮೃತ ಎಂಬ ಇತರ ಏಳು ಗ್ರಂಥಗಳಿವೆ.

— ಜಿಎಸ್‌ಎಸ್

## 692

ಕೆ. ೧೮೩೩ | ರಾಮಾಯಣ ಪಟ್ಟಾಭಿಷೇಕ | ಯಕ್ಷಗಾನ

೧೧.೨"x೧.೭" | ? | ?

೧-೧೦೨ ಪತ್ರ | ೭ ಪಂಕ್ತಿ | ೪೨ ಅಕ್ಷರ

ಆದಿ : ...ಯನಮಃ ॥ ಯಕ್ಷಗಾನ ರಾಮಾಯಣದಲ್ಲಿ ಪಟ್ಟಾಭಿಷೇಕ ಸಂಧಿ ಬರಉದಕ್ಕೆ ಅವಿಘ್ನಮಸ್ತು ॥ ಶುಭಮಸ್ತು ॥
ರಾಗ ॥ ಸಾಟಿ ॥
ಜಯ ಜಾನಕೀಕಾಂತ ಜಯ ಸಕಲ ವೇದಾಂತ
ಜಯತು ಮಹಿಮಾನಂತ ಜಯ ಭಾಗ್ಯವಂತ
ಜಯ ಜಯತಾ ॥ ಪಲ್ಲ ॥
ದಶರಥಾತ್ಮಜ ವೀರ ದಶಕಂಠ ಸಂಹಾರ
ಪಶುಪತಿಯವರ ಮಿತ್ರ ಪಾವನಚರಿತ್ರಾ
ಕುಸುಮ-ಬಾಣಸ್ವರೂಪ ಕುಶಲ ಕೀರ್ತಿಕಲಾಪ
ಅಸಮ ರಾಕ್ಷಸ ಶೀಕ್ಷ ಅಂಬುಜದಳಾಕ್ಷಾ ॥ ಜಯ ॥ ೧ ॥

ಅಂತ್ಯ : ಬಣ್ಣ ಸಾರಣೆ ಮೇಲುಕಟ್ಟು ತೋರಣಗಳು
ಚಿನ್ನದ ಕನ್ನಡಿಯು ಚೆನ್ನಾಗಿ ರಚಿಸಿದ
ಮಯ ವಿಶ್ವಕರ್ಮರಾ ಬಿನ್ನಾಣವೆಂತು ರಂಜಿಪುದು
ಸಂದಣಿ ಭೇರಿ ಸುರಪುರದೊಳಗೆ ಕಟ್ಟಿದರು ತೋರಣವ
ನಳಿನಲೋಚನ ರಾಮ ಜಯಜಯವೆಂದು ಹೂ
ಮಳೆಗಳ ಕರದರು ಸೇತು ಸಂಪೂರ್ಣ ಮಂಗಳ ಮಹಾ ಶ್ರೀ ಶ್ರೀ.
ಅಂತು ಸಂಧಿ ೪೮ಕ್ಕಂ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ರಾಮನಿಗೆ ಪಟ್ಟ ಕಟ್ಟಿದುದು.

ವಿಶೇಷ : ಸಮಗ್ರ. ಪ್ರತಿ ಚೆನ್ನಾಗಿದೆ. ಕಣ್ವಪುರಿ ಶ್ರೀ ಗೋಪಾಲಕೃಷ್ಣನ ಅಂಕಿತ ವಿದೆ.

—ಜಿಜಿಎಂ

## 693

ಕೆ. ಎ. ೪೮೫/೨ ರಾಯರೇಖೆ ಕೊಡುಗೆ ಮಾನ್ಯದ ಲೆಕ್ಕ ಗದ್ಯ

೧೦.೬"×೯.೪" ? ?

೧೨–೨೫ ಪುಟ ೨೦ ಪಂಕ್ತಿ ೨೨ ಅಕ್ಷರ

ಆದಿ : ಶುಭಮಸ್ತು ॥ ಹಂಗಳದ ಸ್ಥಳ. ಹಂಗಳವ ಗ್ರಾಮ. ೧ ಸಾ (ಪಾ) ವಿನಾಯಕನಪುರದ ಗ್ರಾಮ ೧. ಉಭಯಂ ಗ್ರಾಮ ೨ಕ್ಕೆ ಮಾನ್ಯ ॥ ದೇವದಾಯ। ಅಲ್ಲಾಳನಾಥಸ್ವಾಮಿಗೆ ಮೂಡಣ ಹೊಲ ೧ಕ್ಕೆ ಕಂಭ ೧೦೦ಕ್ಕೆ ಲಾಗ ೯೨॥೦. ತೆಂಕಣ ಹೊಲ ೧ಕ್ಕೆ ಕಂಭ ೫೦ಕ್ಕೆ ಲಾಗ ೯೨. ಬಡಗಣ ಹಳಾದ ಹೊಲ ೧ಕ್ಕೆ ಕಂಭ ೧೦೦ಕ್ಕೆ ಲಾಗ ೯೨॥೦, ಬಡಗಣದರೆ ಹೊಲ ೧ಕ್ಕೆ ಕಂಭ ೫೦ಕ್ಕೆ ಲಾಗ ೯೨॥೦. ತೆಂಕಣಮಳಲು ಹೊಲ ೧೦ಕ್ಕೆ ಕಂಭ ೩೦೦ಕ್ಕೆ ಲಾಗ ॥ ೩ ॥ ಅಳ್ಳಾದನಾಥಸ್ವಾಮಿಗೆ ಹೊಲ ೧೪ಕ್ಕೆ ಕಂಭ ೬೦೦ಕ್ಕೆ ಕಂಲಾಗ ೧ ॥ ೨ ॥ ಹಳ್ಳದ ಗದ್ದೆ ಬ ೧, ೮. ೦

ಅಂತ್ಯ : ಸಂಬೂಪುರದ ಗ್ರಾಮದಲ್ಲಿ ನಮ್ಮ ಹೊಲ ಯಾವದು ಯೆಂದರೆ ಊರಿಗೆ ಬಡಗದಿಕ್ಕಿನಿಲ್ಲಿ ಕೋಳದ ಹೊಲದ ಪಡುವಣವೊತ್ತಿನ ಹಳ್ಳದ ದಂಡೆ ಹೊಲವೆ ನಮ್ಮ ಹೊಲ ಪಡುವಣ ತೆವರಿನಲ್ಲಿ ಮಾವಿನ ಮರದ ಅಡಿಯ ಲಿಂಗಮುದ್ರೆ ಕಲ್ಲುಯಿತ್ತು ಚ್ಛಾರ್ರಿಂದ ತಾರಣಸಂವತ್ಸರದ ಫಾಲ್ಗುಣಶುದ್ಧ ೧೪ಲು ಲಿಂಗಮುದ್ರೆಕಲ್ಲಂ ವೊಡೆಹುಯಿದು ಕಣ್ಣಿಗೆ ಕಾಣದ ಹಾಗೆ ಇಟ್ಟು ಬಿಟ್ಟರು. ಮುಂದೆ ಸಹಾಸ್ರಿತವಾಗಿ ನಡೆವ ಜನರು ತಿಳಿದು ಇರೂದು

ವಿಷಯ : ರಾಯರು ನೀಡಿದ ಕೊಡುಗೆಗಳ ವಿವರ.

ವಿಶೇಷ : ಇದೇ ಪುಸ್ತಕದಲ್ಲಿ ಕಮಾಲಚಲ ಮಹಾತ್ಮ್ಯ ಎಂಬ ಮತ್ತೊಂದು ಗ್ರಂಥ ವಿದೆ. ಬರಹವು ಸುಂದರವಾಗಿದೆ. ಶ್ರೀ ಪಿ. ಸುಬ್ರಾಯಭಟ್ಟರು ಮದರಾಸು ಪ್ರಾಚ್ಯಕೋಶಾಗಾರದಲ್ಲಿದ್ದ ಡಿ. 1876ರ ನಕಲು ಪ್ರತಿಯನ್ನು 1947ರಲ್ಲಿ ಮಾಡಿದ್ದಾರೆ.

—ಕೆಆರ್‌ಎಸ್

694

ಕೆ. ಬಿ. ೬೫೭/೧ **ರಾವಣೋದ್ಭವ** ಯಕ್ಷಗಾನ

೮" × ೬.೫" ಸುಬ್ಬಯ್ಯ ೧೯ನೇ ಶತಕ

೧-೩೪ ಪತ್ರ ೧೫ ಪಂಕ್ತಿ ೩೨ ಅಕ್ಷರ

**ಆದಿ :** ಉತ್ತರಖಾಂಡ ರಾಮಾಯಣದೊಳಗಣ ಯಕ್ಷಗಾನ ರಾವಣೋದ್ಭವಾ
ಶ್ರೀ ಗೌರೀವರವಿಂದುಶೇಕರಜಲಾ ಜೂಟಂ ಜಗತ್ಪಾಲ ಕಂ
ಯೋಗೀಂದ್ರಾರ್ಚಿತ ಪಾದಪದ್ಮಯುಗಳಂ ಗಂಗಾಧರಂ ಶಂಕರಂ
ಭೂ ಗೀರ್ವಾಣ ಸಮಸ್ತ ದೇವವಿನುತಂ ವ್ಯಾಘ್ರಜನಾಲಂಕೃತಾ
ನಾಗಾರಾತಿ ತುರಂಗ ಮಿತ್ರನಮಿತಾ ಶ್ರೀ ಮಂಜನಾಥಂಭಜೇ ॥ ೧ ॥

× × × ×

ದ್ವಿಪದೆ ॥ ಕೇತಾರಿ ಗೌಳಾ ॥
ಶ್ರೀಮದುತ್ತರಖಾಂಡ ರಾಮಾಯಣದಲಿ
ರಾಮನಿಗಗಸ್ತ್ಯಮುನಿ ಪೇಳ್ದ ಕಥನದಲಿ ॥ ೧ ॥
ರಾವಣಾದಿಗಳುದಿಸಿ ಮೆರದ ಸಂಗತಿಯಾ
ನಾ ವಿವರಿಸುವೆ ಸರಸ ಗಾನದಲಿ ಕಥೆಯಾ ॥ ೨ ॥
ದುಷ್ಟನ ಚರಿತ್ರವೆಂದೆನುತ ದೂಷಿಸದೆ
ವಿಷ್ಣುಸೇವಕ ವಿಭೀಷಣನುಪೇಕ್ಷಿಸದೆ ॥ ೩ ॥

**ಅಂತ್ಯ :** ವಾರ್ಧಿಕ್ಯಾ ॥
ಶ್ರೀಮದುತ್ತರಖಾಂಡ ಕಥನವಂ ಪ್ರೀತಿಯೊಳ್
ರಾಮನಿಗಗಸ್ತ್ಯ ಮುನಿ ಪೇಳ್ದುದಂ ನಿಖಿಳ ಜನ
ಭೂಮಿಯೊಳಗಾಲಿಸುವ ತೆರದಿ ನಗರಾಖ್ಯಪಟ್ಟಣದಿ ಭೂಸುರ ಕುಲದಲೀ
ನೇಮದಿಂದೆಸೆವ ವಿಠ್ಠಲನಗತಿ ಗೌರಿ ಗು
ಶ್ರೀಮದಿಂ ಪಡದ ಸುತ ಸುಬ್ಬಯನೆಂಬವಂ
ಶ್ರೀ ಮಹಾ ವೆಂಕಟಾಚಲನನುಗ್ರಹದಿಂದೊರೆದನೀ ಸಂಗತಿಯನೂ ॥ ೧ ॥
॥ ೩೩೧ ॥

× × ×

ಘೋರ ದುರಿತ ನಿರಾಮ ಧಾರಾಧಾರ ಶ್ಯಾಮ
ವೈರಿ ಸಂಕುಲ ಧಾಮ ಜಯಮಂಗಳಂ
ನರಮುಖಜಿತ ಸೋಮ ಭೂರಿದೇವ ಲಲಾಮ
ಚಾರು ವೆಂಕಟಧಾಮ ಜಯಮಂಗಳಂ। ಭವಾಂತು ಜಯಮಂಗಳಂ
॥ ೩ ॥ ೩೩೧ ॥

**ವಿಷಯ :** ಉತ್ತರ ರಾಮಾಯಣದಲ್ಲಿರುವ ರಾವಣನ ಜನ್ಮಕಥೆ.

**ವಿಶೇಷ :** ಗ್ರಂಥವು ಸಮಗ್ರವಾಗಿದೆ. ಸ್ಥಿತಿಯು ಉತ್ತಮ. ಬರವಣಿಗೆ ಚೆನ್ನಾಗಿದೆ, ಪತ್ರದ ಎರಡು ಪಾರ್ಶ್ವಗಳಲ್ಲಿ ಬರಹವಿದೆ. ಅಲ್ಲಲ್ಲಿ ಕೆಂಪುಮಸಿಯಿಂದ ತಿದ್ದಿರುವುದನ್ನೂ, ವಿವರಣೆಗಳನ್ನೂ ಗಮನಿಸಬಹುದಾಗಿದೆ. ಈ ಕೃತಿಯ ಅಂತ್ಯದಲ್ಲಿ ಆಂಗ್ಲಭಾಷೆಯಲ್ಲಿ ಈ ವಿವರವಿದೆ. " This History has been written by K. Venkatagiriah son of H. Venkatadriah and who prays to rectify if there are any error against the rules of Yakshgana Poems." ಇದೇ ಪುಸ್ತಕದಲ್ಲಿ ಅಹಲ್ಯಾಪರಿಣಯ, ಚಂದ್ರಾವಳಿಪ್ರಸಂಗ, ಪಾರ್ವತೀಕಲ್ಯಾಣ ಎಂಬ ಇತರ ಮೂರು ಗ್ರಂಥಗಳಿವೆ

—ಕೆಆರ್‌ಎಸ್

695

| ಕೆ. ೧೪೧೪ | ರಾವಣೋದ್ಭವ | ಯಕ್ಷಗಾನ |
|---|---|---|
| ೯.೬'' × ೨.೨'' | ಸುಬ್ಬಯ್ಯ | ೧೯ನೆಯ ಶತಕ |
| ೧–೪೧ ಪತ್ರ | ೮ ಪಂಕ್ತಿ | ೪೦ ಅಕ್ಷರ |

**ಆದಿ :** ಶ್ರೀ ಗುರು ಗಣೇಶಾಯ ನಮಃ ॥ ಉತ್ತಾರಖಂಡ ರಾಮಾಯಣದಲ್ಲಿ ರಾವಣೋದ್ಭವ ಬರಲುದಕ್ಕೆ ಶುಭಮಸ್ತು ॥

ವೃತ್ತಾ ॥ ಕೌಸಲ್ಯಾಕೃ ಲೀಲಾನಸ್ತ ನರಸ ಗ್ರಾಹ್ಯ ಪ್ರಾವಿಷ್ಟೋ ಸ್ತುಖಂ
ವ್ಯಾಸಾದಿ ಸ್ತುತ ಗೀತರೋಶೀತ ಸುಚಿಮೇರು ಪ್ರಾಜಸೂಚಕರಾ
ಪ್ರಾಸಂಗೀಕೃತ ರಾಮಚಟ್ಯು ಮುನಿಪ್ರೋ ಪ್ರಾಮ್ಯೈಣಾಂ ರಘೂಣಾಂ ಪತೇ
ಶ್ರೀ ಸೀತ ವದನಾಕ್ಷಿಮುಕೋ ಬಿಂಬಾಧರಃ ಪಾತುಂ ಮಾಂ ॥ ೧ ॥

**ಅಂತ್ಯ :** ಬರಿಸಿ ಮಂತ್ರಿಯನುತ್ತು
ಗರಿಸಿ ಪುರಪಟ್ಟವ ಕರಸಿ ದೊರೆಗಳ ನುಡಿವು
ವರರನೆಲ್ಲ ಮೊರವ ವಾದ್ಯಗಳಿಂದ
ಗುರುಂಮತದಿ ಸಿಹ್ವವಿಷ್ಟರ ವೇದ ಸಾಕೇತ ಪುರವಾಸನೆ ॥
ಬವತು ಮಂಗಲಂ ಜಯ ಮಂಗಲಂ ಹರಿಗೆ ॥ ೫ ॥
ಅಂತು ಸಂಧಿ ೨ಕ್ಕೆ ೪೫೦ಕ್ಕೆ ಮಂಗಳ ಮಹಾ ಶ್ರೀ.

**ವಿಷಯ :** ರಾವಣನ ಜನ್ಮಕಥೆ.

**ವಿಶೇಷ :** ಶಿಥಿಲ ಪ್ರತಿ. ಕೆಲವು ಗರಿಗಳ ಅಂಚು ಮುರಿದಿದೆ.

—ವೈಸಿಬಿ

## 696

| | | |
|---|---|---|
| ಕ. ೯೨೯ | **ರುಕ್ಮಾಂಗದ ಚರಿತೆ** | ವಾರ್ಧಕ ಷಟ್ಪದಿ |
| ೧೮"×೧.೭" | ಲಕ್ಷ್ಮೀಶ | ಸು. ೧೭೨೩ |
| ೧-೭೫ ಪತ್ರ | ೮ ಪಂಕ್ತಿ | ೫೦ ಅಕ್ಷರ |

ಆದಿ : ಶ್ರೀ ಮಾಗಡಿ ರಂಗನಾಥಸ್ವಾಮಿಯವರ ಚರಣಾರವಿಂದವೆ ಗತಿ. ರುಕ್ಮಾಂ
ಗದ ಚರಿತ್ರೆ ಬರೆಯುವದಕ್ಕೆ ಶುಭಮಸ್ತು.
ಶ್ರೀ...ಮುನಿಹೃದಯಂ ವಾಸವಂದಿತ ಜನಾ
ಧೀಶ ಕಾರುಣ್ಯ ಸರ್ವೇಶ ರವಿಕೋಟಿ ಸಂ
ಕಾಶ ತ್ರೈಲೋಕ್ಯಪ್ರಕಾಶ ವರಕೌಸ್ತುಭ ಸುಭೂಷ ಪರಿಪೂರ್ನವೇಷಾ
ಭಾಸುರತರ ಪ್ರಬಲ ಶೇಷನಿಜತಲ್ಪಸುದಿ
ನೇಶವಿಧುನೇತ್ರ ಕಮಲಾಸನನ ಪಡದ ಸುವಿ
ಲಾಸ ಖಗಪುರ ಚೆನ್ನಕೇಶವನು ನಮಗೆ ಸಂತೋಷಸಂಪದವೀಯಲಿ ॥ ೧ ॥

× × ×

ಭೂತಳಕೆ ದಕ್ಷಿಣ ಸುವೈಕುಂಠವೆನಿಸಿ ವಿ
ಖ್ಯಾತಿವಡದಿರ್ಪ ಖಗಪುರ ನಿವಾಸದೊಳು ತೋ
ರ್ಪಾ...ಬುಧಕುಲ ಶಿರೋಮಣಿಯಹಾದ ಕಾಶ್ಯಪ ಸುಗೋತ್ರ ನಿರ್ಮಳ ಚರಿತ್ರಾ
ನೀತಿ ಸನ್ನುತ ರಾಮಚಂದ್ರನುದರಾಬ್ಧಿ ಸಂ
ಜಾತ ಲಕ್ಷ್ಮೀಶನೆಂಬವನು ವಿರಚಿಸಿದ ಖ
ದ್ಯೋತ ಕುಲತಿಲಕ ರುಕ್ಮಾಂಗದ ಚರಿತ್ರಮಂ ಕೇಳ್ದು ನಲಿವುದು ಸುಜನರೂ ॥ ೨೩ ॥

ಅಂತ್ಯ : ನಿಮ್ಮ ಸತ್ಕ್ಯಾಚಾರಕಾರುಯಿದಿರಿಲ್ಲ ನೀವೀ
ಬ್ರಹ್ಮ ಕಲ್ಪಂಗಳೊಳಗಾದ ಮನುಜರೊಳೆಂದು
ಕಮ್ಮಗಣೆಯನ ಪಿತಂ ಕೊಂಡಾಡಿ ಹರುಷಸಾಗರದೊಳೋಲಾಡಿ ಬಳಿಕಾ
ಸುಮ್ಮಾನದಿಂದ ಮತ್ತೆಂದನೀ ಹರಿದಿನವ
ನೆಮ್ಮಿ ಮಾಳ್ಪರಿಗಖಿಳ ಸೌಭಾಗ್ಯ ಸಂಪದದಿ
ನಮ್ಮ ಕೃಪೆಯಿಂ ಪರದಿ ಮೋಕ್ಷವಾಗಲಿಯೆಂದು ಕರುಣಿಸಿದನಾ ನೃಪತಿಗೆ ॥ ೧೦೩ ॥
ಪದಿನಾಲ್ಕು ಭಾಗವತರೊಳಂ ಮಿಗಿಲು ನೀನಂ ನಿ
ನ್ನಧಿಕ ಚರಿತೆಯನಂ ಕೇಳ್ವರ್ಗೆ ಯಿಹದಲ್ಲಿ ಸಂ
ಪದ ಪರದಿ......

**ವಿಷಯ :** ವಸಿಷ್ಠನು ಬೋಧಿಸಿದ ಹರಿವಾಸರದ ಮಹಾತ್ಮ್ಯೆ.

**ವಿಶೇಷ :** ಅಸಮಗ್ರ. ಕೊನೆಯ ಒಂದು ಪತ್ರ ಲುಪ್ತ ಆಗಿರಬಹುದು. ಪತ್ರಗಳು ಅಲ್ಲಲ್ಲಿಯೇ ಹುಳು ಹೊಡೆದು ತ್ರುಟಿತವಾಗಿವೆ.

—ಬಿಎಸ್‌ಎಸ್

697

ಕ. ೮೪೦ | **ರುಕ್ಮಾಂಗದ ಚರಿತೆ** | ಸಾಂಗತ್ಯ
೧೦.೩″ × ೧.೪″ | ಸೋಮನಾಥ | ಸು. ೧೬೫೦
೧–೧೨೦ ಪತ್ರ | ೭ ಪಂಕ್ತಿ | ೩೪ ಅಕ್ಷರ

**ಆದಿ :** ಶ್ರೀ ಶಾರದಾ ಗುರುಭ್ಯೋ ನಮಃ ॥ ಶುಭಮಸ್ತು ॥ × ಶ್ರೀಕಾರಾಪುರದ ಲೆಪ್ಪದ ಬ್ರುಂಹ್ಮದೇವರ ಪಾದಾರವಿಂದವೇ ಗತಿ ॥ ಶೋಭನಮಸ್ತು ॥ ರುಕ್ಮಾಂಗದ ಚರಿತ್ರೆಗೆ ನಿರ್ವಿಘ್ನಮಸ್ತು ॥

ಯಿಾ ಮಹಿಯೊಳು...ಯ ಪೇಳಿದ ಹರಿ
ನಾಮವ ಪೊಗಳ್ದರಾರೊಲಿದೂ ॥ ಶ್ರೀ ॥
ಹರಿಯ...ದ...ಸುಖಿಯಾಗುನೀ ಧರೆಯೊಳು
ಹರಿಯ ನೆನದು ಧನ್ಯನಾಗೂ ॥
ಹರಿಯ ನೆನದು ಸುಖಿಯಾದ ಮನುಜರಿಗೆ
ಮರಳಿ ಜಲ್ಮದ ಬಾಧೆಯಿಲ್ಲಾ ॥ ೧ ॥

× × ×

ಸಾಮಜ ವಿರಧನ ಕಾಮಿತವೀವಂನ್ನ
ಸೋಮಶೇಖರ ನಂದನನಾ
ಭೂಮಿಯೊಳಂತವಿಯೆ ಕಾವಿನಾದ ನಿ
ಸ್ಸೀಮ ಗಣಪನೆ ವಂದಿಸುವೆ ॥ ೭ ॥

× × ×

ಗ್ನಾನಾತಂಮರಿತು ಯೆತಿಪತಿಯ ಕ್ರು
ಶಾನು ಗ್ರಹಬಲದಿಂದಾ
ಭಾನುಕುಲದ ರುಕುಮಾಂಗದ ಚರಿತೆಯ
ನಾನರಿದನಿತ ಬಂಣಿಸುವೆ ॥ ೧೧ ॥

**ಅಂತ್ಯ :** ಪರಹಿತ ರುಕುಮಾಂಗದ ಚರಿತೆಯ ಪುಂಣ್ಯ
ಪುರುಷರ ಸಭೆಗೊಪ್ಪುವಂತ್ತೆ
ಕರಣಿಸಿ ಕವಿ ಸೋಮನಾಥಂಗೆ ವರವಿತ್ತು
ಪರಮ ಹರುಪದಿ ನ್ರುಸಿಂಹಾ ॥ ೪೪ ॥

× × ×

ಧೀರ ವಶಿಷ್ಟ ಮುನಿಪ ಮಾಂದಾತ ಮ
ಹೀರಮಣಗೆ ವಿಸ್ತರಿಸಿದಾ
ನಾರದಾದಿಯಂ ರುಕುಮಾಂಗದ ಚರಿತ್ರೆಯಂ
ಸೂರಿಗಳೆಲ್ಲ ಚಿತ್ತೈಸಿ ॥ ೫೭ ॥
ಅಂತು ಸಂಧಿ ೮ಕ್ಕೆ ಪದನೂ ೧೦೧೫ಕಂ ಮಂಗಳ ಮಹಾಶ್ರೀ.
ಯಿತ್ತೀ ರುಕುಮಾಂಗದ ಚರಿತ್ರೆ ಸಮಾಪ್ತಂ ॥
ತಪ್ಪಂ ಬರದಾತಂ ಕಡಂಜಡ
ನಪ್ಪಾಪಂ ಬರದನೆಂದು ಬೈಯ್ಯಬ್ಲೇಡಂ
ತಪಕ್ಕು ಶುಧಮಕ್ಕುಂ
ತಪುಳ್ಳರೆ ತಿದಿಕೊಂಬುದುತ್ತಮುಪು ಪುರುಶರೂ ॥
ಯಿಶಾವ ಸಂವತ್ಸರದ ಮಾಗ ಶು ೭ ಲೂ ॥ ಪದುಮಣಯ್ಯನವರಿಗೆ ಅನಂತ್ಪಾಸೇನಬೋವನು ಬರದ ರುಕ್ಮಾಂಗದ ಚರಿತ್ರೆಗೆ ಶುಭಮಸ್ತು ॥

**ವಿಷಯ :** ರುಕ್ಮಾಂಗದನ ಕಥೆ ಅಥವಾ ಏಕಾದಶೀ ಮಹಿಮೆ ವ್ರತ.

**ವಿಶೇಷ :** ಸಮಗ್ರವಾಗಿದ್ದರೂ ಪ್ರತಿಯು ಗರಿಗಳಿಗೆ ಹುಳು ಹೊಡೆದಿದೆ. ಪ್ರತಿ ಮಾಡಿದವ, ಪ್ರತಿಮಾಡಿಸಿಕೊಂಡವರ ಹಾಗೂ ಕಾಲದ ವಿಚಾರವನ್ನು ಗ್ರಂಥಾಂತ್ಯದಲ್ಲಿ ತಿಳಿಸಿದೆ.

—ಕೆಆರ್‌ಎಸ್

## 698

| ಕೆ. ೮೫೮/೧ | **ರುಕ್ಮಾಂಗದ ಚರಿತೆ** | ಸಾಂಗತ್ಯ |
|---|---|---|
| ೧೨"×೧" | ಸೋಮನಾಥ | ಸು. ೧೬೫೦ |
| ೧-೮೫ ಪತ್ರ | ೫ ಪಂಕ್ತಿ | ೫೦ ಅಕ್ಷರ |

**ಆದಿ :** ನರಸಿಂಹನ ಪಾದವೆ ಗತಿ ಗಣಾಧಿಪತಯೆ ನಮಃ ಶಾರದಾಗುರುಭ್ಯೋ ನಮಃ ರುಕುಮಾಂಗದ ಚರಿತೆ ಪುಸ್ತಕಕ್ಕೆ ಶುಭಮಸ್ತು.

ಹರಿಯು ನೆನೆದು ಸುಖಿಯಾಗಿಲಿ ನೀವು
ನರಹರಿಯು ನೆನೆದು ಧನ್ಯರಾಗಿ ।
ಹರಿಯು ನೆನೆದು ಸುಖಿಯಾದ ಮನುಜನಿಗೆ
ಮರಳಿ ಜಲ್ಮದ ಬಾಧೆಯಿಲ್ಲಾ ॥ ೧ ॥

**ಅಂತ್ಯ :** ನಾಡು ಬೀಡಿಂಗೆಲ್ಲ ವಲಿವಾರ ವೈಕಕೆ
ಕೂಡಿಪ್ಪ್ರ್ಯಸನ್ಮತಿಗಳೂ

ಪಾಡರ್ತಿದವರ ಮನ್ನಿಸಿ ವಿಭುವಾಗಿ ॥

**ವಿಷಯ :** ರುಕ್ಮಾಂಗದ ಕಥೆ.

**ವಿಶೇಷ :** ಓಲೆ ಚೆನ್ನಾಗಿದೆ, ಅಕ್ಷರಗಳು, ಚೆನ್ನಾಗಿವೆ. ಓಲೆಗಳು ಅಲ್ಲಲ್ಲಿ ತ್ರುಟಿತವಾಗಿವೆ.

—ಎಂಸಿಪಿ

## 699

ಕೆ. ಎ. ೫೫೧/೩ | ರುಕ್ಮಾಂಗದ ಚರಿತೆ | ಸಾಂಗತ್ಯ

೧೨.೨″ × ೯.೬″ | ಶೇಷಕವಿ | ಸು. ೧೬೫೦

೧–೨೮ ಪುಟ | ೨೪ ಪಂಕ್ತಿ | ೨೪ ಅಕ್ಷರ

**ಆದಿ :** ಶ್ರೀ ರಮಣ ವಕ್ಷಾಂಕಿತ ಕುಂಕುಮಸಾರ

..............................

ಕಾರುಣ್ಯನಿಧಿ ಮೆದ (ವೆತ್ತ್ರ) ವೆಂಕಟರಾಯ

ಚಾರು ಸಜ್ಜನ ರಕ್ಷಿಪುದು ॥ ೧ ॥

× × ×

ಹರಿಭಕ್ತ ರುಕುಮಾಂಗದ ಭೂತಳದೊಳು

ಹರಿವಾಸರವ ಗೆಯುತಿರಲು

ಧರೆಯ ಮಾನವರೆಲ್ಲ ವೈಕುಂಠಕೆಯ್ದಲು

ನರಕದ ಬಟ್ಟೆ ಹೂಳಿದವು ॥ ೫ ॥

**ಅಂತ್ಯ :** ತಿಪ್ಪೇಂದ್ರ ತನಯ ರಾಘವ ಭೂವರನ ಮಹ

ನ ಪ್ರತಿಜ ವರದ ಶೇಷಾ

ಒಪ್ಪುವ ರುಕುಮಾಂಗದ ಚರಿತೆಯ ಲೋಕ

ಕಪ್ರತಿಯೆನೆ ವಿರಚಿಸಿದ ॥ ೬೩ ॥

× × ×

ಧರೆ ಚಂದ್ರ ಸೂರ್ಯರೀ ಚರಿತೆಯುಳ್ಳನ್ನ

ಸಿರಿಸಂತಾನ ಶುಭಕೀರ್ತಿ

ವೆರಸಿ ಬಾಳಲಿ ಶೇಷನುದಯದ ಹರಕೆಯ

ಹರಿ ವೆಂಕಟಾದ್ರಿ ಗೋವಿಂದ ॥ ೬೫ ॥

ಅಂತು ಸಂಧಿ ೭ಕ್ಕಂ ಪದನು ೩೧೩ಕ್ಕಂ ಮಂಗಳ ಮಹಾ ಶ್ರೀ. ಸಂಪೂರ್ಣಂ.

**ವಿಷಯ :** ಏಕಾದಶೀವ್ರತದ ಮಹಿಮೆ ; ರುಕ್ಮಾಂಗದನ ಕಥೆ.

**ವಿಶೇಷ :** ಸಮಗ್ರ. ಆದರೆ ಅಲ್ಲಲ್ಲಿ ಅಕ್ಷರಗಳು ಲುಪ್ತವಾಗಿವೆ. ಶಕಟರೇಫದ ಬಳಕೆ

ಇದೆ. ಇದೇ ಪುಸ್ತಕದಲ್ಲಿ ಕೈಶಿಕ ಮಾಹಾತ್ಮ್ಯ, ನಾರಾಯಣ ಕವಚವೆಂಬ ಇತರ ಎರಡು ಕೃತಿಗಳಿವೆ.

—ಕೆಆರ್‌ಎಸ್

## 700

ಕ. ೧೮೨೨ | ರುಕ್ಮಾಂಗದ ಚರಿತೆ | ಯಕ್ಷಗಾನ

೧೬" x ೧.೮" | ಕಸ್ತೂರಿ ರಂಗ | ?

೧–೪೦ ಪತ್ರ | ೭ ಪಂಕ್ತಿ | ೫೪ ಅಕ್ಷರ

**ಆದಿ :** ಶ್ರೀ ರಾಮಚೆಂದ್ರಾಯ ನಮಃ ॥ ನಿರ್ವಿಘ್ನಮಸ್ತು ॥ × × ×
ರುಕ್ಮಾಂಗದ ಚರಿತ್ರೆ ಯಕ್ಷಗಾನ ಬರೆಯುವದಕ್ಕೆ ಶುಭಮಸ್ತು ॥ ರಾಗಾ ।
ಮೋಹನಾ ॥
ಶರಣು ಶರಣು ಉರು ಪಾರ್ವತಿ ಗವುರೀ
ವರ ಮಹಿಷಾಸುರಮರ್ದನಿ ॥
ಪರಿಪರಿದು ...... ಕರೆಗಳ ನುರೆ
ಪರಿಹರಿಸುತ ಗಿರಿಶಿಖರದಿ ನೆಲಸಿ
ಧೊರೆ ಕೃಷ್ಣೇಂದ್ರಗೆ ಸ್ಥಿರತರ ಸಾಂಬ್ರಾಜ್ಯವನಿತ್ತು
ಪೊರವ ......ಡೇಶ್ವರೀ ॥ ಪಲ್ಲಾ ॥

**ಅಂತ್ಯ :** ವೃತ್ತಾ ॥
ಅಂದದ ಕಂದ ಉಹ ತೊಂಬತ್ತೊಂದಿದ ಸಂಗ...ನ್ನೈದಾಗಲ್
ಪೊಂದಿದ ವೃತಂಗಳೇಳಾನಂದದಿ ಪೇಳ್ದು ದ್ವಿಪದೆಹತ್ತಾ
ಛಂದದ ವಚನಂಗಳೈವತ್ತಾಗಲ್ ಕುಂದದ ರಾಗಂಗ
ಳಿಂದ ಪೇಳ್ದ ಪದು ನಾಲ್ವತ್ತೊಂಭತ್ತಂ ॥
ಯಿಂತು ರುಕ್ಮಾಂಗದ ಚರಿತ್ರೆ ಸಂಪೂರ್ನ ಜಯ ಮಂಗಳ ಮಹಾ ಶ್ರೀ ಶ್ರೀ

**ವಿಷಯ :** ರುಕ್ಮಾಂಗದನ ಕಥೆ.

**ವಿಶೇಷ :** ಬರವಣಿಗೆ ಚೆನ್ನಾಗಿದೆ. ಸಮಗ್ರ ಕೃತಿ. ಕೆಲವು ಪತ್ರಗಳ ಅಂಚುಗಳು ಮುರಿದಿವೆ.

—ಎಂಪಿಎಂ

## 701

ಕೆ. ಬಿ. ೫೨೩/೧೦ | ರುಕ್ಮಿಣೀಕಲ್ಯಾಣ | ಹಾಡು

೮"x೬.೫" | ? | ?

೯೭–೯೮ ಪತ್ರ | ೧೬ ಪಂಕ್ತಿ | ೧೭ ಅಕ್ಷರ

**ಆದಿ :** ರಾಗಾ ಸೌರಾಷ್ಟ್ರ ॥ ಶ್ರೀ ರಾಮಾಯ ನಮಃ ॥ ರುಕ್ಮುಮಣೀ ಕಲ್ಯಾಣಂ ॥

ಶಿದಿವಿನಾಯಕನಂಘ್ರಿಗೊಂದಿಸಿ ಮುದ್ದು ಶಾರದೆಯ ಪಾದಕ್ಕೆ ನೆವಿಸಿ।
ಭಕ್ತವತ್ಸಲಾ ಹರಿಯ ವಿವಹವ ಪೇಳೂವೆ ಅರ್ತಿಯಿಂದಲೆ ಕೇಳಿ ಸಜ್ಜನರು।
ಕಲ್ಯಾಣಂ ರುಕ್ಮಿಣಿ ಕಲ್ಯಾಣಂ ॥ ಪಲ್ಲ ॥ ವಾಲೆಯ ಬರದು ಕಳುಹಿದುದಾ
ತಾ ಮರೆಯದೆ ನೀರಜಾಕ್ಷ ಕೈ ಹಿಡಿದಾ ದೇವತೆಗಳೂ ಸುರದುಂಧುಭಿ
ಮೊಳಗಲ್ಲು ದೇವಕೀಸುತಯುಂನ ಮದುವೆಯಾದ ॥ ೧ ॥

ಅಂತ್ಯ : ದೇವ ದೇವನು ತಂನಾನತಿಗೊಲಿದ ಕಲ್ಯಾಣಾವಾ ನೀರೆಯಿಂದಲೆ ಹೇಳಿ ಕೇಳಿದವರಿಗೆ ಶ್ರೀಪತಿ ಉಡುಪಿನ ಕೃಷ್ಣ ವಿಭವದಿಂದ ಬೇಡಿದಿಷ್ಟಾರ್ಥವ ಕೊಡುತಿಹನೂ ॥ ೧೫ ॥ ಕಲ್ಯಾಣ ಸಂಪೂರ್ಣ ಮಂಹಾಶ್ರೀ ॥

ವಿಷಯ : ರುಕ್ಮಿಣೀದೇವಿಯ ವಿವಾಹ.

ವಿಶೇಷ : ಇದರೊಡನೆ ಕೃಷ್ಣದಾನ ಮೊದಲಾದ ೧೨ ಕೃತಿಗಳಿವೆ.

—ಎಸ್‌ಎನ್‌ಕೆ

## 702

| ಕೆ. ೮೮೧/೨ | ರುದ್ರ ಉವಾಚ | ಶ್ಲೋಕ, ಟೀಕು |
|---|---|---|
| ೮"×೧.೮" | ? | ? |
| ೧೧–೧೪ ಪತ್ರ | ೧೨ ಪಂಕ್ತಿ | ೪೬ ಅಕ್ಷರ |

ಆದಿ : ಶ್ರೀ ರುದ್ರೌವಾಚ ॥ ತಪೋಧನನಾಚಾರ್ಯ ಗುರುದೈವಂ ಚ ಜಂಗಮಂ। ಮಂತ್ರಮುಚ್ಚಾರ್ಯ ವಿಪ್ರಸ್ಯ। ನ ದೇವೋ ರುದ್ರಮೆಂ ಕುರು ಪೂರ್ದ್ವ ರೇತಜ ಕಾರೇಣಾ॥ ಕಪಾಲಿ ಜಂಗಮಸ್ತಥಾ। ಜಂಗಮಂ ಜನಿ ತೇಜೋನಿ। ಸರ್ವ್ವ ದೇವೋ ನಿರಂಜನ ॥ ಯೆಲೆ ಪರಮೇಶ್ವರನೆ ಗೊರವ ಗುರುದೇವ ನೆನಿಸಿಕೊಂಬದೇನು ಸೋಜಿಗ। ಯೆಲೆ ನಂದಿಕೇಶ್ವರ ಕೇಳೈ ತಪೋಧನ ಗೊರವರಿಗೆ ಗುರುವೆಂಬುದು ಲಿಂಗವೆಂಬುವು ಸಲ್ಲದೂ ಜಂಗಮಕ್ಕೆ ಗುರು ವೆಂಬುದು ಲಿಂಗವೆಂಬದು ಸಲುವುದು ಅದೆಂತೆಂದೊಡೆ...

ಅಂತ್ಯ : ಯಿಂತೀ ವಿಪ್ರನು ತಂನ ಸ್ವಜಾತಿಗಳಿಗೆ ಗುರುವಹುದು ಉಳಿದಾದ ವರ್ನ್ನಂಗಳ ಕೂಡಿಕೊಂಡು ಪ್ರವರ್ತ್ತಿಸುವ ನಿಮಿತ್ಯವಾಗಿ ವರ್ನ್ನಾನಾಂ ಜಂಗಮಂ ಗುರು। ಯಿಂನ್ನು ಜಂಗಮುವೆಂಬುದಕ್ಕರ್ತ್ಥ. ಜಂಘೆಯನಿಟ್ಟು ನಡವ ವಾಯುಪ್ರಾಣಿಗಳೆಲ್ಲಾ ಜಂಗಮುವೆನಿಸಿಕೊಂಬವು. ಅದು ನಿಮಿತ್ಯ ಜಂಘೆಯಿಕ್ಕಿ ನಡವ ವಾಯುಪ್ರಾಣಿಗಳಿಗೆಲ್ಲ ಜಂಗಮುವೆ ಗುರು ಶ್ರೀ ॥

ವಿಷಯ : ಗುರು ಮಹಿಮೆ.

ವಿಶೇಷ : ಸಮಗ್ರವಾಗಿದ್ದು ಕೊನೆಯ ಎರಡು ಗರಿಗಳಿಗೆ ಹುಳು ಹೊಡೆದಿದೆ. ಇದೇ

ಕಟ್ಟಿನಲ್ಲಿ ಶಂಕರದೇವರ ಕಂದ, ಲಿಂಗಸ್ತೋತ್ರದ ಷಟ್ಪದಿ ಇತ್ಯಾದಿ ಒಟ್ಟು ೧೨ ಗ್ರಂಥಗಳಿವೆ.

—ಕೆಆರ್ ಎಸ್

## 703

ಕೆ. ೭೪೮/೨೫ | ರುದ್ರಚಮೆ | ಮಂತ್ರ

೧೨.೫"×೨.೨" | ? | ?

೫–೬ ಪತ್ರ | ೧೬ ಪಂಕ್ತಿ | ೮೫ ಅಕ್ಷರ

**ಆದಿ :** ಶ್ರೀ ಗಣಾಧಿಪತಯೇ ನಮಃ । ರುದ್ರಚಮೆ ।
ಓಂ ಅಗ್ನಾವಿಷ್ಣು ಸ್ಜಜೋಷ ॥ ಸೇವಮಾವರ್ದಂತಂ ವಾಂಗಿರಃ ।
ದ್ಯುಮ್ನೈರ್ವಾಜೆಭಿರಾಗತಂ ॥ ೧ ॥
ಬಾಜಶ್ಚಮೆ । ಪ್ರಸವಶ್ಚಮೆ । ಪ್ರಯತಿಶ್ಚಮೆ । ಪ್ರಸಿತಿಶ್ಚಮೆ । ಆತಿಶ್ಚಮೆ ।
ಕ್ರತುಶ್ಚಮೆ । ಸ್ವರಶ್ಚಮೆ । ಶ್ಲೋಕಶ್ಚಮೆ । ಶ್ರಾವಶ್ಚಮೆ । ಶ್ರುತಿಶ್ಚಮೆ ॥ ೨ ॥

**ಅಂತ್ಯ :** ಅಷ್ಟಾತ್ರಿಂಶಚ್ಚಮೆ । ಚತ್ವಾಂ ಶಚ್ಚಮೆ । ದ್ವಿಚತ್ವಾರಿಂಶಚ್ಚಮೆ ।
ಚೌ ಚತ್ವಾರಿಂಶಚ್ಚಮೆ । ಷಟ್ಚತ್ವಾರಿಂಶಚ್ಚಮೆ । ಅಷ್ಟ ಚತ್ವಾರಿಂಶಚ್ಚಮೆ
ಪಂಚಾಶಚ್ಚಮೆ । ದ್ವಿಪಂಚಾಶಚ್ಚಮೆ । ಓಂ ಶಾಂತಿಶ್ಯಾಂತಿಸ್ಸರ್ವಶಾಂತಿ ರಸ್ತು ॥ ೧೧ ॥
ರುದ್ರಚಮೆ ಸಮಾಪ್ತ ॥ ಶ್ರೀ ॥ ಶ್ರೀ ॥

**ವಿಷಯ :** ಮಂತ್ರ.

**ವಿಶೇಷ :** ಇದರೊಡನೆ ಕರಣಹಸಿಗೆ, ಏಕೋತ್ತರ ಶತಸ್ಥಲ ಮೊದಲಾದ ೨೯ ಗ್ರಂಥಗಳಿವೆ. ಕೊನೆಯಲ್ಲಿ ೯ ಸಂಕೀರ್ಣ ಓಲೆಗಳಿವೆ. ಕೆಲವು ಗ್ರಂಥಗಳಲ್ಲಿ ಶಕಟ ರೇಫದ ಬಳಕೆ ಇದೆ. ಕೆಲವು ಗರಿಗಳ ಅಂಚು ಮುರಿದು ಶಿಥಿಲವಾಗಿವೆ.

—ಎಸ್ ಎನ್ ಕೆ

## 704

ಕೆ. ಬಿ. ೬೩೬/೧೧ | ರುದ್ರಜಪ | ಶ್ಲೋಕ, ಪದ್ಯ

೧೩"×೧೪" | ? | ?

೧೭–೧೯ ಪತ್ರ | ೧೧ ಪಂಕ್ತಿ | ೫೦ ಅಕ್ಷರ

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ॥ ರುದ್ರಜಪ ಕ್ರಮ ॥ ಗ್ರಂಥ ॥
ರುದ್ರರೂಪ ಜಪಂ ವಕ್ಷೇ । ರುದ್ರನೇತ್ರ ಸಮಾನ್ವಿತಂ ॥
ಕ್ಷುದ್ರ ಪಾಪೌಘಶಮನಂ । ರುದ್ರಲೋಕಮವಾಪ್ನುಯಾತ್ ॥ ೧ ॥

ಲಿಂಗದ್ವಾದಶ ಸಂಯುಕ್ತ೦। ಮೂಲ ಶೇಷ ಷಡಾಕ್ಷರಂ ।
ಶಿವಷುವೃಷಭಶ್ಚೇತಿ ಕ್ರಮೇಣಾಂತು ಪ್ರಕೀರ್ತಿತಃ ॥ ೨ ॥

ಅಂತ್ಯ : ಸಾರಚರಲಿಂಗದಯುಸಳವಾ ಪಾರದಶನ ಪ್ರಸಾದ
ವಾರದಳ ಮಹಾಲಿಂಗ ಪ್ರತ್ರದ್ವಂಪ್ವಭ್ರೂಗಳವೂ
ಮಾರಹರ ಪರಮಿಷ್ಟ ಲಿಂಗಕ ॥
ಪಾರರೋಮಗಳೈದೆದಳಕುಳ
ಪಾರಮಾರ್ಥವೆ ಶಿರದ ಬಗಂಟವು
ಮೂರು ತತ್ಪ್ರಾಣ ॥ ೭ ॥
ಲಿಂಗದಳ ತದ್ಭಾವ ಲಿಂಗದ
ತುಂಗದಳ ಪಶ್ಚಿಮದ ಶಿರವಾದ
ಕಂಗನಿಮ್ನಸ್ಥನಮೋಕ ತ್ರಿವಿಧ ಸಾಹಸ್ರದಲಂ ।
ರಂಗಮೆನೆ ದ್ವಯ ಷೋಡಶದ್ವಯಂ
ಸಂಗದಶದ ಷಷ್ಠಿ ಚಾರವು
ಲಿಂಗದಳವ್ಮೈವತ್ತುನಾಲ್ಕುರ ಮ್ಯೇಲೆ ಸಾವಿರವು ॥ ೩ ॥ ಶ್ರೀ ॥

ವಿಷಯ : ರುದ್ರಜಪ.

ವಿಶೇಷ : ಇದರೊಡನೆ ಕರಣಹಸಿಗೆ, ಪಂಚೀಕರಣಪದ, ಅಕ್ಕಗಳ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ವಿಶ್ವಾರ್ಪಣ, ಮಂಗಳ ಮಹಾ ಶ್ರೀ, ಹಿರಿಯ ಮಂತ್ರಗೋಪ್ಯ, ವೀರಶೈವಾಗಮದ ವಿವರ, ಜ್ಯೋತಿರ್ಮಯ ಶಾಂಭವೀಜ್ಞಾನ ದೀಕ್ಷಾಬೋಧೆ, ವಾಕ್ಯಕದಂಬ ವಚನ ಈ ಕೃತಿಗಳಿವೆ.

—ಎಸ್‌ಎನ್‌ಕೆ

## 705

| ಕೆ. ಎ. ೪೨೫/೩ | ರುದ್ರಪಶುಪತಿಯ ರಗಳೆ ಇತ್ಯಾದಿ | ರಗಳೆ |
|---|---|---|
| ೯.೧" × ೮.೦.೩" | ಹರಿಹರ | ಸು. ೧೨೦೦ |
| ೧೦–೧೫೭ ಪುಟ | ೧೮ ಪಂಕ್ತಿ | ೧೮ ಅಕ್ಷರ |

ಆದಿ : ಶ್ರೀ ಗುರುಲಿಂಗಾಯ ನಮಃ ॥ ರುದ್ರಪಶುಪತಿಯ ರಗಳೆ ॥

ಕಂದ ॥ ಅತಿಶಯದಿಂಗರಳಧರಂ
ನತಜನ ಸುರಧೇನು ಹಂಪೆಯ ವಿರೂಪಾಕ್ಷಂ
ಶ್ರುತಿ ಚೂಡಾಮಣಿ ಗೌರೀಪತಿ ಮೆರೆದಂ
ರುದ್ರ ಪಶುಪತಿಗಳಂ ಧರೆಯೊಳ್ ॥

ರಗಳೆ ॥ ಧರೆಗೆಸೆವ ಚೋಳದೇಶದೊಳೊಂದು ಶಿವಪುರಂ
ಹರನ ಭಕ್ತಿಗೆ ತಾನೆ ಕಳೆವನೆಯೆನಿಸಲ್ಕುರಂ ॥

ಅಂತ್ಯ : ಪೊಳ್ತು ವಿಚಾರವಿಲ್ಲದೆ ಯಿಂತು ಮಾಳ್ಪರೆ
ಅಹಹ ನಿನ್ನರಸುತನವೆಮೆಲ್ಲರುಂ ಮಾಳ್ಪರೆ
ಕಂಡಯ್ಯ ಚೋಳ ನಿನಿಗಿನಿತು ಸೈರಣೆ ದುಸ್ತರವೆ
ಉಂಡೆವಾ ಚೆನ್ನನೊಡನೆ ಮುಂದದಿಂ ಪಸಿವಿಲ್ಲ
ಪೂತು ಮಾದರ ಚೆನ್ನನೊಡನುಂಡೆವೆಲೆ ಚೋಳ
ಓತಂಬಲಿಯು ಚೆನ್ನನೊಡನುಂಡೆವೆಲೆ ಚೋಳ
ಕೇಳೆಂಬಕಳದ ಸವಿಯು ......

ವಿಷಯ : ರುದ್ರಪಶುಪತಿ, ತಿರುನೋಳ್ಪೊವರ್, ತಿರುಕುರುಪಿತೊಂಡ, ಕಂಡೇಶಪಿಳ್ಳೆ, ವಾಗೀಶ್ವರದೇವರು, ಕಾರಿಕಾಲಮ್ಮ, ಕಲಿಕಾಮದೇವರು ಇವರುಗಳ ಚರಿತ್ರೆ.

ವಿಶೇಷ : ಪ್ರತಿ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಬಲಘಾಂಡಮೂರ್ತಿಯ ರಗಳೆ ಮತ್ತು ಮುರುಂಘನ ರಗಳೆ ಎಂಬ ಕೃತಿಗಳಿವೆ.

—ವೈಸಿಬಿ

706

| ಕೆ. ೧೩೦೨/೨ | ರುದ್ರಭಾರತ | ಗದ್ಯ |
|---|---|---|
| ೧೦.೧″ × ೧.೮″ | ಚನ್ನಬಸವಣ್ಣ | ಸು. ೧೧೬೦ |
| ೧–೬೦ ಪತ್ರ | ೧೦ ಪಂಕ್ತಿ | ೫೪ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಯ ನಮಃ × × ಶ್ರೀ ರುದ್ರಭಾರತ ಬರವುದಕ್ಕೆ ಶುಭಮಸ್ತು × × ಶ್ರೀ ಪರಮೇಶ್ವರನು ಸಿಂಹ್ವಾಸನರೂಢನಾಗಿರ್ಪ ಸಮಯದಲ್ಲಿ ಹರಿ ಸುರ ಬ್ರಂಹ್ಮಾದಿ ದೇವತೆಗಳು ವೊಡ್ಡೋಲಗಂ ಗೊಟ್ಟಿರಲೂ ನಂದಿನಾಥ ದೇವರು ಆ ಪರಶಿವಮೂರ್ತಿಗೆ ನಮಸ್ಕಾರವಂ ಮಾಡಿ ಭಯಭಕ್ತಿ ಕಿಂಕರ್ವಾಣದಿಂದ ಬಿನ್ನೈಸುತ್ತಿದ್ದನೂ ಆದೆಂತೆಂದೊಡೆ ದೇವ ದೇವಸಿಖಾಮಣಿ ದೇವ ಗಿರಿಜಾರಮಣ ಲಯಮೇ ಪರಾತ್ಪರ ಮೂರ್ತಿಯೇ ಶ್ರೀ ರುದ್ರಭಾರತದಲ್ಲಿ ಮೂಲತತ್ವ ಹ್ಯಾಗೆ ವ್ಯತ್ಪತ್ಯವಾಯಿಂತು.

ಅಂತ್ಯ : ಸಬರ ಕಂಜವಿಗ ಬಿದಿರುತ ಚವುರಮ ಕಾಮಿಂರ ಕಾರ್ತಿ ಮಂಲಾರ ಕಬಳಯಗಾರ ಗಾರಡಿಗರೊಳಗೆ ಯ್ಯಾವತ್ತಾರುಂ ಭೇದಂಗಳಾದವೂ ‖ ಅಂತು ರುದ್ರಭಾರತ ಸಮಾಪ್ತ ‖ × × × ಶ್ರೀ ಕರಿಬಸವಸ್ವಾಮಿಯಂವರ ಕರ ಕಮಲಸಂಜಾತರಾದಂತಾ ಸಾಲೂರ ಚಿಂಕ್ಕಮಟದ ಪಟ್ಟದ ಗುರವಾದ ಶ್ವಮಿಯರು ಬರದ ಶ್ರೀ ರುದ್ರಭಾರತದ ಪೊಸ್ತಕ ವಿಶಸಮಸಂಚರಾದ ಶ್ರವಣ ಬವುಳ ೧೨ಯಂಲು ತಸು ೩ರ ನೆಯಲು ಮುಗಿತು.

ವಿಷಯ : ಸೃಷ್ಟಿವಿಚಾರ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗಣಭಾಷಿತ ರತ್ನಮಾಲೆಯೆಂಬ ಕೃತಿಯೂ ಇದೆ.

—ಜಿಜಿಎಂ

## 707

. ಬಿ. ೬೫೪/೧೨ ರುದ್ರಮುನಿ ಪದ್ಯ ಹಾಡು

೬.೫"×೮.೩" ? ?

೨೦೧–೨೧೧ ಪುಟ ೨೦ ಪಂಕ್ತಿ ೨೦ ಅಕ್ಷರ

ಆದಿ : ರಾಗ । ರುದ್ರಮುನಿ ಪದ್ಯ ॥ ಆದಿತಾಳ ।
ಮುಂದಲ ಸೂಚನೆ ಚೆನ್ನಾಗಿ ಹೇಳುವೆ ಕೇಳಿರಂಣ
ಮುಂದಿನ್ನು ದಿನಮಾಸ ಬಹುಕೆಟ್ಟು ಬರುತಾವೆ ನೋಡಿರಂಣ
ಎಂದೂ ಎದೆನ ಬ್ಯಾಡಿ ಬಂದವು ವರುಷ ಕೇಳಿರಣ್ಣ
ಮುಂದೆ ಮಹ ಚೋದ್ಯಗಳು ಶರಣಾರು ಬರುತಾರೆ ನೋಡಿರಂಣ ॥ ಪ ॥

ಅಂತ್ಯ : ವಂದು ಬಾರದರ ಧ್ವನಿಗೇಳಿದವರಿಗೆ ಮುಂದೆ ।
ವಂದೆಂದಿಗೆಯು ನಿದ್ರೆ ಬಾರದಿಹುಂದೂ ॥
ತಂದೆ ತಾಇಲ್ಲದಂರಿಸಿಹುಂದು ಅಳಿದು ಪೋಗದಿದ ।
ರಂದವನು ಗುರುಶಿದ್ಧದೇವನೆ ಬಲ್ಲಾ ॥ ॥ ೩ ॥

ವಿಷಯ : ಶಿವಮಹಿಮಾ ವರ್ಣನೆ.

ವಿಶೇಷ : ಕೃತಿ ಸಮಗ್ರರಾಗಿದೆ. ಪ್ರತಿ ಚೆನ್ನಾಗಿದೆ. ಬರವಣಿಗೆ ಸುಂದರವಾಗಿದೆ. ಇದರೊಂದಗೆ ' ಅರ್ಜುನ ಜೋಗಿ ಹಾಡು ' ಮುಂತಾದ ಗ್ರಂಥಗಳಿವೆ,

—ಎಂಪಿಎಂ

## 708

ಕ. ೧೬೨೪ ರೂಪಾವಳಿ ಗದ್ಯ

೬"×೧.೪" ? ?

೫೮ ಪತ್ರ ೪ ಪಂಕ್ತಿ ೨೬ ಅಕ್ಷರ

ಆದಿ : ಭಾನುಸುತನೊಡೆನೆ ಕುಜನಿರಲು ಪೂರ್ವಜನ್ಮದ ವನಸಂಚಾರ ಅರ್ತನಂಟು ಅವಿಮಾನ ಕಷ್ಟ ಶ್ರೀಯುರ ವೈರದ ಹಾಗೆ ಹಗೆಯುವರ ಮಶ್ಚರದ ಹಾಗೆ ನಿಂಮ ಚಿಂತೆಯಿದ್ದೀತು ಶ್ರೀರಾಮ ಸೀತಾ ಲಕ್ಷ್ಮಣ ದೇವರನ್ನು ಕಂಡಲ್ಲಿ ಲೇಸು, ಸಂದೇಹಬೇಡ ನಂಬು ॥ ಕೇತುವಿನ ಮೇಲೆ ಪ್ರೇಮದಿಂ ಗುರು ಇರಲು ನಿರೂಪಿಸಿದ ಕಾರ್ಯ ಲೇಸೂ ಅರ್ತಲಾಭವು ಲಾಭ ಭೂಮಿ ಲೇಸು ಹಾಗೆ ಪಾರ್ವತಿ ಕೌಸಲ್ಯದೇವಿಗೆ ಪುತ್ರವರವನ್ನು ಹೇಳಿದಂತಾದ್ದು ಲೇಸು ಸಂದೇಹ ಬೇಡ ನಂಬು ಸರ್ವಕಾರ್ಯಂಗಳು ಜಯುವಾದೀತು

**ಅಂತ್ಯ :** ಶ್ರೀ ಗುರುಭ್ಯೋ ನಮಃ × × × ರೂಪಾವಳಿ ಪುಸ್ತಕದಲ್ಲಿ ತಪ್ಪು ಎದ್ದಾಗ್ಯೂ ತಿದ್ದಿಕೊಂಬುದು ಮಹಾಪುರುಷರುಗಳೂ ರೂಪಾವಳಿ ಪುಸ್ತಕಾ ಬರೆದು ಸಂಪೂರ್ಣಂ ಮಂಗಳಂ ಕೊಡ್ಲೀಗೌಡನಹುಂಡಿ ಮೈಸೂರಲ್ಲಿ ಯಿರುವ ಪಂಡಿತ ರಂಗೈಯ್ಯನವರ ಬರಹಾ.

**ವಿಷಯ :** ಪ್ರಶ್ನಶಾಸ್ತ್ರ, ಫಲವಿವರ.

**ವಿಶೇಷ :** ಸಮಗ್ರ. ಪ್ರತಿ ಚೆನ್ನಾಗಿದೆ. ಈ ಕಟ್ಟಿನ ಎಲ್ಲ ಪತ್ರಗಳ ಒಂದು ಬದಿಯಲ್ಲಿ ಚಿತ್ರ ಬರೆದಿದೆ.

—ಜಿಜಿಎಂ

## 709

ಕೆ. ೧೨೨೮ | ರೂಪಾವಳಿ ಚಿಂತಾಮಣಿ | ಗದ್ಯ
೬.೬''×೧.೪'' | ? | ?
೧–೬೭ ಪತ್ರ | ೭ ಪಂಕ್ತಿ | ೩೦ ಅಕ್ಷರ

**ಆದಿ :** ರೂಪಾವಳಿ ಚಿಂತ್ಯಾಮಣಿ ಬರೆಯುದಕ್ಕೆ ನಿರ್ವಿಘ್ನಮಸ್ತು ಶ್ರೀರಸ್ತು ॥ ಯಿಾ ಚಿಂತಾಮಣಿಯ ನೋಡುವ ವಿವರಾ ॥ ಗಂಧ ಅಕ್ಷತೇ । ಪೂಸ್ಯ । ತಾಂಬೂಲ । ಸವರ್ನಕಾಣಿಕೆಯ್ನುನಿತ್ತು । ರಾಹುಯಿಲ್ಲದ ಮುಖವಾಗಿ ಕುಳಿತುಕೊಂಡು । ವಿಗ್ನೇಶ್ವರನ ಪೂಜೆಯಂ ಮಾಡಿ । ಸರಶ್ವತಿಯ ಪೂಜೆಯುಂ ಮಾಡಿ । ಶಸೀಸ್ವರನ ಪೂಜೆಯುಂಗೈದು

**ಅಂತ್ಯ :** ಯಿಾ ಯಂತ್ರವ ಬರೆದು......ಗರ್ಬ ಬೀಳುಹುದು ಕಹಿ ಕರಗಿತು.

**ವಿಷಯ :** ಶಕುನ ಶಾಸ್ತ್ರ ; ಯಂತ್ರಗಳಿವೆ.

**ವಿಶೇಷ :** ಒಂದು ಕಡೆ ಚಿತ್ರ. ಆ ಚಿತ್ರಕ್ಕೆ ಸಂಬಂಧಿಸಿದಂತೆ ಕೆಲಸವಾಗುವುದರ ಬಗೆಗೆ ವಿವರಗಳನ್ನು ಮತ್ತೊಂದು ಪತ್ರದಲ್ಲಿ ಕೊಡಲಾಗಿದೆ,

—ಕೆಆರ್ಎಸ್

## 710

ಕೆ. ಬಿ. ೬೫೪/೧ | ರೇಣುಕ ಶಿವಾಚಾರ್ಯನ ಮಹಿಮೆ | ಯಕ್ಷಗಾನ
೬.೫''×೮.೩'' | ? | ?
೧–೧೩೮ ಪತ್ರ | ೧೭ ಪಂಕ್ತಿ | ೨೪ ಅಕ್ಷರ

**ಆದಿ :** ಓಂ ಶ್ರೀ ಪಾರ್ವತೀ ಪರಮೇಶ್ವರಾಯ ನಮಃ ।
ಶ್ರೀ ಜಗದ್ಗುರು । ರೇಣುಕಾ ಶಿವಾಚಾರ್ಯನ ಮಹಾತ್ಮೆ । ಸೂತ್ರಧಾರಿ ಶಿವ ಧ್ಯಾನ ಮಾಡಿ ಮುಂದಲ ಮಹಿಮೆ ಸೂಚಿಸುವನು ।
ರಾಗ । ನಾಟಿ । ಶಾರ್ದೂಲ ವೃತ್ತ ॥

ಶ್ರೀಮದ್ಗುರುವರ ಚಂದ್ರಮೌಳಿ ಗಿರಿಜಾ ವಾಮಾರ್ಧದೇಹಾಂಚಿತಾಂ
ಸೋಮಾರ್ಕಾನಲ ನೇತ್ರ ಪಂಚವನಾ ಮಾಯಾ ತನುಶ್ಛೇದನಂ ॥
ವ್ಯೋಮಾತೀತ ನಿರಂಜನ ಎನಿಸುಹ್ಯೆ ನೀರೇಜ ಮಾರ್ತಾಂಡ ಮೇಶ್ ॥
ಶ್ರೀಮದ್ಭಕ್ತ ಚಕೋರಚಂದ್ರ ಸಲಹ್ಯೆ ಪಾರ್ವತೀ ಪರಮೇಶ್ವರೋಂ ।

ಅಂತ್ಯ : ಜಯ ನಮಃ ಪಾರ್ವತೀ ಪತಿ ಹರ ಹರ ಮಹದೇವ
ನಂದೀಶಾದಿ ಪ್ರಮಥರೋಂ ಹರ ಹರ ಮಹದೇವ ।
ಕ್ರಿ ಸ್ತ. ಶಕ ಸಾವಿರದ ವಂಬೈನೂರ ನಲವತ್ತನೆಯ ಇಸವಿಯಲ್ಲಿ ।
ಮೈಸೂರು ಸೀಮೆ । ಬೆಂಗಳೂರು ಡಿಸ್ಟ್ರಿಕಟ್ಟು । ಕ್ಲೋಪ್ಪೇಟಿ ತಾಲ್ಲೂಕು ।
ಭೀಮೇಶಾದ್ರಿ । ರೇಣುಕಾಸಿದ್ಧೇಶ್ವರಸ್ವಾಮಿಯ । ಮಾಜಿ ಅರ್ಚಕ । ಚನ್ನ
ಪಟ್ಣದ । ವೀರಭದ್ರಶಾಸ್ತ್ರಿಯಿಂದ ಸಂಗ್ರಹವೂ ।

ವಿಷಯ : ರೇಣುಕ ಶಿವಾಚಾರ್ಯನ ಮಹಿಮೆ.

ವಿಶೇಷ : ಕೃತಿ ಸಮಗ್ರ. ಬರವಣಿಗೆ ಸುಂದರ ಹಾಗೂ ಪ್ರತಿ ಸುದೃಢವಾಗಿದೆ. ಇದರೊಂದಿಗೆ ಜಗದ್ಗುರು ಪಂಚಶಿವಾಚಾರ್ಯರ ಮಹಾತ್ಮೆ ಮುಂತಾದ ಇತರ ೪೫ ಕೃತಿಗಳಿವೆ.

—ಎಂಪಿಎಂ

## 711

ಕೆ. ಬಿ. ೬೯೪/೩೬ **ರೇಣುಕಾದೇವಿ ಪೂಜೆ ಕುಂಕುಮಾರ್ಚನೆ ವಿಧಿ** ಶ್ಲೋಕ, ವೃತ್ತ
೬.೫"×೮.೩" ? ?
೨೨೪–೨೩೫ ಪುಟ ೧೬ ಪಂಕ್ತಿ ೨೧ ಅಕ್ಷರ

ಆದಿ : ಪಾರ್ವತೀ ಪರಮೇಶ್ವರ ಧ್ಯಾನ । ಘಂಟಾನಾದ । ದಶದಿಗ್ಬಂಧನೆ । ಸಂಕಲ್ಪ ದಿಂದ । ಯಜಮಾನ್ನ ಹೆಸರಿಡಿದು । ಕಾಯಜೀವರಕ್ಷನಾರ್ಥೆ । ಸಮಸ್ತ ಪಾಪಕ್ಷಯಾರ್ಥೆ । ಸರ್ವ ಕಾರ್ಯ ಜಯಾರ್ಥೆ । ನಾನಾಗ್ರಹ ಭಯ ಭೀತಿ ಪೀಡ ರೋಗ ನಿವಾರಣಾರ್ಥೆ । ಧನಧಾನ್ಯ ವಸ್ತ್ರಾಭರಣ ಗೋಮಹಿಷಿ ಭೂತುರುಗವಾಹನಾದಿ ಅಷ್ಟೈಶ್ವರ್ಯ ಇಷ್ಟಾರ್ಥಶಿಧ್ಯಾರ್ಥೆ। × × ×। ಮಹಪೂಜೆ ಕುಂಕುಮಾರ್ಚನೆ ಮಹಂಕರಿಷ್ಯೆ ॥ ಎಂದು ॥

ಅಂತ್ಯ : ನಾದಬಿಂಧು ಕಳಾಯ್ಯೆನ್ನಮಃ । ತ್ರಿಪುರಾಯ್ಯೆನ್ನಮಃ । ತ್ರಿಗುಣಾಯ್ಯೆ ನ್ನಮಃ । ತ್ರಿಗುಣತೀತಾಂಬಿಕಾಯ್ಯೆನ್ನಮಃ । × × × × ಷೋಡ ಶಾಕ್ಷರೀನ್ನಮಃ । ಶ್ರೀ ರೇಣುಕಾದೇವಿನ್ನಮೋನ್ನಮಃ ॥ ಎಂದು ಪಾದ ಕರ್ಚಿಸುವುದು ॥ ಮತ್ತು । ಈ ನಾಮುಗಳಿಂದ ಸರ್ವ ದೇವತಾ ಶಕ್ತಿನಾಮು ಸಂಕಲ್ಪದಿಂದ ಪೂಜಿಸಬಹುದು ॥

ವಿಷಯ : ರೇಣುಕಾದೇವಿಯ ಪೂಜೆ ಮತ್ತು ಕುಂಕುಮಾರ್ಚನೆಯ ವಿಧಾನದ ವಿವರಣೆ.

ವಿಶೇಷ : ಪ್ರತಿ ಸುದೃಢ, ಕೃತಿ ಸಮಗ್ರ ; ಬರವಣಿಗೆ ಸುಂದರ. ಇದರೊಂದಿಗೆ ಶ್ರೀರಾಮ ಮಹಿಮಾ ಸ್ತೋತ್ರ ಮುಂತಾದ ಕೃತಿಗಳಿವೆ.

—ಎಂಪಿಎಂ

## 712

| ಕೆ. ೮೦೪ | ರೇವಣ ಸಾಂಗತ್ಯ | ಸಾಂಗತ್ಯ |
|---|---|---|
| ೧೫.೭"×೩.೧" | ಚೆನ್ನಬಸವ | ? |
| ೧–೫೭ ಪತ್ರ | ೯ ಪಂಕ್ತಿ | ೯೬ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಶ್ರೀ ಯಡಾನ್ಗೊಡ ಮಠಾಧ್ಯಕ್ಷಾಃ । ಚರಪಟ್ಟಾಭಿಷೇಕಾ । ಚಂನ ಬಸವ ದೇಶಿಕೇಂದ್ರರವರ ಕರಕಮಲ ಸಂಜಾತ ವೃಷಭಾಂಹ್ವಯರ । ಪಾದಕಮಲೋದ್ಭವನಾದ ಶಿಧಲಿಂಗಾಹ್ವಯನು । ಭಕ್ತಿಯಿಂದಾ ಪಠಿಸುವದಕೆ । ಲಿಖಿಸಿದ ಶ್ರೀಕೊಲ್ಲಿಪಾಕಿ ಸೋಮಲಿಂಗೇಶ್ವರ ನಾಥೋದ್ಭವರಾದಾ । ರೇವಣಾಚಾರ್ಯರ ಸಂಗತ್ಯ ಬರೆವುದಕೆ ಶುಭಮಸ್ತೂ ॥ ನಿರ್ವಿಘ್ನಮಸ್ತೂ ॥ ಆರೋಗ್ಯಮಸ್ತೂ ॥ ಶ್ರೀರಸ್ತೂ

ಶ್ರೀಮದ್ಗುರು ರಾಮಗಿರಿಯ ಸಿದ್ಧೇಶನ
ಕೋಮಲ ಪದಪದ್ಮಗಳಿಗೆ
ನಾ ಮುದವಿತ್ತೆಂನ್ನ ಹೃದಯ ಕಮಲದಭಿ
ರಾಮ ಕುಸುಮವಿತ್ತೆರಗುವೆ ॥ ೧ ॥

× × ×

ರೇವಣಸಿಧಾನ ಮಹಿಮಾಂಬುಧಿಯೊಳು
ತಾವಣು ಮಾತ್ರವ ತೆಗೆದೂ
ದೇವಪುರದಾ ವೀರಣ್ಣೊಡೆಯರ ಸುತ
ತಾ ವಹಿಲದಲಿ ಪೇಳಿದನೂ ॥ ೧೮ ॥

ಅಂತ್ಯ : ಯಿದು ರಾಮಗಿರಿಯ ಕರಿಯ ಶಿಧೇಶನ
ಪದಸರೋರುಹ ಮಧುಕರನೂ
ಸದಮಲ ಚಂನ ಬಸವ ಪೇಳ್ದ ಕೃತಿಯೊಳು
ಪದವಿಡೆ ಪದಿನೈದು ಸಂಧಿ ॥ ೯೯ ॥

ಅಂತು ಸಂಧಿ ೧೫ಕ್ಕಂ ಪದನಂ ೧೮೧೨ಕ್ಕಂ ಮಂಗಳ ಮಹಾಶ್ರೀ × × × × ಶ್ರೀಮನ್ನೃಪಶಾಲಿವಾಹನ ಶಕಾಬ್ದಾಃ ೧೭೬೬ನೇ ಪ್ರವರ್ತ ಮಾನಕ್ಕೆ ಸಲುವ ಪರಭವನಾಮ ಸಂವತ್ಸರದ ಪುಷ್ಯ ಬ ೧೨ ಗುರುವಾರದ

ವಂಭತ್ತು × ತಾಸಿಗೆ ಸಂಪೂರ್ಣ ಮಂಗಳ ಮಂಹಾಶ್ರೀ × × ×
ವೃಷಾಭಾಂಹ್ವಯಂರ ಕುವಂರರಾದ ಶಿಧಲಿಂಗಪ್ಪನವರು ಲಿಖಿಸಿದ ರೇವಣ
ಶಿಧೇಶ್ವರನ ಚಾರಿತ್ರ ಸಮಾಪ್ತ.

ವಿಷಯ : ರೇವಣಸಿದ್ಧೇಶ್ವರನ ಚರಿತ್ರೆ.

ವಿಶೇಷ : ಪ್ರತಿ ಚೆನ್ನಾಗಿದ್ದು ಸಮಗ್ರವಾಗಿದೆ. ಸುಂದರ ಬರಹ.

—ಕೆಆರ್‌ಎಸ್

## 713

| ಕೆ. ೧೧೨೯ | ರೇವಣ ಸಾಂಗತ್ಯ | ಸಾಂಗತ್ಯ |
|---|---|---|
| ೧೬.೭" × ೧.೪" | ಚೆನ್ನಬಸವ | ? |
| ೧–೬೮ ಪತ್ರ | ೭ ಪಂಕ್ತಿ | ೭೫ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯಂ ನಮಃ ॥ ಶ್ರೀ ಸೋಗೆ ಪುರಾಧಿನಾಥಯೋಂ
ನ್ನಮಃ ಶ್ರೀ ಕೊಟ್ಟೂರ ಬಸವೇಶ್ವರನ ಪಾದಾರವಿಂದವೆ ಗತಿ ॥ ಸ್ವಸ್ತಿಶ್ರೀ
ಜಯಶಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೭೫೭ನೆಯಂ ಜಯ
ಸಂವತ್ಸರದ ಫಾಲ್ಗುಣ ಶುದ್ಧ ೧೧ ಸೋಮ್ಯವಾರದಲು ಪ್ರಾರಾಂಬ
ಮಾಡಿ ಬರದ ರೇವಂಣ ಸಾಂಗತ್ಯ ಪುಸ್ತಕೆಕ್ಕೆ ಶುಭಮಸ್ತು.

ಶ್ರೀ ಮದ್ಗುರು ರಾಮಕರಿಯ ಸಿದ್ಧೇಶನ
ಕೋಮಲಪದ ಪದ್ಮಂಗಳಿಗೆ
ನಾ ಮುದವೆತ್ತೆಂನ್ನ ಹೃದಯಂಕಮಂಲದಭಿ
ರಾಮ ಕುಸುಮಂವಿತ್ತೆರಗೂವೆ ॥ ೧ ॥

ಅಂತ್ಯ : ಯಿದು ರಾಮಗಿರಿಯ ಕರಿಯ ಸಿದ್ಧೇಶನ
ಪದಸರೋರುಹ ಮಧುಕರನಂ
ಸದಮಲ ಚೆಂನ್ನಬಸವ ಪೇಳ್ವ ಕೃತಿಯೊಳು
ಪದವಡೆ ಪದಿನೈದು ಸಂಧಿ ॥ ೯೭ ॥

ಅಂತು ಸಂಧಿ ೧೫ಕ್ಕಂ ಪದನು ೧೬೩೫ಕ್ಕಂ ಮಂಗಳ ಮಹಾಶ್ರೀಶ್ರೀ.
ಮಂನ್ಮಥ ಸಂ॥ರದ ಆಷಾಢ ಶುದ್ಧ ೭ ರೇವಣ ಸಾಂಗತ್ಯ ಸಂಪೂರ್ಣ
ಮಂಗಳ ಮಂಹಾಶ್ರೀ ಶ್ರೀ.

ವಿಷಯ : ರೇವಣಸಿದ್ಧನ ಕಥೆ.

ವಿಶೇಷ : ಪ್ರತಿ ಚೆನ್ನಾಗಿದೆ. ಸಮಗ್ರ.

—ಜಿಜಿಎಂ

## 714

| | | |
|---|---|---|
| ಕೆ. ೧೩೭೭ | **ರೇವಣ ಸಾಂಗತ್ಯ** | ಸಾಂಗತ್ಯ |
| ೧೦'' × ೨.೨'' | ಚೆನ್ನಬಸವ | ? |
| ೧–೧೩೫ ಪತ್ರ | ೭ ಪಂಕ್ತಿ | ೩೮ ಅಕ್ಷರ |

**ಆದಿ :** ಶ್ರೀ ಶಾರದಾ ಗುರುಭ್ಯೋನಮಃ × × ರೇವಂಣಸಿದ್ಧೇಶ್ವರನ ಸಾಂಗತ್ಯ ಬರಉದಕ್ಕೆ ಶುಭಮಸ್ತು ॥ ಶೋಭನಮಸ್ತು ॥ ಸಂಗತ್ಯವರ್ನಾ ॥ ರಾಗಾ ॥

ಶ್ರೀಮದ್ಗುರುರಾಯ ಕರಿಯ ಸಿದ್ಧೇಶನ
ಕೋಮಲ ಪದಪದ್ಮಗಳಿಗೆ
ನಾ ಮುದೆವೆತ್ತೆನ್ನ ಹೃದಯ ಕಮಲದಭಿ
ರಾಮ ಕುಸುಮ ವೆತ್ತೆರಗುವೆನು ॥ ೧ ॥

× × ×

ರೇವಣ ಸಿದ್ಧನ ಮಹಿಮಾಂಬುಧಿಯೊಳು
ತಾವಣು ಮಾತ್ರವ ತೆಗದು
ದೇವಪುರದ ವೀರಣ್ಣೊಡೆಯರ ಸುತ
ಭಾವಕ ಬಸವ ಪೇಳಿದನು ॥ ೧೭ ॥

**ಅಂತ್ಯ :** ಯಿದು ರಾಮಗಿರಿಯ ಕರಿಯ ಸಿದ್ಧೇಶನ
ಪದಸರೋರುಹಮಧುಕರನು
ಸದಮಲ ಚೆನ್ನಬಸವ ಪೇಳ್ದ ಕೃತೆಯೊಳು
ಪದವಿಡೆ ಪದಿನೈದು ಸಂಧಿ ॥ ೯೫ ॥

ಅಂತು ಸಂಧಿ ೧೫ಕ್ಕಂ ಪದನು ೧೬೫೫ಕ್ಕಂ ಮಂಗಳ ಮಹಾ ಶ್ರೀ ಶ್ರೀ.
× × × ರೇವಣಾ ಸಿದ್ಧೇಶ್ವರನ ಚರಿತ್ರೆ ಸಮಾಪ್ತಃ ಶ್ರೀ ಶ್ರೀ.

**ವಿಷಯ :** ರೇವಣಸಿದ್ಧೇಶ್ವರನ ಚರಿತ್ರೆ.

**ವಿಶೇಷ :** ಸಮಗ್ರ. ಮೊದಲನೆಯ ಗರಿ ತ್ರುಟಿತವಾಗಿರುವುದರಿಂದ ಅದನ್ನು ಪ್ರತಿ ಮಾಡಿದ ಇನ್ನೊಂದು ಓಲೆಯನ್ನು ಸೇರಿಸಿದೆ.

—ಜಿಜಿಎಂ

## 715

| | | |
|---|---|---|
| ಕೆ. ಎ. ೫೦೧ | **ರೇವಣ ಸಿದ್ಧೇಶ್ವರ ಪುರಾಣ** | ವಾರ್ಧಕ ಷಟ್ಪದಿ |
| ೧೦.೫'' × ೯'' | ಚತುರ್ಮುಖ ಬೊಮ್ಮರಸ | ಸು. ೧೫೮೦ |
| ೧–೧೬೪ ಪುಟ | ೨೦ ಪಂಕ್ತಿ | ೧೮ ಅಕ್ಷರ |

**ಆದಿ :** ಶ್ರೀಗುರು ರೇವಣ ಸಿದ್ಧೇಶ್ವರನ ಪಾದವೇ ಗತಿ. ಶ್ರೀ ಶಾಂತಮಲ್ಲಿಕಾರ್ಜುನ
...............

ರಾಗ ಮಾಳವ ಗೌಳ.

ಪದನು : ಶ್ರೀಮದಮೃತಾಂಶುಲೇಖಾಮುರುದ್ಗಂಭೀ
ರಾಮ ಪಿಂಗಲ...................
.......................ಸದಪಾಂಗ
ಶ್ಯಾಮಗಳ ಕಾಮಹರ ಭೀಮ ಸುತ್ರಾಮಮು
ಖ್ಯಾಮರಸ್ತೋಮನತ ಹಿಮಗಿರಿಮಂದಿರಪಿ
.............................

ಅಂತ್ಯ : ..........................ಪೆರ್ಬಾ ನಲಂತೆ ಕಿವೆಗುಡಿತೆಯಿಂದೀಂಟಿ ಒಲ್ಲ ರಸಿಕರಿಗೆ ಕರಪೂರ್ಣ ಶಿವಾರ್ಪಣಮಸ್ತು ಮಂಗಳ ಮಹಾ ಶ್ರೀ ಸ್ವಭಾನು ಸಂವತ್ಸರದ ಮಾಘ ಬ ೧೧ ಮಂಗಳವಾರದಲ್ಲಿ ಯಿಾ ನ... . ಕಡಬದ ಸೇನಬೋವ ಕೆಂಪತಿಮ್ಮರಸಯ್ಯನ ಮಗ .....

ವಿಷಯ : ರೇವಣ ಸಿದ್ಧೇಶ್ವರನ ಕಥೆ.

ವಿಶೇಷ : ಕಾವ್ಯದ ಅನೇಕ ಭಾಗ ಲುಪ್ತವಾಗಿದೆ.

—ಹಕರಾ

## 716

ಕೆ. ೧೮೫೨/೧ | ಲಕ್ಷಣೆ ಕಲ್ಯಾಣ | ಯಕ್ಷಗಾನ

೮.೫"×೨" | ? | ?

೧–೧೦ ಪತ್ರ | ೧೦ ಪಂಕ್ತಿ | ೪೦ ಅಕ್ಷರ

ಆದಿ : ಶ್ರೀ ಗಣಾಧಿಪತಯೇಂ ನಮಃ । ಶ್ರೀ ರಾಮಾಯಂ ನಮಃ । ಅಂದಗಾರ ಲಕ್ಷ್ಮೀನಾರಾಯಣದ ವರ ಪಾ...ದವೆ ಗತಿ ಲಕ್ಷಣೆ ಕಲ್ಯಾಣ ಬರುವುದಕ್ಕೆ ಶುಭಮಸ್ತು ॥
ಶ್ರೀಕಾಂತಂ ಕಮಲಜ ಮಿತ್ರಂ ಕೋಟಿಧಾಮಂ
ನಾಕೇಶಾರ್ಚಿತ ದುರವಿಜಯೈಕ ಪದ್ಮಸೋಮಂ
ಗೋಕರ್ಣಾಭರಣ ಸಖಂ ಸುಪುಣ್ಯನಾಮಂ
ಲೋಕೇಶಾರ್ಜಿತ ಚರಣಂ ಭಜಾಮಿ ಶಾಮಂ ॥ ೧ ॥

ರಾಗ ॥ ಭುಜಗಭೂಷಣ ವಿಘ್ನೇಶ್ವರನ ಸಂಸ್ತುತಿಸಿ
ಭರ್ಗನ ಚರಣ ಪಂಕೇಜಕೆ ನಮಿಸಿ
ಅಜಗನಯಾನ ದಿವಿಜರ ಸ್ಮರಿಸಿ
ಅಂಬಿಕಮಾ ಸರಾಸ್ವತಿಯರ ಭಜಿಸಿ ॥ ೧ ॥

ಅಂತ್ಯ : ಧನುಜಾರಿಗೆ ರಾಧಾ ನಂದನೆಗೆ
ಸನಕ ವಿನಮಿತೆಗೆ ಸೀಲಾಂಗನೆಗೆ
ಮನಸಿಜನಯ್ಯಗೆ ಭದ್ರಾನ್ವಿಕೆಗೆ
ಚಿನುಮಯುಗೆ ಸುಲಕ್ಷಣೆಗೆ ವಿರಾಜಿಪವನಜದಾರತಿಯು ಬೆಳಗಿರೆ
ಶಂಕರಮಿತ್ರಗೆ ಸನ್ಮಂಗಲೆಗೆ
ಲಂಕಾಧಿಪನಾಶಗೆ ಜಾನಕಿಗೆ
ವೆಂಕಟರಮಣಗೆ ಪದ್ಮಾವತಿಗೆ
ಬಿಂಕದಿ ಪೂರ್ಣಶಶಾಂಕವದನೆಯರು
ಕುಂಕುಮದಾರತಿಯ ಬೆಳಗಿರೇ ॥ ೩ ॥

ವಿಷಯ : ಕೃಷ್ಣನು ಲಕ್ಷಣೆಯನ್ನು ಮದುವೆಯಾದ ಕಥೆ.

ವಿಶೇಷ : ಶಿಥಿಲ ಪ್ರತಿ. ಪತ್ರಗಳು ಅಸ್ತವ್ಯಸ್ತ. ಇದೇ ಕಟ್ಟಿನಲ್ಲಿ ಕರ್ಣಾರ್ಜುನರ ಕಾಳಗ, ವಿಷ್ಣುಸಹಸ್ರನಾಮ ಎಂಬ ಕೃತಿಗಳು ಇರುವುದಲ್ಲದೆ ಕೆಲವು ಮಿಶ್ರ ಗರಿಗಳಿವೆ.

—ವೈಸಿಬಿ

## 717

ಕೆ. ಎ. ೩೪೭/೪ | ಲಕ್ಷ್ಮೀಕಲ್ಯಾಣ | ಹಾಡು

೧೩.೮" × ೯.೩" | ? | ೧೯ನೆಯ ಶತಕ

೧೧೧–೧೧೪ ಪತ್ರ | ೧೭ ಪಂಕ್ತಿ | ೧೭ ಅಕ್ಷರ

ಆದಿ : ಲಕ್ಷ್ಮೀಕಲ್ಯಾಣ ಬರೆವುದಕ್ಕೆ ಶುಭಮಸ್ತು ॥ ಶ್ರೀರಸ್ತು ॥
ಕಲ್ಯಾಣಂ ಲಕ್ಷ್ಮೀಕಲ್ಯಾಣಂ
ಕಲ್ಯಾಣಂ ನಮ್ಮ ಕಾರುಣ್ಯ ಮೂರ್ತಿಗೆ
ಕಲ್ಯಾಣಂ ಲಕ್ಷ್ಮೀಕಲ್ಯಾಣಂ ॥ ಪಲ್ಲಾ ॥
ಗಜಮುಖ ಗಜನಾಯಕ ಶರಣು
ತ್ರಿಜಗವಂದಿತ ಸದ್ಗುರು ಶರಣು
ಭುಜಗಭೂಷಣ ಸುಖವೇಲಾಪುರಿಯ ಚೆನ್ನಾ
ನಿಜ ನಿತ್ಯಾನಂದನೆ ಶರಣು ॥ ೧ ॥

ಅಂತ್ಯ : ಆಗಲೇ ನಾಲ್ಕನೆ ದಿವಸದಲಿ
ನಾಗವಲ್ಲಿಯು ಸಂಭ್ರಮವಸೆಯೆ
ಭೋಗೀಶಯನನಿಗೂ ಭೂಜಗನ್ಮಾ
ತೇಗೂ ವಿವಾಹದುತ್ಸಹದೋಕುಳಿಯಾಡೆ ॥

ಕಲ್ಯಾಣಂ ಲಕ್ಷ್ಮೀಕಲ್ಯಾಣಂ ॥ ೩೭ ॥
ಲಕ್ಷ್ಮೀಕಲ್ಯಾಣಂ ಸಂಪೂರ್ಣಂ ॥ ಜಯ ಮಂಗಳಂ ಮಹಾ ಶ್ರೀ.

ವಿಷಯ: ನಾರಾಯಣ ಲಕ್ಷ್ಮಿಯರ ವಿವಾಹ.

ವಿಶೇಷ : ಬರಹವು ಚೆನ್ನಾಗಿದೆ. ಸಮಗ್ರ. ಇದೇ ಪುಸ್ತಕದಲ್ಲಿ ಇನ್ನೂ ಇತರ ನಾಲ್ಕು ಗ್ರಂಥಗಳಿವೆ. ೧೧೪ನೆಯ ಪತ್ರವು ಶಿಥಿಲ ಹಾಗೂ ಅಂಚಿನಲ್ಲಿ ಕೆಲವು ಭಾಗವು ಹರಿದುಹೋಗಿದೆ.

—ಕೆಆರ್‌ಎಸ್

## 718

| ಕೆ. ಎ. ೪೪೭ | ಲಕ್ಷ್ಮೀಸ್ವಯಂವರ ಶೋಭಾನೆ | ಪದ |
|---|---|---|
| ೧೦.೫"×೯" | ? | ? |
| ೧–೫೪ ಪುಟ | ೨೦ ಪಂಕ್ತಿ | ೨೮ ಅಕ್ಷರ |

ಆದಿ : ಲಕ್ಷ್ಮೀ ಸ್ವಯಂವರ ಶೋಭಾನೆ
ದೇವರ........................
..........................................
.. ..............................ತ್ರ
ವಿಭುವಿನ ಪಟ್ಟದ ರಾಣಿ ಕಲ್ಯಾಣಿ ಹರಿವೇಣಿ

ಅಂತ್ಯ : ......................... ......ಬೆಚ್ಚಿದ
ಪೋಲಮರೆಪೊರಗಿದವೊಲು
ಮುಗಳೊರಗಲು । ಹದ .....
........................ ....................ಂತ್ರಾ
ವೇಶವಡಲಿಟ್ಟವೊಲು । ಮುದದ ಮುನ್ನೀರೊಳು ಮುಳುಗಿ ತೇಲುತಿವೆ ॥ ೧ ॥

ವಿಷಯ : ಶೋಭಾನೆ ಪದಗಳು.

ವಿಶೇಷ : ಗ್ರಂಥದ ಬಹು ಭಾಗ ಲುಪ್ತವಾಗಿದೆ. 'ಟಿ. ನರಸೀಪುರ. ಮೂಗೂ ರಾಜ ವೀರ ರಾಜೇಂದ್ರನ ಸೇವಿತ ಪಾದಾಂಭೋಜ' ಎಂದಿರುವುದರಿಂದ ಕವಿ ಮೂಗೂರಿನವನಿರಬೇಕು.

—ಹಕರಾ

## 719

| ಕೆ. ಬಿ. ೭೯೪/೩೭ | ಲಲಿತಾಷ್ಟೋತ್ತರ ಶತನಾಮ ಸ್ತೋತ್ರಾವಳಿ | ಶ್ಲೋಕ, ಗದ್ಯ |
|---|---|---|
| ೬.೫"×೮.೩" | ? | ? |
| ೨೩೫–೨೪೬ ಪತ್ರ | ೧೭ ಪಂಕ್ತಿ | ೨೦ ಅಕ್ಷರ |

ಆದಿ : ಶ್ರೀ ರೇವಾಂಬಿಕಾದೇವಿನ್ನಮೋನ್ನಮಃ ।
ರಜತಾಚಲ ಶೃಂಗಾಗ್ರಹರ್ಮ್ಯಾ ಸ್ಥಾಯ್ಯೆನ್ನಮೋನ್ನಮಃ ।
ಹಿಮಾಚಲ ಮಹಾವಂಶ ಪಾವನಾಯ್ಯೆನ್ನಮೋನ್ನಮಃ ।
ಶಂಕರಾರ್ಧಾಂಗ ಸೌಂದರ್ಯ ಲಾವಣ್ಯಾಯೆನ್ನಮೋನ್ನಮಃ ॥

ಅಂತ್ಯ : ಭೂತಲದಿ ಬೇತಾಳ ರಾಕ್ಷಸ
ಭೀತಿಗಳ ಪರಿಹರಿಸಿ ಬಹಳ
ಪ್ರೀತಿಯೊಳು ಸ್ತುತಿಸುರ ಸಲಹಿದ ಬಿರುದ ನೀ ವಹಿಸೀ ॥
ಸಾತಿಶಯದೊಳಗಿಹ ವಿಶಾಷ್ಟಾ
ಶ್ರೀತ ಮತವನು ಖಂಡಿಸಿದ ಪ್ರ
ಖ್ಯಾತೆ ರೇಣುಕಾದೇವಿ ರಕ್ಷಿಸು ಅನವರತ ನೀನು ॥ ೩

ವಿಷಯ : ರೇಣುಕಾದೇವಿಯ ಸ್ತುತಿ.

ವಿಶೇಷ : ಸಮಗ್ರ ಕೃತಿ. ಸುದೃಢ ಪ್ರತಿ. ಸುಂದರ ಬರವಣಿಗೆ. ಇದರೊಂದಿಗೆ 'ಪಾರ್ವತೀ ಕವಚ ಸ್ತೋತ್ರ' ಮುಂತಾದ ಕೃತಿಗಳಿವೆ. ಕೆಬಿ ೭೯೪/೩೮, ೩೯, ೪೦ ಸಂಸ್ಕೃತ ಕೃತಿಗಳು.

—ಎಂಪಿಎಂ

## 720

| ಕೆ. ಎ. ೩೩೯ | ಲಲಿತೋಪಾಖ್ಯಾನ | ಗದ್ಯ |
|---|---|---|
| ೧೨.೫" × ೮" | ಮುಮ್ಮಡಿ ಕೃಷ್ಣರಾಜ | ೧೮೫೦ |
| ೧–೨೪೮ ಪತ್ರ | ೨೭ ಪಂಕ್ತಿ | ೨೨ ಅಕ್ಷರ |

ಆದಿ : ಶ್ರೀ ಗಣೇಶ ಶಾರದಾ ಗುರು ಪರಮಾತ್ಮನೇ ನಮಃ ॥ ಶ್ರೀರಾಮಾಯ .... ಲಲಿತೋಪಾಖ್ಯಾನೇ ಸಹಸ್ರಾಯು ಕಥಾ ಪ್ರಾರಂಭೇ ನಿರ್ವಿಘ್ನ ಮಸ್ತು......
ಜಯತ್ಯಮಿತ ಕಲ್ಯಾಣ ಗುಣರತ್ನ ಮಹೋದಧಿಃ ।
ಮಹೀಶೂರ ಪುರೇ ಶ್ರೀಮನ್ಕೃಷ್ಣರಾಜ ಮಹೀಪತಿಃ ॥ ೧ ॥

× × × ×

ಸ್ವಸ್ತಿ ಶ್ರೀಮದಖಂಡ ಭಾರತ ಖಂಡ...ಡ ನಾಯಕ ಮಾನ ಕೋಸಲ ದೇಶದೊಳು ನಾಕದಂತೆ ವಿಬುಧಾಶ್ರಯಮಾಗಿ ರಸಾತಲದಂತೆ ನೇತ್ರ ಶ್ರುತಿ ಮನೋಹರಮಾಗಿ × × × × ಧರ್ಮಗುಪ್ತನೆಂಬ ಮಹಾ... ಯುಕ್ತನಾಗಿ ಧರೆಯಂ ಪೊರೆಯುತ್ತಲಿರಲು...ಜೆಗಳು ಸ್ವಸ್ವವಿಹಿತ ಕರ್ನಾಶ್ರಮಂಗಳಲ್ಲಿ। ಯಿಾಷ ..ತಿರೇಕವಿಲ್ಲದಂತೆ ನಡೆವದರಿಂಧ ತತ್ರತ್ಕಾಲ ದಲ್ಲಿ ಪರ್ಜಂನ್ಯ ವರ್ಜಿಸುವದು।

ಅಂತ್ಯ : ವೈಭವದಿಂ ಕುವರನಿಗ ಮದುವೆಯನು ಮಾಡಿ ನಿಜಬುಧುನಿಕರಗಳಿಗೆ ಬಹು ಮತಿಯ ಮಾಡಿ ಮೋಣವರಿಗಪ್ಪಣೆಯಿತ್ತು ಸುಖದಿಂದಲಿರುತಿರ್ದರೆಂ ಬಲ್ಲಿಗೆ ॥ ಗದ್ಯಾ ॥ × × × × ಶ್ರೀಮತ್ಕೃಷ್ಣರಾಜವಡೆಯರವರು ಲೋಕೋಪಕಾರಾರ್ಥವಾಗಿ ರಚಿಸಲ್ಪಟ್ಟ ಶ್ರೀಕೃಷ್ಣವಾಣೀವಿಲಾಸ ವೆಂಬಾಂಕಿತದಿಂದ ಕರ್ನಾಟಕ ಭಾಷಾವ್ಯಾಖ್ಯಾನ ರೂಪಕವಾಗಿ ರಚಿಸಿರುವ ಬ್ರಹ್ಮಾಂಡೋಪಪುರಾಣದಲ್ಲಿ ಉತ್ತರ ಭಾಗದಲ್ಲಿ ಲಲಿತೋಪಾಖ್ಯಾನ ದಲ್ಲಿ ಪೂರ್ವಖಂಡದಲ್ಲಿ ಹಯಗ್ರೀವಾಗಸ್ತ್ಯ ಸಂವಾದದಲ್ಲಿ ಚತುರ್ವಿಂ ಶೋಧ್ಯಾಯಃ ॥

ವಿಷಯ : ಬ್ರಹ್ಮಾಂಡಪುರಾಣದ ಉತ್ತರಭಾಗದಲ್ಲಿರುವ ಪೂರ್ವಖಂಡದ ಕಥೆ.

ವಿಶೇಷ : ೧–೬೫ರವರೆಗೆ ಒಂದು ರೀತಿ ಮತ್ತು ೬೫–೨೪೪ರವರೆಗೆ ಮತ್ತೊಂದು ರೀತಿಯ ಬರಹಗಳಿವೆ. ೧; ೪ನೆಯ ಪತ್ರಗಳು ಶಿಥಿಲವಾಗಿವೆ. ಈ ಭಾಗವು ಮಾತ್ರ ಸಮಗ್ರ.

—ಕೆಆರ್‌ಎಸ್

## 721

| ಕೆ. ಬಿ. ೫೪೩ | ಲವಕುಶರ ಕಥೆ | ಯಕ್ಷಗಾನ |
|---|---|---|
| ೮.೭" × ೬.೫" | ? | ? |
| ೧೬೨–೨೧೨ ಪತ್ರ | ೧೬ ಪಂಕ್ತಿ | ೨೮ ಅಕ್ಷರ |

ಆದಿ : ...ಗಳ ಸಂವತ್ಸರದ ಮಾರ್ಗಶಿರ ಶುದ್ಧ ೨ ಬುದುವಾರ ಲವಕುಶರ ಕಥೆ ಬರಿಯುವದಕ್ಕೆ ಶುಭಮಸ್ತು ॥ ರಾಗ ನಾಟೀ
ಆವುದಾನೊಂದ್ದು ಕಾರ್ಯಕ್ಕು ಮೊದಲು ಪ್ರಾರಂಭ ಕಾಲದಲ್ಲುಂಮಂದು ದೇವತಾಪ್ರಾರ್ಥನೆಯುಂನ್ನು ಮಾಡಿ ಅನಂತರದಲ್ಲಿ ಯಾವ ಕಾರ್ಯ ಯಾವ ವಿದ್ಯಾ ಯಾವ ಶುಭ ಮೊದಲಾದಂತಾದು ಮಾಡಬೇಕಾದರೆ

**ಅಂತ್ಯ :** ಪೆತ್ತಾಲಿನಿಂದಿರ್ದ ಬಹುದೆನಿಗೆ
ವೃತ್ತೂಮ ಹಯವನೇರಿದ
ಕರ್ತಗೆ ಅತ್ತಾವತಾರದಿ
ಭಕ್ತರ ಸಲಹಿದ ಮತ್ತೆ ಶ್ರೀ ಪುರಂದರ ವಿಟಲನಿಗೆ ಮಂಗಳಂ ಜಯ ಮಂಗಳಂ ॥ ೩ ॥ ರಾಗಾ ದ್ವಂಶಿ ॥ ಚೂರ್ನಿಕೆ ॥ × × × × ಕೇಳಿದವರಿಗೆ ಧನಕನಕ ವಸ್ತು ವಹನ ದೇವೇಂದ್ರನ ಭೋಗ ಪರಮ ಸವು ಭಾಗ್ಯ ಸಂತೋಷಾ ದೊರೆಯುವವೂ ॥ ಅಂತ್ತುಯಿಪಾ ಕಥೆ ಸಂಪೂರ್ಣ ಮಂಗಳ ಮಹಾ ಶ್ರೀ ॥
ಕಾಳಾಯುಕ್ತ ಸಂವತ್ಸರದ ನಿಜ ಜೇಷ್ಠ ಬ... ಭಾನುವಾರ ಹಗಲು ಘಳಿಗೆ ೮–೧೫ಗೆ ಶಿದ್ಧನಂಜನ ಕುಶಲವರ ಕಥೆ ಸಂಪೂರ್ಣ ಮಂಗಳಾನಿ ಭವಂ ತು ॥

**ವಿಷಯ :** ಲವಕುಶರು ರಾಮನೊಡನೆ ಯುದ್ಧಮಾಡಿದ ಉತ್ತರರಾಮಾಯಣದ ಕಥೆ.

**ವಿಶೇಷ :** ಸಮಗ್ರ, ಆದರೆ ಪತ್ರಗಳಿಗೆಲ್ಲ ಹುಳು ಹೊಡೆದಿದೆ. ಶಿಥಿಲ. ಈ ಗ್ರಂಥಕ್ಕೆ ಮೊದಲು ಅಂದರೆ ೧೫೩ರಿಂದ ೧೬೧ನೆಯ ಕ್ರಮಾಂಕದ ಪತ್ರಗಳಿಲ್ಲ. ಇದೇ ಪುಸ್ತಕದಲ್ಲಿ ಪಂಚವಟೀ ರಾಮಾಯಣ, ಬೇತಾಳ ಪಂಚವಿಂಶತಿ ಕಥೆಗಳು ಮೊದಲಾದ ಒಟ್ಟು ೭ ಕೃತಿಗಳಿವೆ.

—ಕೆಆರ್‌ಎಸ್

## 722

| ಕ. ಬಿ. ೭೪೨ | **ಲಾವಣಿಗಳು** | ಲಾವಣಿ |
|---|---|---|
| ೪"×೬.೩" | ? | ? |
| ೧–೭೩ ಪತ್ರ | ೧೬ ಪಂಕ್ತಿ | ೧೨ ಅಕ್ಷರ |

**ಆದಿ :** ಹರುಷದಿಂದಲಿ ಕುಂತ್ತು ಕೇಳ್ದ ಸಭೆಗೆ ಮುಜುರಿ ಮಾಡ್ವೆನೂ । ಕರುಣವಿಟ್ಟು ತರಳವೇಳುವ ಪದ್ಯಾಗಳ ಆಲಿಸಿಂನ್ನೂ—ಪರಮನಾ ಕೃಪೆ ಇಂದ ನಾನು ಕಲ್ಗಿ ಗುರುಗಳ ಕಥೆಯಂನ್ನೂ—ತರದಿ ವಿವರಿಸಿ ಪೇಳ್ವೆ ನೋಡಿ ಸಂತೋಷಪಡಿರಿಂನ್ನೂ—ಇರದೆ ಬಂದು ಮಾನ ಕಳಕೊಳ್ಳಬೇಡಿ ಕಂದರೆ ನೀವಿಂನ್ನೂ—

**ಅಂತ್ಯ :** ದಪ್ಪ ದಪ್ಪ ಕಾಯಿಗಳೆಲ್ಲಾ
ದರುವೇಶಿಗಳಿಗಾದೆ ಮಿಕ್ಕ ಕಾಯಿಗಳೆಲ್ಲಾ

ಜೋಗಿಯಂ ಕೈ ಪಾತ್ರೆಯಹಾದೇ
ಕೈತಪ್ಪಿ ಬಿದ್ದರೆ ಕದರೆ ಬಿಲ್ಲಿಗೆನಾದೆ।
ಕನಕದಾಸರ ಕೂಡೆ...ರುಪತಿಗೆ ಹೋದೆನ್ನೆಯ್ಯ ಕೃಷ್ಣಾ। ನಾಪ್ಯಾರಿಗಲ್ಲ ವ್ಯಯ್ಯಾ ॥ ೩ ॥

ವಿಷಯ : ಲೋಕ ವಿಚಾರ.

ವಿಶೇಷ : ಸಮಗ್ರ ಪ್ರತಿ. ಮೋಡಿ ಅಕ್ಷರ. ಇದರಲ್ಲಿ ಲಾವಣಿಗಳ ಜತೆಗೆ ಮಂಗಳಾರತಿಗಳೂ ಇವೆ.

—ಎಂಬಿಎಂ

## 723

| ಕ. ೧೭೬೨/೮ | ಲಾವಣಿ ಪದ | ಲಾವಣಿ |
|---|---|---|
| ೭.೫"×೧.೨" | ? | ? |
| ೨ ಪತ್ರ | ೫ ಪಂಕ್ತಿ | ೩೮ ಅಕ್ಷರ |

ಆದಿ : ಶ್ರೀ ಗುರು
ಕುಂಬ್ಬಿಣಿವೀರೇಳಕ್ಕೆ ಶಂಭುಲಿಂಗನೆಂಬೆ ನಿಮ್ಮ ನಂಬಿದ ಕಣ್ಣಗೊಲಿದೆಲೊ
ಅಂಬಿಗಶರಣರ ಮಗಳನು ನೀ ತಂದು ಮುಂಡೆಯೊಳಿರಿಸಿ ಕೊಂಡೆಲೊ ॥ ೧ ॥
ನಂಬ್ಯಣ್ಣಗೊಲಿದು ಹಡಪವೊತ್ತು ಚೆನ್ನನೊಳ್ ಅಂಬಲಿ ಸವಿದುಂಡೆಲೊ
ಕುಂಭಕುಚದ ಮೇಲೆ ಕರದಾಲೆ ಹೊಯ್ಕೆಂದು ವಂದನೆಗೈಸಿಕೊಂಡೆಲೊ ॥ ೨ ॥

ಅಂತ್ಯ : ಹರಗು ಲಾವಣಿಯಿರುವ ಪೇಳಿದರೆ ಬರುವ ಕಳ್ಳಿರು ಪೇಳಿರೆಲೊ
ಆಡಪುಗಂಡಿ ತಾಲಕ್ಷಭೂಪ್ರಭಂಸನಾಗಿ ಹರಿತೆವು ನಾವೆಲ್ಲವೊ ॥
ಧರೆಯೊಳ್ ಜನಕನ ಕೊರಳೊಳ್ ಜಾಜೂರತರಿಯುನಮನಸುತನೆಲೊ
ವುತ್ತರ ಕಾಶಿಯ ಲಿಂಗನ ವರದಿಂದ ಪೇಳಿದ ಸ್ಥಿರದ ಲಾವಣಿಪದವೆಲೊ ॥ ೧೨ ॥

ವಿಷಯ : ಶಿವ ಮಹಿಮೆ.

ವಿಶೇಷ : ಸಮಗ್ರ. ಇದರ ಜೊತೆಗೆ ಹಾಡು, ಮುತ್ತಿನ ಕಂತೆ ಸದ್ಗುರು ಅಂಕಿತದ ಹಾಡುಗಳು, ಚಂದವಹಾಮನ ಹಾಡುಗಳು ಮುಂತಾದ ೧೧ ಕೃತಿಗಳಿವೆ.

—ಜಿಜಿಎಂ

## 724

| ಕೆ. ೧೧೪೪/೨ | **ಲಿಂಗಚಿದಾಮೃತಬೋಧೆ** | ವಚನ |
|---|---|---|
| ೧೩.೧೦×೨.೧ | ಶಾಂತ ಬಸವೇಶ್ವರ | ಸು. ೧೫೦೦ |
| ೩೬–೧೧೨ ಪತ್ರ | ೧೩ ಪಂಕ್ತಿ | ೬೦ ಅಕ್ಷರ |

**ಆದಿ :** ಲಿಂಗಚಿದಾಮಂೃತ ಬೋಧೆ ॥ ಸೂತ್ರ ॥
ಶ್ರೀಮದಮಲ ಶ್ರೀವಾನುಭಾವ ಸಾರೋದ್ಧಾರ ಪ್ರವೀಣರುಮಪ್ಪ ಬಸವೇಶ್ವರ ದೇವರು। ಚೆಂನಬಸವೇಶ್ವರ ದೇವರು ಪ್ರಭುದೇವರು ಮುಖ್ಯವಾದ। ಮಹಾ ಶಿವಗಣಂಗಳ ವಚನ। ಪ್ರಸಾಧವಂ ಸದ್ಭಕ್ತಿಯಿಂದ। ತತ್ಶಿಷ್ಯಭಾವದಿಂ ಕೈಕೊಂಡು ಲಿಂಗ ಸೇವನೆಯಂ ಮಾಡಿ ಲಿಂಗ ಸೇವನೆ ಶೇಷಾವಂೃತವನು ಲಿಂಗಚಿದಾಮುೃತ ಬೋಧೆಯಾಗಿ

**ಅಂತ್ಯ :** ಮತ್ತಂ ॥ ಷಡುದರ್ಶನಾದಿ ದೇವೋ ಹಿ। ಮಹಾದೇವೋ ನ ಶಂಶಯಃ ॥ ಮಾತ್ರ ಪೂಜಾದಿ ಭಿಂನಾನಾಂ। ಮೂಲಂ ಪರಂ ಪರಶಿವಂ ಸ್ತಥಾ॥ ಯೆಂದುದಾಗಿ ॥ ಯಿಂನು ವಿಷ್ಣುದೈವವೆಂದು। ಆತ್ಮಯೋಗವೆಂದು ॥ ಶೂತ್ರವೆಂದು। ವೈದಿಕವೆಂದು। ಯಿಂತೀ ಭ್ರಾಂತಿನ ದರುಶನ ಮತಂಗಳನು ಕೇಳಿ ಅಲ್ಲಿಯ ಧರ್ಮಾಧರ್ಮವನು ಕೇಳಿ। ಅಲ್ಲಿ ಉಪದೇಶವ ಮಾಡಿಸಿಕೊಳಬಹುದೆ। ಶಿವಶಿವಾ ಅದು ಗುರುದ್ರೋಹ ॥

**ವಿಷಯ :** ವೀರಶೈವ ಸಿದ್ಧಾಂತ.

**ವಿಶೇಷ :** ಅಸಮಗ್ರ. ಶಕಟರೇಫವಿದೆ. ೬೮, ೧೧೦, ೧೧೧ನೆಯ ಪತ್ರಗಳಲ್ಲಿ ಒಂದು ಪಾರ್ಶ್ವದಲ್ಲಿ ಬರಹವಿದೆ. ಆ ಕಡೆಗಳಲ್ಲಿ ಗ್ರಂಥ ಲೋಪವಾಗಿದೆ. ಇದೇ ಕಟ್ಟಿನಲ್ಲಿ ಮೋಳಿಗಯ್ಯಗಳ ಪುರಾಣ, ಗಣಭಾಷ್ಯರತ್ನಮಾಲೆ, ಸಾನಂದ ಗಣೇಶ್ವರನ ರಗಳೆ ಈ ಮೂರು ಗ್ರಂಥಗಳಿವೆ.

—ಕೆಆರ್‌ಎಸ್

## 725

| ಕೆ. ೧೫೯೫ | **ಲಿಂಗಚಿದಾಮೃತ ಬೋಧೆ** | ವಚನ |
|---|---|---|
| ೬.೯×೧.೩ | ಶಾಂತ ಬಸವೇಶ್ವರ | ಸು. ೧೫೦೦ |
| ೧–೧೬೩ ಪತ್ರ | ೯ ಪಂಕ್ತಿ | ೩೫ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ॥ ಲಿಂಗಚಿದಾಮೃತ ಬೋಧೆ ॥
ಸೂತ್ರ ॥ ಶ್ರೀಮದಮಲ ಶಿವಾನುಭಾವ ಸಾರೋದ್ಧಾರ ಪ್ರವೀಣರುಮಪ್ಪ ಬಸವೇಶ್ವರ ದೇವರು ಚೆನ್ನಬಸವೇಶ್ವರ ದೇವರು ಪ್ರಭುದೇವರು ಮುಖ್ಯವಾದ ಮಹಾ ಶಿವಗಣಂಗಳ ವಚನ ಪ್ರಸಾದವಂ ಸದ್ಭಕ್ತಿಯಿಂದ ತತ್ಶಿಷ್ಯ

ಭಾವದಿಂ ಕೈಕೊಂಡು ಲಿಂಗಸೇವನೆಯಂ ಮಾಡಿ ಲಿಂಗಸೇವೆ ಶೇಷಾಮೃತ ವನು ಲಿಂಗಚಿದಾಂಮೃತ ಬೋಧೆಯಾಗಿ ಸೇರಿಸಿ ಪರಿಯಾಯ ಕ್ರಮದಿಂ ಮಿಂತಿಮಾಡಿ ಪ್ರಸೆಗಳು ಮೂವತ್ತೊಂದಕ್ಕೆಯೂ ವೃತ್ತಂಗಳೆ ಸೂತ್ರ ಪಟ್ಟಾಂತರವೆಂದರಿಲುದು × × × ಯಿಂತು ಪ್ರಸ್ಮೆಗಳು ಮೂವ ತ್ತೊಂದರ್ಶಿಂದ ಲಿಂಗಚಿದಾಮೃತ ಬೋಧೆ ಮಂಕ್ಷಕವಾಗಿ ಸೇರಿಸಿದ ನೊರ್ವ ದೇಶಿಕ ತನ್ನ ಚಿದಾನಂದ ಸ್ವರೂಪದ ನಿರೀಕ್ಷಿಸಲೋಸ್ಕರ ಜ್ಞಾನ ವೆಂಬ ದರ್ಪಣವನಳವಡಿಸಿ ಹಿಡಿಯಲು ಪ್ರತಿಬಿಂಬವನೊಳಕೊಂಡು ತನ್ನಲುಳ್ಳ ಗುಣಾಗುಣಂಗಳ ಕಳಂಕನಿದಿರಿಟ್ಟು ತೋಱುವಂತಪ್ಪ ಸಂಗ್ರಹ ವಿದೆಂದೊಪ್ಪುದು ಮುಂದೆ ಶೂನ್ಯ ಸಾಕಾರ ಲಿಂಗವಾದೂದು ॥ ೦ ॥

ವೃತ್ತ ॥ ಸುಖವೆ ಸುಖಾಬ್ಧಿ ವೃದ್ಧಿಎ ಸುಖೋನ್ನತಿಯೆ ಸುಖಸಾರ ಸಿದ್ಧಿಎ
ಸುಖ ಪರಿಪೂರ್ತಿಯೆ ಸುಖ ಕಳಾಕೃತಿಯೆ ಸುಖಚಕ್ರವರ್ತಿಯೆ
ಸುಖಮುಖ ಬಂಧುವೆ ಸುಖರಸಾಮೃತ ಸಿಂಧುವೆ ನಿನ್ನವರ್ಗೆ ನೀಂ
ಸುಖವನೆ ಮಾಳ್ಪುದಯ್ಯ ಪರಮಪ್ರಭುವೆ ಮಹದೈಪುರೇಶ್ವರಾ ॥

ಅಂತ್ಯ : ಬಸವ ಕಾರಣ ಬಸವ । ಬಸವ ಕಾರಣ ವಸುಧೆ । ಬಸವ ಕಾರಣ ಚೆನ್ನ ಬಸವ ಬಂದಾ ॥ ಬಸವ ಚೆನ್ನಬಸವ ಪ್ರಭು ಶಿವಯೆಂಬ ಮಾತೆಯಲ್ಲಿ ಶಿಶುವಾಗಿ ಯಿರುತಿರ್ದೆ ಯೋಗಿನಾಥಾ ॥ ೨೫ ॥

ಕಂದ ॥ ಯಿಂತೀ ಲಿಂಗಚಿದಾಮೃತಾಬೋಧೆಯು
ಸಂತೋಷದಿ ವೋದಿ ಕೇಳಿ ಬೇಧಿಸಿ ತಿಳಿಯಲಂ
ಸಂತ ಸದ್ಗುರು ವೃಷಭಂ
ಸಂತೋಷಿಶಿ ಹೃದಯಕಮಲ ವಾಸವನಿವಂ ॥ ೦ ॥

ಲಿಂಗಾಚಿದಾಮೃತ ಬೋಧೆಯ ಸ್ಥಲ ವಚನಂಗಳ ವಿವರ । ಶೂನ್ಯಸಾಕಾರ ಲಿಂಗೋದಯಕ್ಕೆ ವಚನ ಜಯ ಜಯಲಿಂಗ ಚಿದಾಮೃತ ಬೋಧೆಯು । ಜಯ ಸಂವತ್ಸರದಿ ಭವಿಸಿ ಭಕ್ತಿ ವಿರಕ್ತಿಯ ತಱುರ್ವಣೆಯನಲೊಪ್ಪಿ ಸೇರಿಸಿ । ಜಯ ಸದ್ಗುರು ಶಾಂತ ಬಸವೇಶ್ವರನೊರೆದಂ। ಲಿಂಗ ಚಿದಾಮೃತ ಬೋಧೆಯ ಪುಸ್ತಕ ಬರದು ಸಮಾಪ್ತ ಮಂಗಳ ಮಹಾ ಶ್ರೀ,

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಅಸಮಗ್ರ. ಕೆಲವು ಗರಿಗಳಿಗೆ ಹುಳು ಹಿಡಿದು ರಂಧ್ರವಾಗಿದೆ. ಶಕಟರೇಫದ ಪ್ರಯೋಗವಿದೆ. ಪುಸ್ತಕದ ಕೊನೆಯಲ್ಲಿ ವಿಷಯಸೂಚಿ ಕೊಟ್ಟಿದೆ.

—ವೈಸಿಬಿ

## 726

| ಕೆ. ಎ. ೪೩೦/೪ | ಲಿಂಗಧಾರಣೆ | ಶ್ಲೋಕ, ಟೀಕು |
|---|---|---|
| ೮.೬"×೧೧.೨" | ? | ? |
| ೬೪-೬೬ ಪತ್ರ | ೨೧ ಪಂಕ್ತಿ | ೨೬ ಅಕ್ಷರ |

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ...ಲ್ಲಿ ದೊಡ್ಡ ಕಾರೆಳ್ಳಿನಷ್ಟು ನಾಳದಲ್ಲಿ ದೊಡ್ಡ ಸಾಸುವಿಯಷ್ಟು ಮಧ್ಯದಲ್ಲಿ ಹೆಸರಬೇಳೆಯಷ್ಟುವೊಂದಕಿಂಯೊಳ ಗಳರ್ಧದಷ್ಟು . ಗೋಮುಖದಲ್ಲಿ ಚಿದ್ರವಾಗಲು ಸದ್ಭಕ್ತ ಮಹೇಶ್ವರರ ಕೂಡೆ ಪ್ರಣವಬಿಡುವ್ಪದಂ. ಅದಜಿಲ್ಲಿ ಸ್ಥೂಲ ಸೂಕ್ಷ್ಮಕಾರಣವೆಂದು ಮೂಱು ವಿಧ ನೋಪಾದುಂದನೋಡುವುದು ॥ ೧ ॥

ಸ್ವಾಂಗುಷ್ಠಾಗ್ರೋದ್ಭವಂ ತೀರ್ಥಂ ಜಿಹ್ವಾ ಸ್ಪ್ರುಶ್ಯಸವರ್ಾರ್ಪಯೇತ್
ಸ್ವಯಂ ತದನುಭುಕ್ತಾನಾಂ ತ [ಸ್ತ] (ತ್ಸ) ಮರ್ಪಣಯಿಾರಿತಂ ॥ ೧ ॥

**ಅಂತ್ಯ :** ಯೇತತ್ಪ್ರಾಣಮಯಂ ಲಿಂಗಂ ಯಾವಜ್ಜೀವಂ ಸಮರ್ಚಯ
ಏತನ್ನಿಷ್ಠೇತವ ಪ್ರಾಣಾಸ್ಪರಿತ್ಯಜ್ಯ ಮಹಾಮತೇ ॥ ೮ ॥

**ಟೀಕು ॥** ಭೋ (Folio 526) ಮಹಾಮತೇ–ಬುದ್ಧಿವಂತನಾದ ಯಿಲೆ ಕುದುಮ ರನೇ (?)

**ವಿಷಯ :** ಲಿಂಗ ಧರಿಸುವ ವಿಚಾರ.

**ವಿಶೇಷ :** ಅಸಮಗ್ರ. ಪತ್ರದ ಒಂದು ಕಡೆ ಮಾತ್ರ ಬರವಣಿಗೆ ಇದೆ. ಪ್ರತಿ ಚೆನ್ನಾಗಿದೆ. ಇದೇ ಪುಸ್ತಕದಲ್ಲಿ ಪದ್ಮಪುರಾಣ, ಬಸವೇಶ್ವರನ ಪಂಚ ಸ್ತೋತ್ರ ಮೊದಲಾದ ೭ ಕೃತಿಗಳಿವೆ.

—ಜಿಜಿಎಂ

## 727

| ಕೆ. ೧೩೭೬/೫ | ಲಿಂಗನಮಸ್ಕಾರ ರಗಳೆ | ರಗ |
|---|---|---|
| ೨.೧"×೮.೮" | ಸಿದ್ಧಲಿಂಗ | ? |
| ೧೩–೧೫ ಪತ್ರ | ೭ ಪಂಕ್ತಿ | ೩೮ ಅಕ್ಷರ |

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ॥ ಲಿಂಗನಮಸ್ಕಾರ ರಗಳೆ ॥ ಕಂದ ॥
ಶ್ರೀಮದ್ಗುರುವರಮೂರ್ತಿಯ
ಪ್ರೇಮದಿ ಶಿರದೆಡೆಯ ಬೆಳಗ ಕರತಳಕಿತ್ತಂ
ಆ ಮಹಾಲಿಂಗದೇವಗೆ
ನಾ ಮುಂದದಿಂ ನಮಿಸಿ ಭವದ ಸೀಮೆಯಂ ಗೆಲುವೆಂ ॥ ೧ ॥

ವುತ್ಸಾಹ ರಗಳೆ ॥

ಪರಮಗುರುವಿಸಿಂದೇಕದೊಳೊಗೆದ ಲಿಂಗ ಶರಣು ॥ ೨ ॥
ಹರಿವಿರಿಂಚಿ ಸುರಪರೆಯ್ದಿ ಧರಿಸಿ ಮೆಱದ ಲಿಂಗ ಶರಣು ॥ ೩ ॥

ಅಂತ್ಯ : ಸುಜನ ಸಂಗ ಲಿಂಗ ಶರಣು
ಕುಜನ ಭಂಗ ಲಿಂಗ ಶರಣು
ಧರ್ಮರೂಪ ಲಿಂಗ ಶರಣು
ಕರ್ಮಲೋಪ ಲಿಂಗ ಶರಣು
ನಿತ್ಯಮೂರ್ತಿ ಲಿಂಗ ಶರಣು
ಸತ್ಯವರ್ತಿ ಲಿಂಗ ಶರಣು
ಕರುಣಸಿಂಧು ಲಿಂಗ ಶರಣು
ಶರಣುಬಂಧು ಲಿಂಗ ಶರಣು
ಶಶಣು ಶರಣು ಲಿಂಗ ಶರಣು
ಶರಣು ಶರಣು ಲಿಂಗ ಶರಣು ॥

ಕಂದ ॥ ಕರದೊಳಿಹ ಪರಮ ಲಿಂಗಕೆ
ಶರಣೆಂದನವರವ ಸುಖಿಸಲೆಂದೀ ನುತಿಯಂ
ಗುರುಬಸವೇಶನ ಕೃಪೆಯಿಂ
ವಿರಚಿಸಿದ ಸಿದ್ಧಲಿಂಗ ಪರಮ ಚಿದಂಗಂ ॥ ೧ ॥
ಲಿಂಗನಮಸ್ಕಾರ ರಗಳೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಶಿವಲಿಂಗಕ್ಕೆ ನಮಸ್ಕರಿಸುವ ವಿಚಾರ.

ವಿಶೇಷ : ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೨ ರಗಳೆಗಳು ಗಣನಾಮ ಸ್ತೋತ್ರದ ತ್ರಿವಿಧಿ ಮೊದಲಾದ ೭ ತ್ರಿವಿಧಿಗಳು ಮತ್ತು ಶೀಲವಂತಯ್ಯನ ಆತ್ಮಲಿಂಗ ಸಂಯೋಗಸ್ಥಲವಿದೆ.

—ಜಿಜಿಎಂ

728

| ಕೆ. ೧೪೦೩।೬ | ಲಿಂಗನಮಸ್ಕಾರ ರಗಳೆ | ರಗಳೆ |
| --- | --- | --- |
| ೮.೭″ × ೧.೩″ | ಸಿದ್ಧಲಿಂಗ | ? |
| ೪೦–೪೬ ಪತ್ರ | ೫ ಪಂಕ್ತಿ | ೨೫ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಲಿಂಗನಮಸ್ಕಾರದ ರಗಳೆ ॥
ಕಂದ ॥ ಶ್ರೀಮದ್ಗುರುವರ ಮೂರ್ತಿಯ
ಪ್ರೇಮದಿ ಶಿರದೆಡೆಯಂ ಬೆಳಗ ಕರತಳಕಿತ್ತ

ಆ ಮಹಾಲಿಂಗದೇವಗೆ
ನಾ ಮುದದಿಂ ನಮಿಸಿ ಭಾವದ ಸೀಮೆಯು ಗೆಲುವಂ ॥ ೧ ॥

ವೃತ್ಸಾಹರಗಳೆ ॥

ಪರಮ ಗುರುವಿನಿಂದೆ ಭರದಿ ಕರದೊಳಗೆದ ಲಿಂಗ ಶರಣು ॥ ೧ ॥
ಹರಿವಿರಿಂಚಿ ಸರಪರೆಯ್ದಿ ಧರಿಸಿ ಮೆರೆವ ಲಿಂಗ ಶರಣು ॥ ೨ ॥

ಅಂತ್ಯ : ಕರಳಿಹ ಪರಮ ಲಿಂಗಕೆ
ಶರಣೋದನವರ ಸುತ ಸುಖಿಸಲೆಂದೆ ನುತಿಯಿಂ
ಗುರುಬಸವೇಶನ ಕೃಪೆಯುಂ
ವಿರಚಿಸಿದಂ ಸಿದ್ಧಲಿಂಗ ಪರಮ ಚಿದಂಗಂ ॥ ೧ ॥

ವಿಷಯ : ಲಿಂಗದ ಸ್ತುತಿ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೦ ಕೃತಿಗಳಿವೆ.

—ಜಿಜಿಎಂ

## 729

| ಕೆ. ೧೧೩೮/೨೬ | ಲಿಂಗನಿರ್ವಾಯು ಕುಸ್ತಿ ಆಗಮ | ವಚನ |
|---|---|---|
| ೭"×೧.೯" | ? | ? |
| ೧-೧೯ ಪತ್ರ | ೧೩ ಪಂಕ್ತಿ | ೬೭ ಅಕ್ಷರ |

ಆದಿ : ಶ್ರೀಸಾಂಬ ಸದಾಶಿವಾಯ ನಮಃ ॥ ನಿರ್ವಿಘ್ನಮಸ್ತು ॥ ಲಿಂಗನಿರ್ವಾಯು ಕುಸ್ತಿ ಆಗಮ ॥ ಹರ ವಚನ ರಾಗ ॥ ತಂಮಿಚ್ಚಿ ॥
ನಾನಿಲ್ಲದ ಮುನ್ನ ನೀನಾದಿ ಅಯ್ಯ
ನೀನಾದಂದು ನಾಹಾಗಿರ್ದನೆಯುಯ್ಯನ ಕೈಯಲ್ಲಿ ನಿನ್ನ ಕೊಟ್ಟಾರಲ್ಲದೆ
ನಿನ್ನ ಕಯ್ಯಲ್ಲಿಯುಂನ ಕೊಟ್ಟರೆ ಹೇಳಾ
ಯನಗೆ ನೀನು ಗುರುವೆ ನಿನಗಾನು ಸಿಷ್ಯನೆ
ಯುಂನ ಕರಸ್ತಲಕೆ ನೀನೆ ಬಂದಿಯಲ್ಲದೆ
ನಿನ್ನ ಕರಸ್ತಲಕೆ ಆನು ಬಂದೆನೆ × × ×
ನೀನಿದು ಕಾಣ ಜಂಗಮ ಲಿಂಗ ಪ್ರಭುವೆ ॥ ೧ ॥

ಅಂತ್ಯ : ಯುರಡು ಸಂತನವಾದ ಸ್ತಲಗಳನೊರದು
ನೋಡಲ ತ್ರಿವಿದ ಪದಗಳ
ಪರಿಯ ನೋಡಲು ಆರರೊಳು ಮೂರರಡಿಗಿಕೊಂಡಿಹವು
ಯುರಡುವಲ್ಲೆಂದೆನಿಸಿ ಗುರುಲಿಂಗ ಬೆರದು ಜಂಗಮವಾಗಿ
ತಾನೆ ದರಿಯೊಳಗೆ ಆಡುತಲಿರ್ದನು ಕುಸ್ತಿ ಜಗವರಿಯೆ ॥ ೧೦೫ ॥

ಅಂತು ಗತಿ ಶಿಕ್ಕಂ ಪದನು ೨೯೩ ವಚನ ॥ ೯ ॥ ಆರುಸ್ಥಲ ಮೂರುಸ್ಥಲ ಮಿಾರಿ ಸ್ಥಲದೊಳಗೆ ನಿಂದ ಮಹಾತ್ಮರಿಗೆ ಹೇಳಿಹದು ಕುಸ್ತಿ ಆಗಮ ಸಂಪೂರ್ನ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ವೀರಶೈವ ಸಿದ್ಧಾಂತ.

ವಿಶೇಷ : ಇದೇ ಕಟ್ಟಿನಲ್ಲಿ ಗುರುರಗಳೆ, ಷಡಕ್ಷರಿಯ ರಗಳೆ ಮೊದಲಾದ ೨೯ ಕೃತಿಗಳಿವೆ.

—ಜಿಜಿಎಂ

## 730

ಕೆ. ೯೨೧ ಲಿಂಗ ಪುರಾಣ (ವಚನ) ವಚನ

೧೪.೧೦" × ೧.೧೫" ಕಳಲೆ ನಂಜರಾಜ ಸು. ೧೭೪೦

೧-೩೩೨ + ೧-೯೩ ಪತ್ರ ೭ ಪಂಕ್ತಿ ೫೦ ಅಕ್ಷರ

ಆದಿ : ಅನಂತರದಲ್ಲಿ ಸೂತಪೌರಾಣಿಕನಿಂತೆಂದನು । ಕೇಳಿರೈ ಋಷಿಗಳಿರ ಯಿಾ ಲಿಂಗಪುರಾಣದಲ್ಲಿರುವ ಕಥೆಗಳನೆಲ್ಲವನ್ನು ಸಂಕ್ಷೇಪವಾಗಿ ವಿವರಿಸ್ತಲಿಧೇನೆ ॥ ಪೂರ್ವದಲ್ಲಿ ಬ್ರ...ಸಂಖ್ಯೆಯುಳ್ಳ ಪುರಾಣಗಳಲ್ಲಿ ಕೋಟಿ ಗ್ರಂಥ ಸಂಖ್ಯೆಯುಳ್ಳ ಪುರಾಣವಂನು ನಿರ್ಮಿಸಿದನು । ಆ ಬಳಿಕ ವ್ಯಾಸಮುನೀಂದ್ರನು ದ್ವಾಪರಯುಗದಲ್ಲಿ ನೂರು ಕೋಟಿ ಗ್ರಂಥಸಂಖ್ಯೆಯುಳ್ಳ ಪುರಾಣಗಳಲ್ಲಿ ಸಾರವಾದ ಗ್ರಂಥಗಳಂ ತೆಗದು ನಾಲ್ಕು ಲಕ್ಷಗಳ ಗ್ರಂಥಸಂಖ್ಯೆಯಿಂದ ಸಂಕ್ಷೇಪವಾಗಿ ಬ್ರಹ್ಮಾಂಡಪುರಾಣ ಮೊದಲಾದ ಹದಿನೆಂಟು ಪುರಾಣಗಳ ಮಾಡಿ ಆ ಪುರಾಣಗಳ ಮಧ್ಯದಲ್ಲಿ ಹನ್ನೊಂದನೆ ಪುರಾಣವಾದ ಲಿಂಗ ಪುರಾಣವನು....ನ್ನೊಂದು ಸಾವಿರ ಶ್ಲೋಕಗಳಿಂದ ರಚಿಸ್ತರು । ಆ ಲಿಂಗ ಪುರಾಣವನ್ನು ವ್ಯಾಸಮುನೀಂದ್ರರ ಸನ್ನಿಧಾನದಲ್ಲಿ ಅವರ ಅನುಗ್ರಹದಿಂದ ಸಂಕ್ಷೇಪವಾಗಿ ಕೇಳಿಯಿಧೇನೆ ವಿಸ್ತಾರವಾಗಿ ಕೇಳಲ್ಪಟ್ಟ ಅಂಥಾ ಈ ಲಿಂಗ ಪುರಾಣವನಂ ನಿಮಗೆ ಸಂಕ್ಷೇಪವಾಗಿ ತಿಳುಹಿಸುತಲಿಧೇನೆ .....ಯಿಂತು ಮಹಿಶೂರ ಸೇನಾಪತಿ ದೊಡ್ಡರಾಜ ಪುತ್ರ ವೀರರಾಜ ನಂದನ ದಳಪತಿ ದೇವರಾಜಾನುಜ ಕಳುಲೆ ನಂಜರಾಜ ವಿರಚಿತಮಾದ ನಂಜರಾಜ ವಾಣೀ ವಿಲಾಸವೆಂಬ ಕರ್ನಾಟಕ ಭಾಷಾ ವಿರಚಿತವಾಗಿ ಮಹಾಪುರಾಣವಾದ ಲಿಂಗಪುರಾಣದಲ್ಲಿ ಪ್ರಥಮಾಧ್ಯಾಯದರ್ಥ ನಿರೂಪಣ.

ಅಂತ್ಯ : ಇಂತು ಮಹಾಪುರಾಣವಾದ ಲಿಂಗಪುರಾಣದಲ್ಲಿ ಮಹಿಶೂರ ಸೇನಾಧೀಶ ದೊಡ್ಡರಾಜಸುತ ವೀರರಾಜನಂದನ ಕಳಲೆ ನಂಜರಾಜ ವಿರಚಿತಮಾದ ಕರ್ನಾಟಕ ಟೀಕಿನಲ್ಲಿ ನೂರೆಂಟನೆ ಅಧ್ಯಾಯದರ್ಥ.

ಆದಿ : ಉತ್ತರಭಾಗ :
ಶುಭಮಸ್ತು । ಅನಂತರದಲ್ಲಿ ಸೂತ ಪುರಾಣಿಕರಂ ಕುರಿತು ಋಷಿಗಳಿಂತೆಂದರೂ ಎಲೈ ಸೂತಪುತ್ರನೆ ಸುವ್ರತನೆ ನೀನು ಸರ್ವಜ್ಞನಾದ್ದರಿಂದ ಮುಂದಣ ಅರ್ಥವನ್ನೂ ಕೇಳಂತಲಿದ್ಧೇವೆ ನೀನು ತಿಳುಹಿಸಬೇಕು.

ಅಂತ್ಯ : ಯಿಂತು ಮಹಾಪುರಾಣವಾದ ಲಿಂಗಪುರಾಣದಲ್ಲಿ ಮಹಿಶೂರ ಸೇನಾಧೀಶ ದೊಡ್ಡರಾಜ ಪುತ್ರ ವೀರರಾಜ ತನೂಭವ ಕಳಲೆ ನಂಜರಾಜ ವಿರಚಿತವಾದ ಲಿಂಗಪುರಾಣದಲ್ಲಿ ೫೦ನೆಯ ಅಧ್ಯಾಯದರ್ಥ ॥ ಅನಂತರದಲ್ಲಿ ಋಷಿಗಳಿಂತೆಂದರು ಯೆಲೆ ಸೂತ ಪುರಾಣಿಕನೆ ದೇವದೇವನಾದ ವೃಷಧ್ವಜನಾದ ತ್ರಿಯಂಬಕನನ್ನು ಯೋಗಮಾರ್ಗದಿಂದ ಹ್ಯಾಗೆ ಪೂಜಿಸಬೇಕು ಪೂರ್ವದಲ್ಲಿ ವಿಸ್ತಾರವಾಗಿ.ಕೇಳಿಯಿಂಧೇವೆ । ಯಿಾಗ ಸಂಕ್ಷೇಪವಾಗಿ ವಿವರಿಸಬೇಕೆನಲು ಸೂತಪುರಾಣಿಕನಿಂತೆಂದನು......

ವಿಷಯ : ಸಂಸ್ಕೃತ ಲಿಂಗಪುರಾಣದ ಕನ್ನಡ ಗದ್ಯರೂಪ. ಶಿವಲಿಂಗದ ಮಹಿಮೆಯನ್ನು ನಿರೂಪಿಸಲಾಗಿದೆ.

ವಿಶೇಷ : ಸುಂದರವಾದ ಲಿಪಿ. ಇದರಲ್ಲಿ ಪೂರ್ವಭಾಗ ಉತ್ತರಭಾಗಗಳಿವೆ. ಪೂರ್ವಭಾಗದಲ್ಲಿ ೧೦೮ ಅಧ್ಯಾಯಗಳಿವೆ, ಉತ್ತರಭಾಗದಲ್ಲಿ ೫೦ ಅಧ್ಯಾಯಗಳು ಮಾತ್ರ ಇವೆ. ಅಸಮಗ್ರ. ಪೂರ್ವಭಾಗದಲ್ಲಿ ೧, ೨, ೨೩೨, ೨೩೩ನೆಯ ಪತ್ರಗಳಿಗೆ ವಿಶೇಷವಾಗಿ ಹುಳು ಹಿಡಿದಿದೆ. ೫೭ನೆಯ ಪತ್ರ ಸ್ವಲ್ಪ ಮುರಿದು ಹೋಗಿದೆ. ಕೆಲವು ಪತ್ರಗಳ ಅಂಚು ಮುರಿದಿವೆ. ಕೆಲವು ಪತ್ರಗಳನ್ನು ಹುಳು ಹೊಡೆದಿದೆ. ೧೪೯, ೨೪೮ನೆಯ ಪತ್ರಗಳಿಲ್ಲ. ೧-೬ನೆಯ ಪತ್ರ ಅರ್ಧ ಮುರಿದುಹೋಗಿದೆ. ಉಳಿದ ಭಾಗವನ್ನೂ ಹುಳು ಹೊಡೆದಿದೆ. ೧೪೮, ೧೪೯ ; ೧೫೪, ೧೫೫ ಇವು ಒಂದೇ ಓಲೆಯಲ್ಲಿವೆ. ಉತ್ತರಭಾಗದಲ್ಲಿ ೨೧, ೬೬, ೫೦, ೫೧, ೯೦, ೯೧ ಪತ್ರಗಳಿಗೆ ವಿಶೇಷವಾಗಿ ಹುಳು ಹಿಡಿದಿದೆ. ೮೬ನೆಯ ಪತ್ರ ಇಲ್ಲ. [ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ—ತೃತೀಯ ಸಂಪುಟ, ಪುಟ ೪೬೦, ೪೬೧ ನಂ 1491, 1492—ನೋಡಿ]

—ಎನ್‌ಬಿ

731

ಕೆ. ಎ. ೪೮೮ | ಲಿಂಗಪುರಾಣ ಭಾಗ ೧ | ಗದ್ಯ
೧೨.೧"×೯.೭" | ಕಳಲೆ ನಂಜರಾಜ | ಸು. ೧೭೪೦
೧-೬೩೩ ಪುಟ | ೨೪ ಪಂಕ್ತಿ | ೨೨ ಅಕ್ಷರ

ಆದಿ : ಲಿಂಗಪುರಾಣ. ಪೂರ್ವಭಾಗ.

ಅನಂತರದಲ್ಲಿ ಸೂತಪೌರಾಣಿಕನಿಂತೆಂದನು. ಕೇಳಿರೈ ! ಋಷಿಗಳಿರ, ಈ ಲಿಂಗಪುರಾಣದಲ್ಲಿರುವ ಕಥೆಗಳೆಲ್ಲವನು ಸಂಕ್ಷೇಪವಾಗಿ ವಿವರಿಸ್ತಲಿದ್ದೇನೆ. ಪೂರ್ವದಲ್ಲಿ ಬ್ರಹ್ಮದೇವನು ನೂರುಕೋಟಿ ಗ್ರಂಥಸಂಖ್ಯೆಯುಳ್ಳ ಪುರಾಣ ಗಳಲ್ಲಿ ಕೋಟಿ ಗ್ರಂಥ ಸಂಖ್ಯೆಯುಳ್ಳ ಪುರಾಣವನು ನಿರ್ಮಿಸಿದನು. ಆ ಬಳಿಕ ವ್ಯಾಸಮುನೀಂದ್ರನು ದ್ವಾಪರಯುಗದಲ್ಲಿ ನೂರುಕೋಟಿ ಸಂಖ್ಯೆ ಯುಳ್ಳ ಪುರಾಣಗಳಲ್ಲಿ ಸಾರವಾದ ಗ್ರಂಥಗಳಂ ತೆಗೆದು ನಾಲ್ಕುಲಕ್ಷಗಳ ಗ್ರಂಥ ಸಂಖ್ಯೆಯಿಂದ ಸಂಕ್ಷೇಪವಾಗಿ ಬ್ರಹ್ಮಾಂಡ ಪುರಾಣ ಮೊದಲಾದ ಹದಿನೆಂಟು ಪುರಾಣಗಳ ಮಾಡಿ. ಆ ಪುರಾಣಗಳ ಮಧ್ಯದಲ್ಲಿ ಹನ್ನೊಂದನೆ ಪುರಾಣಮಾದ ಲಿಂಗಪುರಾಣವನ್ನು ಹನ್ನೊಂದು ಸಾವಿರ ಶ್ಲೋಕಗಳಿಂದ ರಚಿಸಿದರು. ಆ ಲಿಂಗಪುರಾಣವನ್ನು ವ್ಯಾಸಮುನೀಂದ್ರರ ಸನ್ನಿಧಾನದಲ್ಲಿ ಅವರ ಅನುಗ್ರಹದಿಂದ ಸಂಕ್ಷೇಪವಾಗಿ ಕೇಳಿ ಇಧೇನೆ. ವಿಸ್ತಾರವಾಗಿ ಕೇಳಲ್ಪಟ್ಟ, ಅಂಥಾ ಈ ಲಿಂಗಪುರಾಣವನ್ನು ನಿಮಗೆ ಸಂಕ್ಷೇಪವಾಗಿ ತಿಳಿಹಿಸುತ್ತಲಿಧೇನೆ.

ಈ ಪುರಾಣದಲ್ಲಿ ಲಿಂಗಸಂಭವ ಪ್ರಧಾನದಿಂದ. ಪ್ರಾಕೃತ ಸೃಷ್ಟಿ, ವೈಕೃತ ಸೃಷ್ಟಿ, ಬ್ರಹ್ಮಾಂಡದ ಉತ್ಪತ್ತಿ, ಅಂಡದ ಎಂಟು ಆವರಣಗಳ ಲಕ್ಷಣ × × × ಇವು ಮೊದಲಾದ ಕಥೆಗಳನ್ನೆಲ್ಲ, ಈ ಲಿಂಗಪುರಾಣದಲ್ಲಿ ಹೇಳಿಇರುವರು. ಈ ಅಧ್ಯಾಯವನ್ನು ಯಾವ ಪುರುಷನು ಭಕ್ತಿಯಿಂದ ಕೇಳುವನೋ ಆತನು ಶಿವಲೋಕವನ್ನೈದುವನೆಂದು ಸೂತಪುರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳಿಗೆ ವಿವರಿಸಿದನು.

**ಅಂತ್ಯ :** ಅನ್ಯಾಯದಿಂದ ಕೊಂದವನಾದರೂ, ದ್ರವ್ಯವನ್ನು ಅಪಹರಿಸ್ತವನಾದರೂ, ದುರನ್ನವನ್ನು ಭುಜಿಸ್ತವನಾದರೂ, ಈ ಮಂತ್ರದಿಂದ ಪೂಜಾ ಜಪಂಗಳಂ ಮಾಡಿದವನು ಸರ್ವಪಾಪ ವಿಮುಕ್ತನಾಗುವನು. ಶಿವನನ್ನು ಒಂದು ಸಾರಿ ಸ್ಮರಿಸ್ತವನು ಸಕಲ ಪಾಪ ವಿಮುಕ್ತನಾಗುವನು, ಎಂದು ಸೂತಪೌರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ಋಷಿಗಳಿಗೆ ನಿರೂಪಿಸಿದನು.

ಇಂತು ಮಹಾ ಪುರಾಣಮಾದ ಲಿಂಗಪುರಾಣದಲ್ಲಿ ಮಹಿಶೂರ ಸೇನಾಧೀಶ ದೊಡ್ಡರಾಜ ಪೌತ್ರ ವೀರರಾಜ ತನೂಭವ ಕಳಲೆ ನಂಜರಾಜ ವಿರಚಿತ ವಾದ ಲಿಂಗಪುರಾಣದಲ್ಲಿ ೫೦ನೇ ಅಧ್ಯಾಯದರ್ಥ.

ಐವತ್ತೊಂದನೆಯ ಅಧ್ಯಾಯ

" ಯೋಗಲಕ್ಷಣ "

ಅನಂತರದಲ್ಲಿ ಋಷಿಗಳಿಂತೆಂದರು. ಎಲೆ ಸೂತ ಪುರಾಣಿಕನೆ ದೇವದೇವ ನಾದ ವೃಷಭಧ್ವಜನಾದ ತ್ರಿಯಂಬಕನನ್ನು ಯೋಗಮಾರ್ಗದಿಂದ ಹ್ಯಾಗೆ

ಪೂಜಿಸಬೇಕು. ಪೂರ್ವದಲ್ಲಿ ವಿಸ್ತಾರವಾಗಿ ಕೇಳಿ ಇರ್ಧೇನೆ. ಈಗ ಸಂಕ್ಷೇಪವಾಗಿ ವಿವರಿಸಬೇಕೆನಲು, ಸೂತಪುರಾಣಿಕನಿಂತೆಂದನು,

ವಿಷಯ : ಶಿವಲಿಂಗದ ಮಹತ್ವವನ್ನು ತಿಳಿಸುವ ಕಥನಗಳನ್ನೊಳಗೊಂಡ ಪುರಾಣ.

ವಿಶೇಷ : ಲಿಂಗಪುರಾಣ ಪ್ರಥಮ ಭಾಗವಾದದರಿಂದ ಆದಿಯಿಂದ ತ್ರಿಯಂಬಕ ಮಹಾತ್ಮೆಯವರೆಗೆ ಅಂದರೆ ಐವತ್ತನೆಯ ಅಧ್ಯಾಯ ಪೂರ್ಣಭಾಗವಿದೆ. ಐವತ್ತೊಂದನೆಯ ಅಧ್ಯಾಯವು ಆರಂಭಿಸಿ ಅಲ್ಲಿಗೇ ನಿಂತಿದೆ. ಬರಹವು ಸುಂದರವಾಗಿದೆ. ಮದರಾಸು ಪ್ರಾಚ್ಯಕೋಶಾಗಾರದಲ್ಲಿದ್ದ ಮೂಲ ಪ್ರತಿಯಿಂದ (ಡಿ. 234) 1953ರಲ್ಲಿ ಶ್ರೀ ಎಂ. ಗೋಪಾಲಕೃಷ್ಣಭಟ್ಟರು ನಕಲು ಮಾಡಿದ್ದಾರೆ.

—ಕೆಆರ್‌ಎಸ್

## 732

| ಕೆ. ಎ. ೪೯೫ | ಲಿಂಗಪುರಾಣ | ಗದ್ಯ |
|---|---|---|
| ೧೨" × ೭.೫" | ಕಳಲೆ ನಂಜರಾಜ | ಸು. ೧೭೪೦ |
| ೧-೪೭೦ ಪುಟ | ೩೦ ಪಂಕ್ತಿ | ೨೧ ಅಕ್ಷರ |

ಆದಿ : ಅನಂತರದಲ್ಲಿ ಸೂತಪುರಾಣಿಕನಿಂತೆಂದನು ಕೇಳೈ ರುಷಿಗಳಿರಾ ಈ ಲಿಂಗ ಪುರಾಣದಲ್ಲಿರುವ ಕಥೆಗಳೆಲ್ಲವನ್ನೂ ಸಂಕ್ಷೇಪವಾಗಿ ವಿಸ್ತರಿಸಲಿರ್ಧೇನೆ. ಪೂರ್ವದಲ್ಲಿ ಬ್ರಹ್ಮದೇವನು ನೂರುಕೋಟಿ ಗ್ರಂಥ ಸಂಖ್ಯೆಯುಳ್ಳ ಪುರಾಣ ಗಳಲ್ಲಿಕೋಟಿ ಗ್ರಂಥ ಸಂಖ್ಯೆಯುಳ್ಳ ಪುರಾಣವಂನು ನಿರ್ಮಿಶಿದನು. ಆ ಬಳಿಕ ವ್ಯಾಸಮುನೀಂದ್ರನು ದ್ವಾಪರಯುಗದಲ್ಲಿನೂರು ಕೋಟಿ ಗ್ರಂಥ ಸಂಖ್ಯೆಯುಳ್ಳ ಪುರಾಣಗಳಲ್ಲಿ ಸಾರವಾದ ಗ್ರಂಥಗಳಂ ತೆಗದು ನಾಲ್ಕು ಲಕ್ಷ ಗ್ರಂಥ ಸಂಖ್ಯೆಯಿಂದ ಸಂಕ್ಷೇಪವಾಗಿ ಬ್ರಹ್ಮಾಂಡ ಪುರಾಣ ಮೊದಲಾದ ಹದಿನೆಂಟು ಪುರಾಣಂಗಳ ಮಾಡಿ ಆ ಪುರಾಣಗಳ ಮಧ್ಯದಲ್ಲಿ ಹನ್ನೊಂದನೆ ಪುರಾಣವಾದ ಲಿಂಗಪುರಾಣವನ್ನು ಹನ್ನೊಂದು ಸಾವಿರ ಶ್ಲೋಕಗಳಿಂದ ರಚಿಸಿದರು.

ಅಂತ್ಯ : ಯೆಂದು ಸೂತ ಪುರಾಣಿಕನು ನೈಮಿಶಾರಣ್ಯವಾಸಿಗಳಾದ ಶೌನಕಾದಿ ರುಷಿ ಗಳಿಗೆ ನಿರೂಪಿಸಿದರು. ಯಿಂತು ಮಹಾ ಪುರಾಣವಾದ ಲಿಂಗ ಪುರಾಣ ದಲ್ಲಿ ಮಹಿಶೂರ ಸೇನಾಧೀಶ ದೊಡ್ಡರಾಜ ಪೌತ್ರ ವೀರರಾಜ ತನೂಭವ ಕಳಲೆ ನಂಜರಾಜ ವಿರಚಿತವಾದ ಲಿಂಗಪುರಾಣದಲ್ಲಿ ೫೦ನೇ ಅಧ್ಯಾಯ ದರ್ಥ.

ವಿಷಯ : ಲಿಂಗದ ಮಹಿಮಾವರ್ಣನೆ.

ವಿಶೇಷ : ಲಿಂಗಪುರಾಣದ ಮೊದಲಭಾಗ ಮಾತ್ರ ಇದೆ.

—ಹಕರಾ

733

ಕೆ. ೬೫೮/೧ | ಲಿಂಗಪುರಾಣ | ವಾರ್ಧಕಷಟ್ಪದಿ
೧೨.೭"×೨" | ಗುರುಲಿಂಗದೇಶಿಕ | ೧೬೦೦
೧–೮೭ ಪತ್ರ | ೧೧ ಪಂಕ್ತಿ | ೧೧೮ ಅಕ್ಷರ

ಆದಿ : × × × ಲಿಂಗಪುರಾಣದ ಪುಸ್ತಕಕ್ಕೆ ಶುಭಮಸ್ತು. ರಾಗ ಮಂಗಳ ಗೌಳ ತಾಳ ಜಂಪೆ

ಪಲ್ಲವ ॥ ಮಂಗಲಸ್ವರೂಪದಿ ನೆಗೆದುಮಾವಗಂ
ಮಂಗಲದಿನಿಳೆಯು ಜನರಂ ಪೊರೆದಂ ಮೆಱೆದ ಗುರು
ಲಿಂಗಣಾರ್ಯನ ಬಣ್ಣಿಸುವೆನೆನ್ನ ಕರಣದಿಂ ಹಿಂಗದೆ ವಿಲಾಸವೆರಸಿ ॥

ಪದನಂ ॥ ಶ್ರೀಮತ್ಸುಧಾಕರಕಪರ್ದ್ದಸರ್ವಂ ಶಿವಂ
ತಾಮರಸನೇತ್ರಪ್ರಿಯಂ ಪಾವನಾತ್ಮಕಂ
ಸೋಮಸಖಿವೈಮಲ್ಯನಿರುಪಮಂ ಪರಶಿವಂ ವಾಮದೇವಂ ಸಾಶ್ವತಂ
ಧಾಮರೂಪಂ ದಯಾಲೋಕನಂ ಚಿತ್ಸುಖಂ
ರಾಮಣೀಯಕಪೂರಿತಂ ಪ್ರಚುರಸದ್ಗುಣಂ
ಕೋಮಲಸುಪಾಂಡುವರ್ನ್ನಂ ಭಕ್ತವತ್ಸಲಂ ತಾ ಮಾಳ್ಪನೆಮಗಿಷ್ಟವಾ ॥ ೧ ॥

× × × ×

ಕೃತಿಗೆ ನಾಮ ಲಿಂಗ ಪೌರಾಣಮೀ ದಿವ್ಯ
ಕೃತಿಗೆ ಪತಿ ಗುರುಲಿಂಗಣಾರ್ಯ ಚರರೂಪ ನೀ
ಕೃತಿಗೆ ಪಾಲಕರು ಶಿವಭಕ್ತ ಸಂಕುಳಮಿದಂ ಪೇಳ್ದ ಕವಿಯಾರೆಂದೊಡೆ
ಪ್ರತಿರಹಿತ ಕರ್ನ್ನಾಟಕಾಚಾರ್ಯನಾವಗಂ
ಚತುರಕವಿ ಲಪನ ಸರಸಿರುಹ ಭಾಸ್ಕರನಿಳೆಗೆ
ನುತಕಲಾಪ್ರೌಢಗುರುಲಿಂಗದೇಶಿಕನೆನಲ್ ಕೃತಿಜಸಂಬೆತ್ತುದಿಳೆಗೆ ॥ ೨೩ ॥

ಅಂತ್ಯ : ಶಾಲಿವಾಹನ ಶಕಂ ಸಾವಿರದ ನಾನೂರ
ಮೇಲೆ ಗಣನೆಗೆ ನಿಂದುದೆಂಭತ್ತ ಮೂಜನೆಯು
ಕಾಲದುತ್ತಮ ಮಧ್ಯದಂತ್ಯ ಬೀಸಿಗೆಯೆಡೆಯಂ ಸಾಲಭಂಜಿಕೆಯೊಳೆಸೆವಾ

ಆ ಲಲಿತ ಸಮ್ನರುಧಿರೋದ್ಗಾರ ವತ್ಸರದ
ಜಾಲದಾಶಾಢ ಮಾಸದ ಪೌರ್ಣಮಿಯು ಚಂದ್ರ
ಪಾಲ ವಾರುಧಿ ಸಮಾಪ್ತಂ ಲಿಂಗಪೌರಾಣ ಬಾಲಶಶಿಯೆನೆ ಶೋಭಿಸಿ
॥ ೫೨ ॥

ಪದ ಸಹಸ್ರಂ ಮೇಲಣೆಂಟುನೂಱಿಪ್ಪತ್ತು
ವಿಧಿತವೇಕಂ ಸಂಧಿ ಷಟ್‌ತ್ರಿಂಶವಾವಗಂ
ಮಂದವೆತ್ತ ಸಪ್ತಖಾಂಡಂ ತತ್ವಲಕ್ಷಣಂ ಸುಧನಸಾಹಿತ್ಯಮುದ್ರೆ।
ಅಧಿಕತರ ವಾರ್ಧಿಕಂ ಷಟ್ಪದಿಯ ವಿವರಣಂ
ಮದನಹರಗರ್ಪಿತಂ ಶಿವಯೋಗಸಂಪದಂ
ಪದುಳದಿಂದಾಲಿಸುವ ಸುಜನಭಕ್ತಾವಳಿಗೆ ನಿಧನವರ್ಾಗಲ್ಯಮಸ್ತು ॥ ೫೩ ॥
× × × ಇತಿ ಶ್ರೀ ಲಿಂಗಪುರಾಣ ಸಪ್ತ ಖಾಂಡಂ ಸಂಪೂರ್ನ್ನಂ ಅಂತು ಸಂಧಿ ಮೂವತ್ತಾಱಕ್ಕಂ ಪದನು ೧೮೨೧ಕ್ಕಂ ಮಂಗಳ ಮಹಾ ಶ್ರೀ ಶ್ರೀ ಶ್ರೀ ಸ್ವಸ್ತಿ ಸಮಸ್ತ ಪ್ರಸಸ್ತಿ ಸಹಿತ ಶಾಲಿವಾಹನ ಶಕದ ೧೫೫೪ ನೆಯ ಪರಿದಾವಿ ನಾಮ ಸಂವತ್ಸರದ ಶ್ರಾವಣ ಬಹುಳ ಕೃಷ್ಣಪಕ್ಷ ತದಿಗೆ ಗುರುವಾರದ ಪ್ರಾತಕ್ಕಾಲದಲ್ಲಿ ಸಕಲ ವೀರ ಮಾಹೇಶ್ವರರ ಶ್ರೀ ಚರಣಕಂಜ ಷಟ್ಪದಿಯಾಗಿ ವಪ್ಪಲ್ಪಟ್ಟ ಬೋಳಮಲ್ಲಿಕಾರ್ಜುನದೇವರು ಲೇಖಿಸಿದ ಶ್ರೀ ಲಿಂಗ ಪೌರಾಣ ಸಂಪೂರ್ನ್ನ ಸಮಾಪ್ತಿ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಶಿವಲೀಲಾಕಥನ ನಿರೂಪಣೆ.

ವಿಶೇಷ : ಗ್ರಂಥದಲ್ಲಿ ಶಕಟರೇಫದ ಬಳಕೆ ಉಂಟು. ಭಾಷೆ, ಶೈಲಿ ಚೆನ್ನಾಗಿದೆ. ಅಕ್ಷರಗಳು ಗುಂಡಾಗಿದ್ದು ಸುಲಭವಾಗಿ ಓದಬಹುದಾಗಿದೆ. ಈ ಗ್ರಂಥ ದೊಡನೆ ಪಾಲ್ಕುರಿಕೆ ಸೋಮೇಶ್ವರನ ಪುರಾಣ ಮತ್ತು ಚೆನ್ನಬಸವೇಶ್ವರ ಪುರಾಣಗಳೂ ಇವೆ.

—ಶ್ರೀನಂತ

73+

| ಕೆ. ೮೩೦/೧೨ | ಲಿಂಗಪುರಾಣದ ನಾಂದ್ಯ | ವಾರ್ಧಕಷಟ್ಪದಿ |
|---|---|---|
| ೧೩" × ೨.೫" | ಗುರುಲಿಂಗ ದೇಶಿಕ | ೧೬೦೦ |
| ೬೧-೬೨ ಪತ್ರ | ೧೧ ಪಂಕ್ತಿ | ೧೦೮ ಅಕ್ಷರ |

ಆದಿ : ಶ್ರೀ ಗುರು ಬಸವಲಿಂಗಾಯ ನಮಃ ॥ ಲಿಂಗ ಪುರಾಣದ ನಾಂದ್ಯ ವಾರ್ಧಿಕ ॥

ಪಲ್ಲ ॥ ಬಸವೇಶ ಸದ್ಗುಣೋತ್ತುಂಗ ಕರುಣಾ ಪಾಂಗ
ಬಸವಂಣ ಸಂಹೃತಾನಂಗ ಸತತಾಭಂಗ
ಬಸವ ಸದ್ಭಕ್ತಿ ಪುಂಗವ ಬಸವ ಸಂಗೀತರಂಗ ವೇದಪ್ರ...ಗಾ
ಬಸವ ಸಾಕ್ಷಾನ್ಮಹೇಶಾಂಗ ಸದ್ಗುರುಲಿಂಗ
ಬಸವ ಚರಲಿಂಗ ಪದಪದ್ಮ ವಿಲಸದ್ಭೃಂಗ
ಬಸವ ಪಶುಪತಿ ಚರಣ ನಿಹಿತಾಂತಾರಂಗ ಮದ್ಭರ್ತೃ ಮತ್ರಾತ ಬಸವಾ ॥ ೧ ॥

ಅಂತ್ಯ: ಪ್ರಭುವಂ ಶ್ರುತಿತ್ರಯಿ ಪ್ರಭುವಂ ಶಿವಾಹ್ವಯ
ಪ್ರಭುವಂ ಚಿದಾದ್ವಯ ಪ್ರಭುವಂ ಶುಭೋದಯ
ಪ್ರಭುವಂ ನಿರಾಮಯ ಪ್ರಭುವಂ ಜಿತೇಂದ್ರಿಯ ಪ್ರಭುವಂ ಪ್ರಸಂನ ಮುಖದಾ
ಪ್ರಭುವಂ ಚರಾಚರ ಪ್ರಭುವಂ ಸಲಕ್ಷಣ
ಪ್ರಭುವಂ ಗಣವ್ರಜ ಪ್ರಭುವಂ ಕುತೂಹರ
ಪ್ರಭುವಂ ನಿಜಾಕ್ಷಯ ಪ್ರಭುವಂ ಗೋಹೇಶ್ವರ ಪ್ರಭುವಂ ನುತಿಗೈದೆವಿಲ್ಲಿ ॥ ೨೩ ॥
ಲಿಂಗಪುರಾಣದ ನಾಂದ್ಯ ಸಮಾಪ್ತ ಮಂಗಳ ಮಹಾಶ್ರೀ

ವಿಷಯ: ಲಿಂಗಪುರಾಣ ಕಾವ್ಯದ ನಾಂದೀ ಪದ್ಯಗಳು.

ವಿಶೇಷ: ೬೨ನೆಯ ಪತ್ರದ ಮತ್ತೊಂದು ಭಾಗದಲ್ಲಿ ಸಂಸ್ಕೃತ ಶ್ಲೋಕವಿದೆ. ಇದೇ ಕಟ್ಟಿನಲ್ಲಿ ಸಾಮುದ್ರಿಕ ಲಕ್ಷಣ, ಶ್ರೀರುದ್ರದ ಟೀಕು, ಗಣಸಹಸ್ರನಾಮ ಮೊದಲಾದ ಇತರ ೧೦ ಕೃತಿಗಳಿವೆ.

—ವೈಸಿಬಿ

## 735

| ಕೆ. ೧೩೭೬/೬ | ಲಿಂಗರಗಳೆ | ರಗಳೆ |
|---|---|---|
| ೨.೧"×೮.೮" | ? | ? |
| ೧೫–೧೮ ಪತ್ರ | ೯ ಪಂಕ್ತಿ | ૩೮ ಅಕ್ಷರ |

ಆದಿ: ಶ್ರೀ ಗುರುಬಸವಲಿಂಗಾಯ ನಮಃ ॥ ಲಿಂಗರಗಳೆ ॥ ವೃತ್ತ
ಪರಶಿವಲಿಂಗವಪ್ರತಿಮಲಿಂಗ ನಿರಾಕುಳಲಿಂಗ ಗಂಭೀರಾ
ನಿರವಯಲಿಂಗ ಭೇದ್ಯತರಲಿಂಗ ಸದಾಶಿವಲಿಂಗ ಸೌಖ್ಯದಾ
ಪುರುತರಲಿಂಗ ಯಿಂದುಧರಲಿಂಗ ಸುರಾರ್ಚಿತಲಿಂಗ ಭರ್ಗನಿರಂ
ತರಲಿಂಗ ಗುರುಲಿಂಗ ಚಿತ್ಸೈಸು ಶಾಂತ ಮಹಾಘನಲಿಂಗ ಶಾಶ್ವತಂ ॥ ೧ ॥

ರಗಳೆ ॥ ಶ್ರೀ ಗುರುಶಾಂತಮಹಾಘನಲಿಂಗಂ
ರಾಗದೊಳೆನ್ನ ಮನೋರಥಲಿಂಗಂ ॥ ೧ ॥

ಅಂತ್ಯ : ವೃತ್ತ ॥
ಲಿಂಗನಾಮಾಗಂ ಬಿಡದೆ ಹಸ್ತದೊಳಾಂತು ನಿರೀಕ್ಷಿಸುತ್ತಲಾ
ಲಿಂಗವ ಪೂಜಿಸುತ್ತಮಿಗೆಯರ್ಚಿಸಿ ಪಾಡುತ ಕೀರ್ತಿಸುತ ಕೇಳ್
ಲಿಂಗವ ಹಿಂಗದಿಂತು ಸಹಕೂಟದೊಳಿರುತಿರ್ಪ ಭಾಗ್ಯಮಂ
ಮಂಗಳಮೂರ್ತಿ ಚಿತ್ತೈಸು ಶಾಂತ ಮಹಾಘನಲಿಂಗ ಶಾಶ್ವತಂ ॥ ೧ ॥
ಲಿಂಗರಗಳೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಲಿಂಗದ ಸ್ತುತಿ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೨ ರಗಳೆಗಳು, ಗಣನಾಮ ಸ್ತೋತ್ರದ ತ್ರಿವಿಧಿ ಮೊದಲಾದ ೭ ತ್ರಿವಿಧಿಗಳು ಮತ್ತು ಶೀಲವಂತಯ್ಯನ ಆತ್ಮಲಿಂಗ ಸಂಯೋಗಸ್ಥಲವಿದೆ.

—ಜಿಜಿಎಂ

736

| ಕೆ. ೧೩೭೬/೯ | ಲಿಂಗರಗಳೆ | ರಗಳೆ |
|---|---|---|
| ೨.೧″ × ೮.೮″ | ? | ? |
| ೨೨–೨೩ ಪತ್ರ | ೧೦ ಪಂಕ್ತಿ | ೩೮ ಅಕ್ಷರ |

ಆದಿ : ಗುರು ಬಸವಲಿಂಗಾಯ ನಮಃ ॥ ತರಳವೃತ್ತ ॥
ನಗಸುತಾಚ್ಛವಿಮೋದ ಮಂಜುಳವಾರ್ಧಿಪೂರ್ಣನಿಶಾಪತೆ
ಶಿರಸಿ ದೇವತರಂಗಿಣೀಧರ ಫಾಳಲೋಚನ ಧೂರ್ಜಟಿ
ವಿನತ ವಾಸವನಂದನೇಷ್ಟದ ವೇದಘೋಟಕ ಗೋಪತೆ
ಯಜನತೋಷ ನಮಶ್ಶಿವಾಯ ಸುಭಕ್ತವತ್ಸಲ ದೇತತೆ ॥ ೧ ॥
ವುತ್ಸಾಹರಗಳೆ ॥
ಸೂರರೂಜಸಕ್ರ ರಾಜನಯನ ತೇ ನಮಶಿವಾಯ ನಿತ್ಯ
ಮೇರು ಚಾಪ ಮರಣಲೋಪ ತೇ ನಮಶ್ಶಿವಾಯ ನಿತ್ಯ ॥ ೧ ॥

ಅಂತ್ಯ : ವಸಂತ ತಿಲಕ
ಯಜ್ಞಾಭಿಧಾನವರ ತೀರ್ಥತಪೋವಿಧಾನಂ
ಬತ್ತೀಶ ಚಾರುನುತಿ ಸತ್ಪಠನಸ್ಯ ಸಾಮ್ಯಂ
ನಾಸ್ತಿ ಪ್ರಪಂಚವಿಜಯೋಜ್ವಲಮುಕ್ತಿಸೌಖ್ಯಂ
ಸಾಧ್ಯಂ ಶಿವೈಕಮಂತಳಂ ವಿಮಳಂ ಯಥಾ ತ್ಥಂ ॥ ೧ ॥
ಲಿಂಗರ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಲಿಂಗದ ಸ್ತುತಿ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೨ ರಗಳೆಗಳು, ಗಣನಾಮಸ್ತೋತ್ರ ತ್ರಿವಿಧಿ ಮೊದಲಾದ ೭ ತ್ರಿವಿಧಿಗಳು ಮತ್ತು ಶೀಲವಂತಯ್ಯನ ಆತ್ಮಲಿಂಗಸಂಯೋಗ ಸ್ಥಲವಿದೆ.

—ಜಜಿಎಂ

## 737

| | | |
|---|---|---|
| ಕೆ. ೧೪೩೦/೭ | ಲಿಂಗರಗಳೆ | ರಗಳೆ |
| ೮.೭″×೧.೩″ | ? | ? |
| ೪೬–೫೪ ಪತ್ರ | ೫ ಪಂಕ್ತಿ | ೨೫ ಅಕ್ಷರ |

ಆದಿ : ಶ್ರೀಗುರು ಬಸವಲಿಂಗಾಯ ನಮಃ ॥ ಲಿಂಗ ರಗಳೆ ॥ ವೃತ್ತ
ಪರಶಿವಲಿಂಗವಪ್ರತಿಮಲಿಂಗ ನಿರಾಕುಳ ಲಿಂಗ ಗಾಂಭೀರ
ನಿರವಯಲಿಂಗ ಭೇದ್ಯತರಲಿಂಗ ಸದಾಶಿವಲಿಂಗ ಸೌಖ್ಯದಾ
ವುರುತ್ತರಲಿಂಗ ಯಿಂದುಧರಲಿಂಗ ಸುರಾರ್ಚಿತಲಿಂಗ ಭರ್ಗ
ನಿರತಲಿಂಗ ಚಿತ್ಸೈಸು ಶಾಂತ ಮಹಾ ಘನಲಿಂಗ ಶಾಶ್ವತಂ ॥
ಶ್ರೀಗುರುಶಾಂತ ಮಹಾ ಘನಲಿಂಗಂ
ರಾಗದೊಳಿಂನ ಮನೋರತಲಿಂಗಂ ॥ ೧ ॥
ಭಕ್ತರ ಹೃತ್ಕಮಲಾರ್ಕನಲಿಂಗಂ
ಮುಕ್ತಿ ಚಿದಾಸ್ರಯ ಸುಖಮುಖಲಿಂಗಂ ॥ ೨ ॥

ಅಂತ್ಯ : ಲಿಂಗವನಾವಗಂ ಬಿಡದೆ ಹಸ್ತದೊಳಾಂತು ನಿರೀಕ್ಷಿಸುತಾ
ಲಿಂಗವ ಪೂಜಿಸುತ್ತಾ ಮಿಗೆಯರ್ಚಿಸಿ ಪಾಡುತ ಕೀರ್ತಿಸುತ್ತ ಕೇಳ್
ಲಿಂಗವಹಿಂಗದಿಂತು ಸಹಕೂಟದೊಳಿರುತಿರ್ಪ ಭಾಗ್ಯಮಂ
ಮಂಗಳಮೂರ್ತಿ ಚಿತ್ಸೈಸಂ ಶಾಂತ ಮಹಾಘನಲಿಂಗ ಶಾಶ್ವತಂ
ಲಿಂಗ ರಗಳೆ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ.

ವಿಷಯ : ಲಿಂಗದ ಸ್ತುತಿ.

ವಿಶೇಷ : ಸಮಗ್ರ. ಇದೇ ಕಟ್ಟಿನಲ್ಲಿ ಗುರುರಗಳೆ ಮೊದಲಾದ ೧೦ ಕೃತಿಗಳಿವೆ.

—ಜಜಿಎಂ

## 738

| ಕೆ. ಎ. ೫೬೩/೨ | ಲಿಂಗರಗಳೆ | ರಗಳೆ |
|---|---|---|
| ೧೧″ × ೯″ | ? | ? |
| ೧–೫ ಪುಟ | ೨೦ ಪಂಕ್ತಿ | ೨೫ ಅಕ್ಷರ |

**ಆದಿ :** ಶ್ರೀ ಗುರು ಬಸವಲಿಂಗಾಯ ನಮಃ ಲಿಂಗರಗಳೆ ॥ ವೃ.
ಅಪ್ರತಿಮಲಿಂಗ ನಿರಾಕುಳಲಿಂಗಾ ಗಂಭೀರ ನಿರಾವಲಯಲಿಂಗ
..... ಸದಾಶಿವಲಿಂಗ ಸಾವ್ಯರುತರಲಿಂಗಾ
......ಂದುಂಧರಲಿಂಗ ಸುರಾರ್ಚಿತಲಿಂಗ ಭರ್ಗ ನಿರಂತರ ಗುರುಲಿಂಗ
..... ಚಿತ್ತೈಸು ಶಾಂತ ಮಹಾಘನಲಿಂಗ ಸಾಶ್ವತಂ ॥ ೧ ॥

ಮಂದಾನಿಲ ರಗಳೆ :
ಶ್ರೀ ಗುರುಃಶಾಂತ ಮಹಾಘನಲಿಂಗಂ । ರಾಗದೊಳೆನ್ನ ಮನೋರಥಲಿಂಗಂ । ಭಕ್ತರ ಹೃತ್ಕಮಲಾರ್ಕಾನುಲಿಂಗಂ । ಮುಕ್ತಿಚಿದಾಶ್ರಯಃ ಸುಖ ಮುಖ ಲಿಂಗಂ ॥ ೨ ॥

**ಅಂತ್ಯ :** ಲಿಂಗವನಾವಾಗ ಬಿಡದೆ ಹಸ್ತದೊಳಾಂತು ನಿರೀಕ್ಷಿಸುತ್ತಲಂ । ಲಿಂಗವ ಪೂಜಿಸುತ್ತ ಮಿಗೆಯರ್ಚಿಸಿ ಪಾಡುತ ಕೀರ್ತಿಸುತ್ತ ಕೇಳ್ । ಲಿಂಗವ ಹಿಂಗದಿಂತು ಸಹಕೂಟದೊಳಿಂತಿರ್ಪ ಭಾಗ್ಯಮಂ । ಮಂಗಳಮೂರ್ತಿ ಚಿತ್ತೈಸು ಶಾಂತ ಮಹಾಘನಲಿಂಗ ಸಾಶ್ವತಂ ॥ ೮೧ ॥
ಲಿಂಗರಗಳೆ ಸಮಾಪ್ತಂ ಮಂಗಳ ಮಹಾ ಶ್ರೀ.

**ವಿಷಯ :** ಲಿಂಗದ ಮಹಿಮೆ.

**ವಿಶೇಷ :** ಹಸ್ತಪ್ರತಿ. ಉತ್ತಮವಾಗಿದೆ.

—ಹಕರಾ

## 739

| ಕೆ. ೧೧೫೫/೨ | ಲಿಂಗಲೀಲಾವಿಲಾಸ ಚಾರಿತ್ರ | ವಚನ, ಟೀಕು |
|---|---|---|
| ೧೭″ × ೨″ | ಕಲ್ಲುಮಠದ ಪ್ರಭುದೇವ | ಸು. ೧೪೩೦ |
| ೯೭–೧೯೬ ಪತ್ರ | ೧೪ ಪಂಕ್ತಿ | ೯೨ ಅಕ್ಷರ |

**ಆದಿ :** ಶ್ರೀ ಗುರೋಭ್ಯೋ ನಮಃ ॥ ಶುಭಮಸ್ತು ॥ ನಿರಂತರಾಯೋಸ್ತು ॥ ಲಿಂಗ ಲೀಲಾವಿಲಾಸ ಚಾರಿತ್ರ ॥ ಯಿಾ ಲಿಂಗಲೀಲಾವಿಲಾಸದ ಚಾರಿತ್ರದ ಪರಿ ಯಾಯವೆಂತೆಂದಡೆ । ಪ್ರಥಮದಲ್ಲಿ ನಿಷ್ಕಲ ಲಿಂಗಸ್ಥಲ । ದ್ವಿತೀಯದಲ್ಲಿ ಮಹಾಲಿಂಗಸ್ಥಲ ॥ ತೃತೀಯ್ಯದಲ್ಲಿ ಲಿಂಗಮೂರ್ತಿಸ್ಥಲ । ಚತುರ್ಥದಲ್ಲಿ ಲಿಂಗಸ್ಥಲ । ಪಂಚಮದಲ್ಲಿ ಸಂಸಾರ ಸಂಬಂಧ ಸ್ಥಲ । ಷಷ್ಠಮದಲ್ಲಿ

ಪಿಂಡಸ್ಥಲ। ಸಪ್ತಮದಲ್ಲಿ ಪಿಂಡಜ್ಞಾನಸ್ಥಲ। ಅಷ್ಟಮದಲ್ಲಿ ಸಂಸಾರ ಹೇಯಸ್ಥಲ। ನವಮದಲ್ಲಿ ಗುರುಕರುಣಸ್ಥಲ। ದಶಮದಲ್ಲಿ ಭಕ್ತಿಸ್ಥಲ। ಏಕಾದಶದಲ್ಲಿ ಮಹೇಶ್ವರಸ್ಥಲ। ಚತುರ್ದಶದಲ್ಲಿ ಶರಣಸ್ಥಲ। ಪಂಚಾದಶ ದಲ್ಲಿ ಐಕ್ಯಸ್ಥಲ। ಷೋಡಶದಲ್ಲಿ ಸ್ವಲೀಲಾನಂದ ಭಕ್ತಿಸ್ಥಲ। ಇಂತು ಹದಿನಾಱಱಲ್ಲಿ ಲಿಂಗಲೀಲಾ ವಿಲಾಸ ಚಾರಿತ್ರ ಸಂಪೂರ್ಣ ॥

ಅಂತ್ಯ: ಅಂತು ಮಹಾ ಘನವಸ್ತು ತನ್ನ ಸ್ವಲೀಲೆಯಿಂದ ಲಿಂಗಾಂಗವೆರಡಾಗಿ। ಪೂಜ್ಯಪೂಜಕನಾಗಿ। ಆಚರಿಸುವ। ಸ್ವಯಿಚ್ಛ್ಯಾಚಾರವೆ। ಸ್ವಲೀಲಾನಂದ ಭಕ್ತಿಯೆನಿಸಿತ್ತು। ಅಂತು ನಿಷ್ಕಲವಸ್ತು। ತನ್ನ ಸ್ವಲೀಲೆಯಿಂದ। ಮೂರ್ತಿಯಾಗಿ। ಲಿಂಗಾಂಗಭೇದವೆಂತುಟೆಂದೊಡೆ। ಶಿವನು ಸರ್ವಕಲಾ ಸಂಪೂರ್ಣನಾದ ಕಾರಣದಿಂದ। ತನ್ನ ಸರ್ವಕಲಾ ಸಂಪೂರ್ಣತ್ವದೊಳಗೆ। ವೊಂದು ಕಡಮೆಯಾಗಿರಬಾರದೆಂಬ ಚದುರಿನಿಂದ ನಿಷ್ಕಲನಾಗಿ। ಸಕಲ ನಿಷ್ಕಲನಾಗಿ। ಸಕಲನಾಗಿ। ಲಿಂಗವಾಗಿ। ಅಂಗವಾಗಿ। ಶಕ್ತಿಯಾಗಿ। ಭಕ್ತಿಯಾಗಿ। ಪದಾರ್ಥವಾಗಿ। ಪ್ರಸಾದವಾಗಿ। ಸಕಲ ನಿಷ್ಕಲಾ ನಂದಂಗಳಲ್ಲಿ। ನಿತ್ಯಸಂದನಾಗಿ ನಡಿಸಿಟ್ಟ ಶಿವನ। ಸರ್ವಕಲಾ ಸಂಪೂರ್ಣದ ಚಾರಿತ್ರವಂ। ಪುರಾತನರ ವಚನಗಳಿಂದ। ಸ್ಥಲವಿಟ್ಟು ಹೇಳಿದ ಸ್ಥಲ ಹದಿನಾಱು। × × × ಆ ಲಿಂಗವಿಲಾಸದ ಚಾರಿತ್ರವೆ। ಶರಣ ಚಾರಿತ್ರವೆಂದು। ಪುರಾತನರ ವಚನಂಗಳಿಂದ ಕಾಣಲಾಯಿತ್ತಾಗಿ। ಮಿಕ್ಕಿನ ವೇದಾಗಮಂಗಳು। ಜಿಡ್ಡುಗೋಜಡೆಂದು ಅವಬಿಟ್ಟು ಪುರಾತನರ ವಚನ ಯೇಳುನೂಱಯೆಪ್ಪತ್ತಗದಕೊಂಡು ಷೋಡಸಸ್ಥಲ ಪರಿಶ್ರಮದಿಂದ ಸೇರಿಸಿ। ವ್ಯಾಖ್ಯಾನ ಮಾಡಿದ ವಿದ್ಯಾನಗರದ। ಕಲ್ಲಮಠದ ಪ್ರಭು ದೇವಾರ್ಯನು। ಯಿದಱ ನಾಮ ಲಿಂಗಲೀಲಾ ವಿಲಾಸ ಚಾರಿತ್ರ। × × ಶ್ರೀ ಮಹಾಮೇರುವಿನ ದಕ್ಷಿಣಭಾಗದಲ್ಲಿ ವೊಪ್ಪುತಿರ್ಪ ಕಲ್ಯಾಣಪಟ್ಟಣದ ಹಾಳಿನ ಹರೆಯ ಹಂಪಯ್ಯನವರು ಚಿಕ್ಕಹಂಪಯ್ಯ ಅಯ್ಯನವರು ಗುಮ್ಮಳಾಪುರದ ಚೆನ್ನಮಲ್ಲಿಕಾರ್ಜುನ ದೇವರ ಶಿಷ್ಯರು ವಿರಕ್ತ ಚೆಡೆಸಿದ್ಧ ಲಿಂಗ ದೇವರು ಅಯ್ಯನವರಿಗೆ ಬರೆಯಿಸಿ ಭಕ್ತಿಮಾಡಿದ ಲಿಂಗಲೀಲಾ ವಿಲಾಸ ಚಾರಿತ್ರ ಸಂಪೂರ್ಣ. ಮಂಗಳ ಮಹಾ ಶ್ರೀ.

ವಿಷಯ: ಷಟ್ಸ್ಥಲ ಸಿದ್ಧಾಂತ.

ವಿಶೇಷ ಸ್ಫುಟಾಕ್ಷರ. ಶಕಟರೇಫದ ಬಳಕೆಯಿದೆ. ಇದೇ ಕಟ್ಟಿನಲ್ಲಿ ಪ್ರಭುದೇವರ ಟೀಕಿನ ವಚನ ಮತ್ತು ಏಕೋತ್ತರ ಶತಸ್ಥಲ ಕೃತಿಗಳಿವೆ.

—ವೈಸಿಬಿ

740

| ಕೆ. ೧೧೬೭೨ | ಲಿಂಗಲೀಲಾವಿಲಾಸ ಚಾರಿತ್ರ | ವಚನ, ಟೀಕು |
|---|---|---|
| ೯.೫" × ೧.೮" | ಕಲ್ಲುಮಠದ ಪ್ರಭುದೇವ | ಸು. ೧೪೫೦ |
| ೧–೧೭೮ ಪತ್ರ | ೧೧ ಪಂಕ್ತಿ | ೪೮ ಅಕ್ಷರ |

**ಆದಿ :** ಶ್ರೀ ಗುರುಬಸವಲಿಂಗಾಯ ನಮಃ ॥ ಲಿಂಗಲೀಲಾವಿಲಾಸ ಚಾರಿತ್ರ ॥ ಯಿಾ ಲಿಂಗಲೀಲಾವಿಲಾಸದ ಪರಿಕ್ರಮವೆಂತೆಂದಡೆ। ಪ್ರಥಮದಲ್ಲಿ ನಿಃಕಲ ಲಿಂಗ ಸ್ಥಲ। ಯರಡನೆಯಲ್ಲಿ ಮಹಾಲಿಂಗಸ್ಥಲ। ಮೂರನೆಯಲ್ಲಿ ಲಿಂಗ ಮೂರ್ತಿಸ್ಥಲ। ನಾಲ್ಕನೆಯಲ್ಲಿ ಅಂಗಸ್ಥಲ। ಅಯಿದನೆಯಲ್ಲಿ ಸಂಸಾರ ಮಂದಸ್ಥಲ। ಆಱನೆಯಲ್ಲಿ ಪಿಂಡಸ್ಥಲ। ಯೇಳನೆಯಲ್ಲಿ ಪಿಂಡಜ್ಞಾನಸ್ಥಲ। ಎಂಟನೆಯಲ್ಲಿ ಸಂಸಾರ ಹೋಹಾಸ್ಥಲ। ವೊಂಬತ್ತನೆಯಲ್ಲಿ ಗುರುಕರುಣ ಸ್ಥಲ। ಹತ್ತನೆಯಲ್ಲಿ ಭಕ್ತಿಸ್ಥಲ। ಹನ್ನೊಂದನೆಯಲ್ಲಿ ಮಾಹೇಶ್ವರಸ್ಥಲ। ಹನ್ನೆರಡನೆಯಲ್ಲಿ ಪ್ರಸಾದಿಸ್ಥಲ। ಹದಿಮೂಱನೆಯಲ್ಲಿ ಪ್ರಾಣಲಿಂಗೀಸ್ಥಲ। ಹದಿನಾಲ್ಕನೆಯಲ್ಲಿ ಶರಣಸ್ಥಲ ॥ ಹದಿನೈದನೆಯಲ್ಲಿ ಐಕ್ಯಸ್ಥಲ। ಹದಿನಾಱನೆ ಯಲ್ಲಿ ಸ್ವಲೀಲಾನಂದ ಭಕ್ತಿಸ್ಥಲ। ಯಿಂತು ಹದಿನಾಱರಲ್ಲಿ ಲಿಂಗಲೀಲಾ ವಿಲಾಸ ಚಾಱಿತ್ರ ಸಂಪೂರ್ನವಾಯಿತ್ತು।

**ಅಂತ್ಯ :** ಪುರಾತನರ ವಚನ ಯೇಳುನೂಱುಯೆಪ್ಪತ್ತ ತೆಗೆದುಕೊಂಡು। ಷೋಡಶ ಸ್ಥಲ ಪರಿಕ್ರಮದಿಂದ ಸೇರಿಸಿ। ವ್ಯಾಖ್ಯಾನವ ಮಾಡಿದ। ವಿದ್ಯಾನಗರದ ಕಲ್ಲುಮಠದ ಪ್ರಭುದೇವಾರ್ಯ್ಯನೂ। ಇದರ ನಾಮ ಲಿಂಗಲೀಲಾವಿಲಾಸ ಚಾರಿತ್ರ। ಯಿಾ ಲಿಂಗಲೀಲಾವಿಲಾಸ ಚಾರಿತ್ರವನೂ। ಶಿವಶರಣರು ತಂಮ ಚಾರಿತ್ರವೆಂದು ತಂಮ ನಿಜವೆಂದು। ತಂಮ ಮಹತ್ವವೆಂದು। ಅಱಿದು। ಆನಂದಿಸುವ ಶಿವಗಣಂಗಳಿಗೆ। ಸಮರ್ಪಿತವಾಯಿತ್ತೆಂದಱಿದು। ವೊಪ್ಪು ಗೊಂಬ ಶರಣರಿಗೆ ಶರಣೆನುತಿರ್ದೆನೂ। ಯಿಾ ಲಿಂಗಲೀಲಾವಿಲಾಸ ಚಾರಿತ್ರವನೂ। ಬರದೋದಿ ಕೇಳಿ। ಅಱಿದು ಆನಂದಿಸುವ ಭಕ್ತ ಜನಂಗಳಿಗೆ। ಇಹಪರದ ಸುಖವಂ ಕೊಡುವ ಧಾತ್ರವಪ್ಪ ಶಿವಪದವಂ। ಪುರಾತನರ ಕೊಡುವುದೀ ವಚನ ಪ್ರಸಾದ। ಶಿವಗಣಂಗಳಿಗೆ.ಶರಣನೊಪ್ಪು ಗೊಂಬುದೂ ಶುಭಮಂಗಳ ಮಹಾ ಶ್ರೀ. ಯಿಾವ ಸಂವತ್ಸರದ ಚಯಿತ್ರ ಬಹುಳ ವಿರಕ್ತ ಬರಹದ ಚೆನ್ನಮಲ್ಲಿಕಾರ್ಜುನದೇವರಿಗೆ ಗುರುವಂಣ ನೋದಿರದ। ಲಿಂಗಲೀಲಾವಿಲಾಸ ಚಾರಿತ್ರದ ಪುಸ್ತಕಕ್ಕಂ ಮಂಗಳ ಮಹಾ ಶ್ರೀ.

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಸಮಗ್ರ. ಶಕಟರೇಫದ ಪ್ರಯೋಗವಿದೆ.

—ವೈಸಿಬಿ

741

ಕ. ೧೪೦೪/೧ | ಲಿಂಗ ಲೀಲಾವಿಲಾಸ ಚಾರಿತ್ರ | ವಚನ, ಟೀಕು
೧೫.೫" × ೨" | ಕಲ್ಲುಮಠದ ಪ್ರಭುದೇವ | ಸು. ೧೪೩೦
೧–೧೦೩ ಪತ್ರ | ೧೨ ಪಂಕ್ತಿ | ೧೦೫ ಅಕ್ಷರ

**ಆದಿ :** ಶ್ರೀ ಗುರುಸಿದ್ಧ ಒಸವೇಶ್ವರನ ಪಾದವೇ ಗತಿ। ಬಸವೇಶ್ವರನು ಚೆಂನ ಬಸವೇಶ್ವರನು ಅಲ್ಲಮಪ್ರಭುದೇವರು ಸಿದ್ಧರಾಮೇಶ್ವರದೇವರು ಮಡಿವ ಳಯ್ಯಗಳು ಅಕ್ಕಮಹಾದೇನಿ ಅಸಂಖ್ಯಾತ ಮಹಾಗಣಂಗಳು ಪ್ರಮಥ ಗಣಂಗಳಂ ರುದ್ರಗಣಂಗಳಿಗೆ ಶರಣು ಶರಣಾರ್ತಿ ॥ ಲಿಂಗಲೀಲಾವಿಲಾಸ ಚಾರಿತ್ರ ॥ ಲಿಂಗಲೀಲಾವಿಲಾಸದ ಪರಿಯಾಯವೆಂತೆಂದಡೆ। ಪ್ರಥಮದಲ್ಲಿ ನಿಃಷ್ಕಲ ಲಿಂಗಸ್ಥಲ। ಎರಡನೆಯಲ್ಲಿ ಮಹಾಲಿಂಗಸ್ಥಲ × × × ಆ ಷಡುಸ್ತಲ ಮಾರ್ಗವೆ ಲಿಂಗಲೀಲಾವಿಲಾಸ ಚಾರಿತ್ರವೆಂದೂ ನಿರೂಪಿಸಿ। ಗುರು ವಚನವಿಡಿದು ಗುರುಪ್ರಸಾದ ಜ್ಞಾನದಿಂದಾ ವಿದ್ಯಾನಗರದ ಕಲ್ಲಂಮಟ್ಟದ ಪ್ರಭುದೇವಾರ್ಯ್ಯನೂ। ಪುರಾತನರ ವಚನಂಗಳಲ್ಲಿಯ್ಯಾ। ಸಾರವಾದ ವಚನಂಗಳಂ ತೆಕ್ಕೊಂಡು ಶೋಡಷಸ್ತಲ ಪರಿಕ್ರಮದಿಂದ ಸೇರಿಸಿ ಅರ್ಥೈಸಿದ ವಚನಾನುಗಮವಿದೂ।

**ಅಂತ್ಯ :** ವಿಂತು ಹೇಳಿದ ಸ್ಥಲ ಹದಿನಾಱು। ಅಂತು ಹದಿನಾಱು ಸ್ಥಲಂಗಳು। ಲಿಂಗಲೀಲಾವಿಲಾಸ ಚಾರಿತ್ರ। ಆ ಲಿಂಗಲೀಲಾವಿಲಾಸ ಚಾರಿತ್ರವೇ। ಶರಣ ಚಾರಿತ್ರವೆಂದು। ಪುರಾತನರ ವಚನಂಗಳೆಂದು ಕಾಣಬರಯಿತ್ತಾಗಿ। ಮಿಕ್ಕಿನ ವೇದಾಗಮಂಗಳು। × × ಪುರಾತನರ ವಚನ ಯೇಳುನೂಱ ಎಪ್ಪತ್ತು। ತೆಗದುಕೊಂಡು ಷೋಡಸ್ಥಲ ಪರಿಕ್ರಮದಿಂದ ಸೇರಿಸಿ ವ್ಯಾಖ್ಯಾನವ ಮಾಡಿದ ವಿದ್ಯಾನಗರದ ಕಲ್ಲಮಠದ ಪ್ರಭುದೇವಾರ್ಯ್ಯನು। ಯಿಾ ನಾಮ ಲಿಂಗಲೀಲಾವಿಲಾಸ ಚಾರಿತ್ರ ××× ಲಿಂಗಲೀಲಾವಿಲಾಸ ಚಾರಿತ್ರವಂ ಸಂಪೂರ್ಣಂ ಮಂಗಳ ಮಹಾ ಶ್ರೀ ॥ ವಿಕೃತಿ ಸಂವತ್ಸರದ ಆಸವಿಜ ಶುದ್ಧ ಬಹುಳ ಬಿದಿಗೆಯ ಮಂಗಳವಾರದ ಮಹೂತ್ರಂ ಗಳಿಗೆಯಲು ಲಿಂಗಲೀಲಾವಿಲಾಸ ಚಾರಿತ್ರವೆಂಬ ಶಿವಶಾಸ್ತ್ರದ ಪುಸ್ತಕವು ಲೇಖನವಾಗಿ ಸಮಾಪ್ತವಾಯಿತ್ತು ಮಂಗಳ ಮಹಾ ಶ್ರೀ ॥

**ವಿಷಯ :** ಷಟ್ಸ್ಥಲ ಸಿದ್ಧಾಂತ.

**ವಿಶೇಷ :** ಸಮಗ್ರ ಪ್ರತಿ. ಸುಂದರಾಕ್ಷರ. ಶಕಟರೇಫದ ಬಳಕೆಯಾಗಿದೆ. ಇದ ರೊಂದಿಗೆ ಏಕೋತ್ತರ ಶತಸ್ಥಲವೆಂಬ ಬೇರೊಂದು ಕೃತಿಯೂ ಇದೆ.

—ಎಂಪಿಎಂ

